# ಅಂತರ್ವಾಹಿನಿ

ಶರ್ವಾಣಿ

ಪ್ರತಿಭಾ ಪ್ರಿಂಟರ್ಸ್ ಅಂಡ್ ಪಬ್ಲಿಷರ್ಸ್
ನಂ. 373, 9ನೇ ಮುಖ್ಯರಸ್ತೆ (ಪೈಪ್‌ಲೈನ್)
ಹನುಮಂತನಗರ, ಬೆಂಗಳೂರು – 560 019

**ANTARVAHINI** : Short stories written by **Sharvani,** published by **Prathibha Printers & Publishers**, No. 373, 9th Main, Pipe Line Road, Hanumantha Nagar, Bangalore - 560 019.

| | |
|---|---|
| ಪ್ರಥಮ ಮುದ್ರಣ | : 2013 |
| ಮುಖಪುಟ | : ಮೋನಪ್ಪ |
| ಪುಟಗಳು | : 240 |
| ಹಕ್ಕು | : ಲೇಖಕರದು |
| ಪ್ರತಿಗಳು | : 1000 |
| ಬೆಲೆ | : ರೂ. 168–00 |
| ಪುಸ್ತಕದ ಅಳತೆ | : 1/8 ಕ್ರೌನ್ |
| ಉಪಯೋಗಿಸಿದ ಕಾಗದ | : ಮ್ಯಾಪ್ಲಿತೋ 70 ಜಿ.ಎಸ್.ಎಂ. |

ಮುದ್ರಣ :
ಪ್ರತಿಭಾ ಪ್ರಿಂಟರ್ಸ್
ನಂ. 373, 9ನೇ ಮುಖ್ಯರಸ್ತೆ (ಪೈಪ್‌ಲೈನ್)
ಹನುಮಂತನಗರ, ಬೆಂಗಳೂರು – 19

# ಮುನ್ನುಡಿ

ಭಾಷೆಗಳ ಅಂತರವಿಲ್ಲದೆ, ವಿಶ್ವಜನೀನತೆಗೆ ಆದ್ಯತೆಯನ್ನು ಕೊಟ್ಟು, ಸಾಹಿತ್ಯ ವನದ ಸಂಚಾರವನ್ನು ಸ್ವೇಚ್ಛೆಯಾಗಿ ಮಾಡಿ, ತಾವು ಮೆಚ್ಚಿದ ಸುಂದರವಾದ ಹೂಗಳನ್ನಾರಿಸಿಕೊಂಡು, ಪಾಠಕ ದೇವರುಗಳಿಗೆ ಅರ್ಪಿಸಲಿಚ್ಛಿಸಿದ ಶರ್ವಾಣಿಯವರ ಆಸೆಯನ್ನೀಡೇರಿಸಲು ನೆರವಾಗಿ, ಸುಂದರವಾಗಿ ಮಾಲಿಕೆಯನ್ನಾಗಿ ಮಾಡಿ ಆವಿಷ್ಕರಿಸಿದ ಪ್ರತಿಭಾ ಪ್ರಿಂಟರ್ಸ್‌ನವರಿಗೆ, ಶರ್ವಾಣಿ ಕುಟುಂಬದವರಾದ ನಾವು ಚಿರಋಣಿಗಳು.

ಈ ಮಾಲಿಕೆಯಲ್ಲಿ – ಪ್ರೀತಿ, ಪ್ರೇಮ, ಮಾನವೀಯತೆ, ಅಂತರ್ಮಥನ, ಅರ್ಥ – ಅಪಾರ್ಥ, ಜೀವನದ ಸತ್ಯಾಂಸ, ಹತಾಶೆ, ಆದರ್ಶ, ಲೇಖಕರ ಅಂತರಂಗಗಳು..... ಇತ್ಯಾದಿ ಭಾವನೆಗಳ ಆವಿಷ್ಕಾರ ತುಂಬಾ ಸಹಜವಾದ ರೀತಿಯಲ್ಲಿ ಮಾಡಲಾಗಿದೆ. ಓದುಗರು ಕಥಾಲೋಕದಲ್ಲಿ ವಿಹರಿಸಿ, ವಿಶ್ಲೇಷಿಸಿ, ಆನಂದಿಸಬಲ್ಲರೆಂಬ ನಂಬಿಕೆಯಿದೆ.

– *ಉಮಾರವಿ*

# ವಿಷಯಸೂಚಿಕೆ

# ಅಂತರ್ವಾಹಿನಿ

ಮೂಲ : ಶ್ರೀಮತಿ ಜಿ. ರಾಜಲಕ್ಷ್ಮಿ

"ಠಂಗ್..... ಠಂಗ್..... ಠಂಗ್....."

ಪಕ್ಕದ ಮನೆಯ ಗೋಡೆ ಗಡಿಯಾರ ಹನ್ನೊಂದು ಬಡಿಯಿತು. ಇನ್ನೂ..... ಹನ್ನೊಂದೇನೇ? ಕಾಲ ಎಷ್ಟು ನಿಧಾನವಾಗಿ ಬಸವನ ಹುಳದಂತೆ ತೆವಳುತ್ತಾ ನಡೆಯುತ್ತಿದೆ. ಒಂದೊಂದು ಕ್ಷಣವೂ ನಿಧಾನವಾಗಿ ಸೋಮಾರಿಯಂತೆ..... ನಿಂತೇ ಹೋಗಿದೆಯೇನೋ ಅನ್ನಿಸುವಂತಾಗಿದೆ..... ಅಬ್ಬಬ್ಬಾ! ಎಷ್ಟು ಸೆಕೆ! ಬೆವರು ಸುರಿಯುತ್ತಿದೆ..... ಜತೆಗೆ ಸೊಳ್ಳೆಗಳು ಬೇರೆ..... ಅಯ್ಯೋ ದೇವರೇ..... ಇದೆಂತಹ ನರಕ! ಹೌದು ನರಕಾನೇ.....

ಮನುಷ್ಯ ಸತ್ತ ಮೇಲೆ ನರಕಕ್ಕೆ ಹೋಗುತ್ತಾನೆ ಅಂತಾರೆ. ನರಕ ಇದಕ್ಕಿಂತ ಭಯಂಕರವಾಗಿರುತ್ತದೆಯೇ?

ಊಹೂಂ..... ಇರಲಾರದು. ಖಂಡಿತ ಇರಲಾರದು. ಆ ನರಕದಲ್ಲಿ ಬಹುಶಃ ಇಲ್ಲಿಗಿಂತ ಸ್ವಲ್ಪ ಹಾಯಾಗಿರಬಹುದು. ಹೀಗೆ ಮಂಚಕ್ಕೇ ಅಂಟಿಕೊಂಡಂತೆ ಮಲಗಿ, ಕೈಕಾಲೂ ಸರಿಯಾಗಿ ಸ್ವಾಧೀನವಿಲ್ಲದೆ ಕಳೆಯುವುದು ಎಷ್ಟು ನರಕ ಎಂದು ಗೊತ್ತಾದರೆ ನರಕದಲ್ಲಿನ ನರಕಕ್ಕೆ ಮತ್ತೇನಾದರೂ ಹೆಸರನ್ನು ಇಡುತ್ತಿದ್ದರೇನೋ.....

ಹೌದು..... ಮೊನ್ನೆ ಕಾಮೇಶ್ವರಿ ಬಂದಾಗ ಏನಂದಳು?

"ಎಂಥಾ ನರಕ ಅನುಭವಿಸ್ತಾ ಇದೀಯಮ್ಮಾ" ಅಂತ. ಅವಳ ಮನಸ್ಸಿಗೂ ಇದು ನರಕ ಎಂದೇ ಭಾಸವಾಯಿತೇ?

ಆದರೆ ಕೋಮಲಿಗೆ ಹಾಗನ್ನಿಸುತ್ತಿಲ್ಲವಲ್ಲಾ! ಅವಳ ದೃಷ್ಟಿಯಲ್ಲಿ ತಾನು ಅನುಭವಿಸುತ್ತಿರುವುದು ರಾಜಯೋಗ! ಇಂತಹ ಅಸಹಾಯ ಪರಿಸ್ಥಿತಿಯಲ್ಲಿ ಬಿದ್ದಿರುವುದು ರಾಜಭೋಗವೇ? ರಾಜರು ಅನುಭವಿಸುವುದು ಇಂತಹ ರಾಜಭೋಗಗಳನ್ನೇ? ಬಿದ್ದೂ ಬಿದ್ದೂ ನಗೋಣವೆನಿಸುತ್ತದೆ. ಅಳಲಾರದೆ ನಗಬೇಕಷ್ಟೆ. ಅದಲ್ಲದೆ ಈಗ ತನ್ನ ಕೈಯಲ್ಲಿ ಇನ್ನೇನು ಮಾಡಲು ಸಾಧ್ಯವಿದೆ? ಅವೆರಡೇ ತನ್ನ ಕೈಲಾಗೋದು. ಅಳುವುದು, ನಗುವುದು. ಈ ಎರಡರಲ್ಲಿ ಅಳುವುದರಲ್ಲಿಯೇ ತನ್ನ ಹೆಚ್ಚು ಕಾಲ ಕಳೆದು ಹೋಗುತ್ತಿದೆ.

ಅಲ್ಲಾ ಮೊನ್ನೆ ತನ್ನ ಹಿರಿಯ ಸೊಸೆ ವನಜಾಕ್ಷಿ ಬಂದಾಗ ತನಗೇಕೆ ಅಷ್ಟು ದುಃಖ ಉಕ್ಕಿ ಬಂದಿತ್ತು?

ತಾನಿಂತಹ ನಿಕೃಷ್ಟ ಪರಿಸ್ಥಿತಿಯಲ್ಲಿರುವುದನ್ನು ನೋಡಿದಳಲ್ಲಾ ಎಂಬ ಭಾವನೆಯಿಂದಲೇ? ಇಲ್ಲಾ ನೋಡ್‌ದ್ಯಾ, ಎಂಥಾ ನರಕ ಅನುಭವಿಸ್ತಾ ಇದೀಯಾ. ಆಗೆಲ್ಲಾ ನನ್ನನ್ನ ಲಕ್ಷ್ಯ ಮಾಡದೆ ನಡಕೋತಾ ಇದ್ದೆಯಲ್ಲಾ, ಆಗಬೇಕಾದ್ದೇ, ಅನುಭವಿಸು' ಅಂತ ಒಳಗೊಳಗೇ ಅಂದುಕೊಳ್ಳುತ್ತಿದ್ದಾಳೇನೋ ಎಂಬ ಸಂದೇಹದಿಂದಲೇ?

ಹೌದು, ಆಗೆಲ್ಲಾ ತಾನು ಹಾಗಂದುಕೊಂಡದ್ದು ನಿಜ. ತನಗೆ ಕೆಲಸವೆಂದರೆ ಸ್ವಲ್ಪವೂ ಕಷ್ಟವೆನಿಸುತ್ತಿರಲಿಲ್ಲ. ಎಷ್ಟೊಂದು ಕೆಲಸವನ್ನು ಸುನಾಯಾಸವಾಗಿ ಮಾಡುತ್ತಿದ್ದಳು! ಕೆಲಸದವಳು, ಅಗಸರವಳು, ಅಂತ ಯಾರನ್ನೂ ಇರಿಸಿಕೊಳ್ಳುತ್ತಿರಲಿಲ್ಲ. ವನಜಾಕ್ಷಿಯೇ ಆಗಲಿ, ಕೋಮಲಿ, ಜಾನಕಿ, ಸುಧ ಯಾರೇ ಆಗಲಿ, ತನಗೆ ಸಹಾಯ ಮಾಡಲು ಬಂದರೆ ನಿಮಗೆ ಯಾಕಮ್ಮಾ ಈ ಜಂಜಾಟ? ನಿಮ್ಮ ಮಕ್ಕಳ ಕೆಲಸ ನೀವು ನೋಡಿಕೊಳ್ಳಿ. ಮಿಕ್ಕಿದ್ದನ್ನು ನನಗೆ ಬಿಡಿ ಅನ್ನುತ್ತಿದ್ದಳು. ನಿಜ ಹೇಳಬೇಕೆಂದರೆ ಅವರು ಮಾಡುತ್ತಿದ್ದ ಕೆಲಸದ ರೀತಿ ತನಗೆ ಹಿಡಿಸುತ್ತಿರಲಿಲ್ಲ. ಎಲ್ಲಾ ಕೆಲಸಗಳನ್ನೂ ತನ್ನ ಕೈಯಿಂದ ಮಾಡಿದ ಹೊರತು ತೃಪ್ತಿಯಾಗುತ್ತಿರಲಿಲ್ಲ ತನಗೆ.

ಆ ಶಕ್ತಿಯೆಲ್ಲಾ ಎಲ್ಲಿ ಹೋಯಿತು?

ನಾಲ್ಕು ಜನ ಗಂಡುಮಕ್ಕಳನ್ನೂ ಇಬ್ಬರು ಹೆಣ್ಣು ಮಕ್ಕಳನ್ನೂ ಹೆತ್ತರೂ ಶರೀರ ದೃಢವಾಗಿಯೇ ಇತ್ತು. ಮಕ್ಕಳನ್ನೆಲ್ಲಾ ಇಷ್ಟೊಂದು ಮುದ್ದಿನಿಂದ, ಅಕ್ಕರೆಯಿಂದ ಬೆಳೆಸಿದ್ದಳು. ತನ್ನ ರಕ್ತ ಹಂಚಿಕೊಂಡು, ತನ್ನ ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳು, ಈ ಎದೆ ಹಾಲು ಕುಡಿದ ಮಕ್ಕಳು..... ಈ ದಿನ ಈ ಶರೀರವನ್ನು ಇದಕ್ಕೆ ಬಂದ ರೋಗವನ್ನು ನೋಡಿ ಅಸಹ್ಯ ಪಟ್ಟುಕೊಳ್ಳುತ್ತಿದ್ದಾರೆ..... ಭಗವಂತಾ, ನನಗೇಕೆ ಈ ಶಿಕ್ಷೆ? ನಾನೇನು ಪಾಪ ಮಾಡಿದ್ದೆ ದೇವರೇ..... ಎಂದು ಆಕ್ರೋಶಿಸುತ್ತಿತ್ತು ನನ್ನ ಮನಸ್ಸು.

ಕಣ್ಣೀರು..... ಕಣ್ಣುಗಳ ಕೊನೆಯಿಂದ ಹೊರಟ ಪ್ರವಾಹ, ಇದೇ ತನಗೆ ಮಿಕ್ಕದ್ದು. ತನ್ನ ಮೇಲೆ ಈ ಕಣ್ಣೀರಿಗೆಷ್ಟು ಕರುಣೆ? ಕರೆಯದಲೇ ಬಂದು ತನ್ನ ದಯಾ ರಸವನ್ನು ಪ್ರಸಾದಿಸುತ್ತಿದೆ. ಈ ಪ್ರಪಂಚದಲ್ಲಿ ತನಗೆ ಕಣ್ಣೀರಿನ ಹೊರತು ಮತ್ತಾರೂ ಆಪ್ತರೇ ಇಲ್ಲವೆನಿಸುತ್ತದೆ.

ಕಣ್ಣೀರನ್ನು ಒರೆಸಿಕೊಳ್ಳಬೇಕೆನಿಸುತ್ತದೆ. ಆದರೆ ಈ ಕೈ, ಮೇಲೇಳಲು ಎಷ್ಟು ಹಠ ಮಾಡುತ್ತಿದೆ? ಈಗ ಈ ರೀತಿ ಕೆಲಸಕ್ಕೆ ಬಾರದೆ ಬಿದ್ದಿರುವ ಈ ಕೈ ಒಂದಾನೊಂದು ಕಾಲದಲ್ಲಿ ಎಷ್ಟು ಒಳ್ಳೆಯ ಕೈ ಅಂತ ಹೆಸರು ಪಡೆದಿತ್ತು?

ಹಿರಿಯ ಮಗನಿಗೆ ಮಗು ಹುಟ್ಟಿದಾಗ "ನಿನ್ನ ತಣ್ಣನೆಯ ಕೈಯಲ್ಲಿ ಆಶೀರ್ವದಿಸಮ್ಮಾ" ಎಂದಿದ್ದ.

ನೆರೆಹೊರೆಯ ಮನೆಗಳಲ್ಲಿ ಶುಭಕಾರ್ಯಗಳು ನಡೆದಾಗ "ನೀವು ಬಂದು ನಿಮ್ಮ ಕೈಯಿಂದ ಅಕ್ಷತೆ ಹಾಕಿದರೆ ನಮಗೆ ತೃಪ್ತಿ" ಎಂದು ಬಲವಂತ ಮಾಡುತ್ತಿದ್ದರು.

ಮನೆ ಮುಂದಿನ ಕೈ ತೋಟದಲ್ಲಿನ ಹೂ ಗಿಡಗಳನ್ನು ನೋಡಿ "ನಿಮ್ಮ ಕೈ ಒಳ್ಳೇ ಕೈ, ನಿಮ್ಮ ಕೈಯಿಂದ ಸಸಿ ಹಾಕಿದರೂ ಬೀಜ ಹಾಕಿದರೂ ಗಿಡ ಚೆನ್ನಾಗಿ, ಸೊಂಪಾಗಿ ಬರುತ್ತೆ" ಎನ್ನುತ್ತಿದ್ದರು.

ತರಕಾರಿಯವಳು "ನಿನ್ನ ಕೈಯಿಂದ ಬೋಣಿ ಮಾಡು ತಾಯಿ, ಬುಟ್ಟಿಯೆಲ್ಲಾ ಬೇಗ ಖಾಲಿ ಆಗ್ತದೆ. ಬೋ ಒಳ್ಳೆ ಕೈ ನಿಂದು" ಅಂತಿದ್ದಳು.

ಈಗೆಲ್ಲಿ ಹೋಯಿತು ಆ ಅದೃಷ್ಟದ ಕೈ?

ಅದೃಷ್ಟದ ಜತೆಗೇ ಅದು ಕುಸಿದು ಬಿದ್ದುಹೋಗಿತ್ತು.

ಈಗ ತಾನೊಬ್ಬ ಶನಿ..... ಮತ್ತೊಬ್ಬರಿಗೆ ಭಾರ.

ಓಹೋ, ನೀನೇ, ಗೆಳತೀ, ಕಂಬನೀ ಬಾರಮ್ಮಾ, ಬಾ. ಅತಿ ಪ್ರಯತ್ನದಿಂದ ಎಡಗೈಯನ್ನು ಮೇಲೆತ್ತಿ ಕಣ್ಣೀರನ್ನು ಒರೆಸಿಕೊಂಡೆ.

ತುರಿತ, ಸೊಳ್ಳೆಗಳೋ ತಿಗಣೆಗಳೋ ಕಾಣೆ. ಬೆನ್ನೆಲ್ಲಾ ಕಡಿತ. ಚೆನ್ನಾಗಿ ಕೆರೆದುಕೊಳ್ಳೋಣವೆನಿಸುತ್ತಿದೆ. ಅಯ್ಯೋ ಹೇಗೆ? ಆ ಸೊಳ್ಳೆಗಳಿಗೆ ಕೂಡಾ ನನ್ನ ಮೇಲೆ ಎಷ್ಟು ಪ್ರೀತಿ? ರಾತ್ರಿ ಆಗುವುದೇ ತಡ, ನನ್ನನ್ನು ಮುತ್ತಿಕೊಂಡು ಹಿಂಸಿಸುತ್ತವೆ.

ಈ ಸೆಕೆ, ಸೊಳ್ಳೆ..... ಯಾರಾದರೂ ಸ್ವಲ್ಪ ಫ್ಯಾನ್ ಹಾಕಬಾರದಾ? ಇವುಗಳಿಂದ ತನಗೆ ವಿಮುಕ್ತಿ ಕರುಣಿಸಬಾರದೆ?

ಯಾರು? ಯಾರು? ಹಾಕುತ್ತಾರೆ? ಲೋ ಬಾಬೂ ಬಂದ್ಯಲ್ಲ ಬಾಪ್ಪಾ.....

ಗಾಢ ನಿದ್ರೆಯಲ್ಲಿರುವವನಿಗೆ ಈ ಮುದುಕಿಯ ಗೋಳು ಹೇಗೆ ಕೇಳಿಸೀತು? ತಾನು ಈ ನೋವು ಅನುಭವಿಸಲಾರದೆ ಗಟ್ಟಿಯಾಗಿ ಕೂಗಬೇಕು, ಆಗ ಕೇಳಿಸಿತು. ಸಿಡಿಮಿಡಿಗುಟ್ಟುತ್ತಾ ಬರುತ್ತಾರೆ ಆಗ.....

"ಏನಮ್ಮಾ ನಿನ್ನ ಗೋಳು?" ಅಂತಾನೆ ಬಾಬು.

ಹೌದು..... ತನ್ನದು ಗೋಳೇ! ಅವರನ್ನು ಗೋಳು ಹುಯ್ದುಕೊಳ್ಳುತ್ತಿದಾಳೆ ತಾನು!!

ಬಾಬು ಹಾಗಂದಾಗ ಕೋಪಕ್ಕೆ ಬದಲಾಗಿ ನಗುತ ಬರುತ್ತೆ. ಬಾಬು ಚಿಕ್ಕಂದಿನಲ್ಲಿ ಎಷ್ಟು ತುಂಟ ಹುಡುಗ, ಎಷ್ಟು ಹಟಮಾರಿ, ಎಷ್ಟು ಗಲಾಟೆ ಅವನದು. ಈಗ ದೊಡ್ಡವನಾಗಿ ತನ್ನನ್ನು ಹೀಗನ್ನುತ್ತಿದ್ದಾನೆ. ನಗು ಬರೋಲ್ಲವೇ ಮತ್ತೆ?

ಪಕ್ಕದ ಭಾಗದ ಮನೆಯ ಗಡಿಯಾರ ಒಂದು ಹೊಡೆಯಿತು. ಈಗಾಗಲೇ ಬೆಳಗಾಗುವುದಿಲ್ಲವೇ? ಇನ್ನೂ ಒಂದು ಗಂಟೇನೇ? ಇನ್ನೂ ಇಂತಹ ಕಾಳ ರಾತ್ರಿಗಳೆಷ್ಟನ್ನು ಕಾಣಬೇಕೋ? ಎಂದಿಗಾದರೂ ಬೆಳಕಿನ ಕಿರಣಗಳು ತನ್ನ ಬಾಳಿನಲ್ಲಿ ಇಣಿಕಿ ನೋಡುತ್ತವೆಯೇ?

ಎಂದಿಗೆ? ಇನ್ನೆಷ್ಟು ಯುಗಗಳಿಗೆ?

ಈ ಕತ್ತಲ ರಾತ್ರಿ ಎಂದಿಗೆ ಕಳೆಯುತ್ತದೆಯೋ ಎಂದು ತಾನು ಎದುರು ನೋಡುತ್ತಿದ್ದರೆ "ಅಬ್ಬಾ, ಆಗಲೇ ಬೆಳಗಾಯಿತೆ? ಇನ್ನು ಈ ಹಾಳು ದುಡಿತ ಮೊದಲಾಯಿತು" ಎಂದು ಬೇಸರದಿಂದ ಗೊಣಗಿಕೊಳ್ಳುತ್ತಾ ಮೇಲೇಳುತ್ತಾಳೆ ಕೋಮಲ.

ಹಾಳು ದುಡಿತವಂತೆ! ಹೌದು ದುಡಿತವಂತೆ! ಹೌದು ಮತ್ತೆ, ಸುಖ ಅನ್ನುವುದಕ್ಕೆ ನಿರ್ವಚನ ಎಲ್ಲಿದೆ? ಗ್ಯಾಸ್ ಸ್ಟವ್, ಮಿಕ್ಸಿ, ಕುಕ್ಕರ್, ಬಾಯಿಲರ್ ಬಂದರೂ ಮನುಷ್ಯನಿಗೆ ಸುಖ ಎಲ್ಲಿಯದು? ಗ್ಯಾಸ್ ಸ್ಟವ್ ಹಚ್ಚುವುದೂ ಕಷ್ಟ, ಕುಕ್ಕರನ್ನು ಸ್ಟವ್ ಮೇಲಿಡುವುದೂ ಕಷ್ಟ ಅಂದುಕೊಳ್ಳುವವರಿಗೆ ಇನ್ನು ವಿಮುಕ್ತಿ ಎಲ್ಲಿ?

ತನ್ನ ಕಾಲದಲ್ಲಿ..... ಹೌದು ಒಂದು ತಲೆಮಾರು ಕಳೆಯಿತಲ್ಲವೇ? ಅದು ತನ್ನ ಕಾಲಾನೇ ಮತ್ತೆ. ಬೆಳಗಿನ ಜಾವ ನಾಲ್ಕು ಗಂಟೆಗೆ ಏಳುವುದರಿಂದ ಮೊದಲಾಗುತ್ತಿತ್ತು ನನ್ನ ಕೆಲಸ. ಮನೆ ಮುಂದೆ ಕಸಗುಡಿಸಿ ನೀರು ಹಾಕಿ, ರಂಗೋಲಿ ಬಿಡಿಸುವುದು..... ಬೆರಣಿಯಿಂದ ಒಲೆ ಹೊತ್ತಿಸುವುದು..... ಹಾಲು ಕರೆಯುವುದು, ಮೊಸರು ಕಡೆದು ಬೆಣ್ಣೆ ತೆಗೆಯುವುದು..... ದನದ ಕೊಟ್ಟಿಗೆ ಗುಡಿಸಿ, ಬಾವಿಯಿಂದ ನೀರು ಸೇದುವುದು..... ಮಕ್ಕಳು ಏಳುತ್ತಿದ್ದಂತೆಯೇ ಆ ಕೋಣೆಗಳನ್ನು ಗುಡಿಸಿ, ಅವರ ಕೆಲಸಗಳನ್ನು ನೋಡಿಕೊಳ್ಳುವುದು, ಅವರನ್ನು ಸ್ಕೂಲಿಗೆ ಕಳುಹಿಸಿ ಅಡಿಗೆ ಕೆಲಸ ಮಾಡುವುದು, ಅವೆಲ್ಲ "ದುಡಿತ" ಎಂದು ತನಗೆಂದೂ ಅನ್ನಿಸಿಯೇ ಇರಲಿಲ್ಲ. ಇಷ್ಟೇ ಅಲ್ಲದೆ ಸಮಯ ಅಂದರೆ ನೆರೆಹೊರೆಯ ಮನೆಗಳಲ್ಲಿ ಸಹಾಯ ಮಾಡುತ್ತಿದ್ದುದೂ ಉಂಟು. ಬಳಲಿಕೆ, ಕೆಲಸವೆಂದರೆ ಬೇಸರ ತನ್ನ ನಿಘಂಟಿನಲ್ಲಿ ಬರಲೇ ಇಲ್ಲ.

ಈಗಿನ ಕಾಲದವರಿಗೆ ಆ ಸಹನೆ, ನಿಧಾನ ಎಲ್ಲಿಂದ ಬರಬೇಕು?

ನಾಲ್ಕು ಕುರ್ಚಿಗಳು ಕೂಡಾ ಸರಿಯಾಗಿ ಹಿಡಿಸದ ಈ ಕೋಣೆಗಳನ್ನು ಗುಡಿಸುವುದೇ ಕಷ್ಟ ಅನ್ನಿಸುತ್ತವರಿಗೆ.

ಏಕೆ? ಇದು ಶಾರೀರಿಕವೇ? ಮಾನಸಿಕವೆ? ಎಲ್ಲಿದೆ ಈ ಲೋಪ?

ಹ್ಞಾಂ..... ಹೌದು..... ಮನಸ್ಸಿನಲ್ಲಿಯೇ ಇದೆ ಎಲ್ಲಾ. ಈ ಹಾಳು ಮನಸೇ ಎಲ್ಲಕ್ಕೂ ಕಾರಣ.

ನನಗೆ ಈ ಹಾಳಾದ ರೋಗ ಬಾರದೆ ಇದ್ದಿದ್ದರೆ?

ಹ್ಞೂಂ..... ಯಾವುದಾದರೂ ಕಾಯಿಲೆ ಕಸಾಲೆ ಬರದೆ ಇರಬೇಕೆ ಹೊರತು ಬಂದ ಮೇಲೆ ಎಷ್ಟು ಅಂದುಕೊಂಡು ಏನು ಪ್ರಯೋಜನ?

ಆ ದಿನ ಸಾಯಂಕಾಲ ದೇವಸ್ಥಾನಕ್ಕೆ ಹೋಗೋಣವೆಂದು ಸ್ನಾನಮಾಡಿ, ರೇಷ್ಮೆ ಸೀರೆ ಉಟ್ಟು, ದೇವರಿಗಾಗಿ ಹೂ ಕುಯ್ಯೋಣವೆಂದು ಮಲ್ಲಿಗೆ ಚಪ್ಪರದ ಬಳಿ ಹೋಗಿದ್ದೊಂದೇ ಗೊತ್ತು.

ಪ್ರಪಂಚವೆಲ್ಲಾ ಗಿರಗಿರನೆ ತಿರುಗಿದಂತೆ ಭಾವನೆ.

ಕಾಲಿನಲ್ಲಿ ಶಕ್ತಿ ಉಡುಗಿ ಹೋದಂತಾಗಿ ಕುಸಿದು ಬಿದ್ದಿದ್ದಳು. ಏನಾಯಿತೆಂಬುದೇ ತಿಳಿಯದಂತಾಗಿತ್ತು. ಏಳಲು ಪ್ರಯತ್ನಿಸಿ ಆಗದಾಗ ಒಳಗಿದ್ದವರನ್ನು ಕೂಗಲು ಪ್ರಯತ್ನಿಸಿದರೆ ಶಬ್ದವೇ ಹೊರಬರಲೊಲ್ಲದು. ತನ್ನ ಅಸ್ಪಷ್ಟವಾದ ಕೂಗನ್ನು ಕೇಳಿ ಪಕ್ಕದ ಮನೆಯವರು ಬಂದಿದ್ದರು. ಅನಂತರ ಒಳಗಿನಿಂದ ಇವರೂ ಬಂದು ಆಸ್ಪತ್ರೆಗೆ ಕರೆದೊಯ್ದರು. ಎಲ್ಲಾ ಕನಸಿನಲ್ಲಿ ನಡೆದಂತೆ ನಡೆದು ಹೋಗಿತ್ತು. ತನಗೆ ಪಾರ್ಶ್ವವಾಯು ಬಡಿದಿದೆಯೆಂದೂ ಕಾಲೂ ಕೈ ಬಿದ್ದು ಹೋಗಿದೆಯೆಂದೂ ಡಾಕ್ಟರ್ ಹೇಳದೆಯೇ ತಿಳಿದು ಹೋಗಿತ್ತು. ಕೆಲವೇ ನಿಮಿಷಗಳಲ್ಲಿ ತನ್ನ ಬದುಕಿನ ದಾರಿಯೇ ಬದಲಾಗಿ ಹೋಗಿತ್ತು. ಎತ್ತರವಾದ ಶಿಖರದ ಮೇಲಿಂದ ಒಂದೇ ಸಲಕ್ಕೆ ಪ್ರಪಾತಕ್ಕೆ ತಳ್ಳಿಬಿಟ್ಟಿತ್ತು ವಿಧಿ.

ಆ ನಂತರ ಮಕ್ಕಳೆಲ್ಲಾ ಬಂದಿದ್ದರು. ಸ್ವಲ್ಪಹೊತ್ತು ಸಹಾನುಭೂತಿ..... ಕಣ್ಣೀರು..... ಆವೇದನೆ.....

ಆ ನಂತರ ಪ್ರಾರಂಭವಾಗಿತ್ತು – ಮುಖ್ಯವಾದ ಘಟ್ಟ.

ಮಕ್ಕಳೆಲ್ಲಾ ದೊಡ್ಡವರಾಗಿ ಅವರವರ ಸಂಸಾರ ಅವರು ಮಾಡಿಕೊಳ್ಳುವಂತಾದ ಮೇಲೆ, ಇಷ್ಟು ದೊಡ್ಡ ಮನೆಯಲ್ಲಿ ತಾನೂ ಯಜಮಾನರೂ ಮಿಕ್ಕಿದ್ದರು. ಹಬ್ಬ ಹುಣ್ಣಿಮೆ ಬಂದರೆ ತಾವೇ ಮಕ್ಕಳ ಬಳಿ ಹೋಗುವುದಾಗಲೀ, ಅವರೇ ಬರುವುದಾಗಲೀ ಮಾಡುತ್ತಿದ್ದರು. ಆಗಿನ್ನೂ ತನಗೆ ಮೈಯಲ್ಲಿ ಶಕ್ತಿಯಿತ್ತು. ಅವರಿಗೂ ವ್ಯವಸಾಯದ ಕೆಲಸ ಇದ್ದುದರಿಂದ ಯಾರ ಬಳಿಗಾದರೂ ಹೋಗಿ ಇರಬೇಕಾದ ಪ್ರಮೇಯವೇ ಇರಲಿಲ್ಲ. ಈಗಿನ್ನು ಹೋಗಲೇಬೇಕಾದ ಪರಿಸ್ಥಿತಿ.

ದೊಡ್ಡ ಮಗ, ಎರಡನೆ ಮಗ ಮೌನ ವಹಿಸಿದರು. ಮೂರನೆಯವನು ಮಾತನಾಡಿದ – "ಅಣ್ಣ, ಅಮ್ಮನ ನಿನ್ನ ಜತೆ ಕರೆದುಕೊಂಡು ಹೋಗು. ಅಪ್ಪ ನನ್ನ ಬಳಿ ಇರಲಿ. ಜಮೀನು ಕೌಲಿಗೆ ಕೊಟ್ಟು ಅದರಿಂದ ಬರುವ ಹಣದಲ್ಲಿ ಅಮ್ಮನಿಗೆ ಔಷಧ ಪಥ್ಯೆ ಮಾಡಿಸೋಣ..... ಏನಂತೀ?"

"ಅವರಿಬ್ಬರ ಹೊಣೆ ನಮ್ಮಿಬ್ಬರದೇನೇನು? ಮಿಕ್ಕವರಿಗೆ ಏನೂ ಇಲ್ಲವೇ?" ಎಂದ ಹಿರಿಯವ.

"ಇಲ್ಲಾಂತ ಹೇಳಿದೆನೇ? ಚಿಕ್ಕಣ್ಣ ದೂರದ ಕಲ್ಕತ್ತದಲ್ಲಿದಾನೆ. ಅಷ್ಟು ದೂರ ಇವರು ಹೋಗಬಲ್ಲರೇ? ತಮ್ಮನ ಸಂಸಾರ ಕುರಿತು ನಿನಗೆ ತಿಳಿಯದ್ದೇನಿದೆ? ಉದ್ಯೋಗ ಮಾಡುತ್ತಿರುವ ಆಕೆ ಅಮ್ಮನ ನೋಡಿಕೊಳ್ಳುವುದು ಸಾಧ್ಯವಾಗದಷ್ಟೆ!"

"ನೀನು ಮೊದಲೇ ಒಂದು ನಿರ್ಣಯಕ್ಕೆ ಬಂದಿದೀ. ಇನ್ನು ನಾನು ಹೇಳೋದೇನಿದೆ?"

"ಹಾಗಲ್ಲ, ನೀನು ದೊಡ್ಡವನು, ನಿನ್ನ ಅಭಿಪ್ರಾಯ ಹೇಳಿದರೆ ಅದರಂತೆ ಮಾಡೋಣ."

"ಇದರಲ್ಲಿ ನಾನು ಹೇಳೋದೇನಿದೆ? ನಿಮ್ಮ ಅತ್ತಿಗೆ ಅನಾರೋಗ್ಯದ ವಿಷಯ ನಿನಗೂ ಗೊತ್ತಲ್ಲ. ಅವಳಿಂದ ಅಮ್ಮನ್ನ ನೋಡಿಕೊಳ್ಳಲು ಸಾಧ್ಯವೇ? ಅಮ್ಮನ್ನ ನಿನ್ನ ಹತ್ತಿರ ಇಟ್ಟುಕೋ. ಅಪ್ಪ ಬರ್ತೀನಿ ಅಂದರೆ ನಾನು ಕರಕೊಂಡು ಹೋಗ್ತೀನಿ."

ತಾನು ಮಂಚದ ಮೇಲೆ..... ಅಷ್ಟು ದೂರದ ಕುರ್ಚಿಯಲ್ಲಿ ಅವರು ಕುಳಿತು ಎಲ್ಲಾ ಕೇಳುತ್ತಿದ್ದರು.

ಇಂತಹ ವಿಷಮ ಪರಿಸ್ಥಿತಿ ಎದುರಾಗುತ್ತದೆಂದು ಎಂದಾದರೂ ಕನಸು ಕಂಡಿದ್ದೆವೆ?.....

ತಾನು ಬಾಬು ಬಳಿಗೆ ಬಂದನಂತರ ಅವರೂ ಇಲ್ಲಿಯೇ ಇರುತ್ತೇನೆಂದು ಬಂದುಬಿಟ್ಟಿದ್ದರು. ತಮ್ಮಿಬ್ಬರಿಂದಾಗಿ ಇವರು ಎಷ್ಟು ಕಷ್ಟಗಳನ್ನು ಅನುಭವಿಸುತ್ತಿದ್ದಾರೋ ಕಾಣೆ.

ನಿಜಾನೇ ಮತ್ತೆ, ರೋಗಿಷ್ಠ ಮನುಷ್ಯರಿಗೆ ಸೇವೆ, ಉಪಚಾರ ಮಾಡೋದು ಕಷ್ಟಾನೇ. ತೊಂದರೆಯೂ ಹೌದು. ಹಾಗೆ ಅವರ ಕೈಯಲ್ಲಿ ಮಾಡಿಸಿಕೊಳ್ಳ ಬೇಕಾಗಿ ಬಂದುದಕ್ಕೆ ತಾನೆಷ್ಟು ವ್ಯಥೆ ಪಡುತ್ತಿದ್ದೇನೋ, ನಾಚಿಕೊಳ್ಳುತ್ತಿದ್ದೇನೋ ಆ ಭಗವಂತನಿಗೇ ಗೊತ್ತು. ಆ ಪರಿಸ್ಥಿತಿಯಿಂದ ವಿಮುಕ್ತಿ ಪಡೆಯಬೇಕಾದರೆ ಒಂದೇ ದಾರಿ – ಅದು ಮೃತ್ಯು – ಅದು ತನ್ನನ್ನು ಕರುಣಿಸಿದರೆ ಅವರಿಗೂ, ತನಗೂ ಸುಖ.

ಮೃತ್ಯುವನ್ನು ನೆನೆಸಿಕೊಂಡರೆ ಈ ಕಣ್ಣೀರು ಏಕೆ ಹೀಗೆ ಉಕ್ಕಿ ಬರುತ್ತದೆಯೋ ಕಾಣೆ..... ತನ್ನ ದೇಹದಲ್ಲಿರುವ ಕಣ್ಣೀರೆಲ್ಲಾ ಹೀಗೆಯೇ ಖರ್ಚಾಗಿ ಹೋಗುತ್ತದೆಯೋ ಏನೋ. ಹೀಗೆಯೇ ಅತ್ತೂ ಅತ್ತೂ ಜ್ಞಾನ ತಪ್ಪಿ ಎಂದೋ ಒಂದು ದಿನ..... ಇನ್ನೂ ಎಂದಿಗೆ? ಎಷ್ಟು ಯುಗಗಳಾಗಬೇಕು? ಪ್ರತಿದಿನ ರಾತ್ರಿಗಾಗಿ, ರಾತ್ರಿ ಹಗಲಿಗಾಗಿ ನಿರೀಕ್ಷಿಸುತ್ತಾ ತಪಿಸುತ್ತಾ.....

ಅಬ್ಬಾ..... ಗಂಟಲು ಒಣಗಿ ಹೋಗುತ್ತಿದೆ..... ಸ್ವಲ್ಪ ನೀರು ಕುಡಿಯ ಬೇಕು..... ದಾಹ..... ಹೇಗೆ..... ಅವನನ್ನು ಕರೆಯಬೇಕು..... ಲೋ ಬಾಬೂ.....

ಬಾರಪ್ಪಾ..... ಕೂಗಲು ಪ್ರಯತ್ನಿಸಿದೆ. ಅದು ಬಾ..... ಬಾ..... ಬಾ..... ಎಂದು ಮಾತ್ರ ಧ್ವನಿಸಿತ್ತು. ಸ್ವಲ್ಪ ಜೋರಾಗಿ ಕೂಗಿರಬೇಕು. ರೂಮಿನ ಬಾಗಿಲು ತೆರೆಯಿತು. ಬಾಬು ಹೊರಬಂದು "ಏನೂ....." ಎಂದ ಆಕಳಿಸುತ್ತಾ ದಾಹವೆಂಬಂತೆ ನೋಡಿದೆ. ಲೋಟದಲ್ಲಿ ನೀರು ತಂದು ಕುಡಿಸಿದ. ಬೆಡ್‌ಷೀಟ್ ಹೊದಿಸಿ ಹೊರಟು ಹೋಗುತ್ತಿದ್ದ ಅವನನ್ನು

"ಫ್ಯಾನ್ ಹಾಕಿ ಹೋಗೋ" ಎಂದೆ.

"ಏನಮ್ಮಾ ಅದು? ಇನ್ನೂ ಏನು ಬೇಕು?" ಎಂದ, ನನ್ನ ಮಾತು ಅರ್ಥವಾಗದ್ದರಿಂದ ಸಿಡುಕುತ್ತಾ.

ಅಯ್ಯೋ ಇವನಿಗೆ ಹೇಗೆ ಹೇಳಲಿ? "ಫ್ಯಾನು ಕಣೋ..... ಸೆಕೆ" ದೈನ್ಯವಾಗಿ ನೋಡಿದೆ. ಅರ್ಥವಾದಂತಿದೆ. ಫ್ಯಾನ್ ಸ್ವಿಚ್ ಹಾಕಿ ಹೊರಟು ಹೋದ..... ಮತ್ತೆ ಒಂಟಿತನ..... ಮೇಲೆ ಫ್ಯಾನ್ ವೇಗವಾಗಿ ತಿರುಗುತ್ತಿತ್ತು. ಅಬ್ಬ..... ಈಗ ಸ್ವಲ್ಪ ಹಾಯಾಗಿದೆ.

ಹಾಯಿ!

ಹಾಯಿಗೆ ಏನಾದರು ಅರ್ಥವಿದೆಯೇ ಎಂದು ಆಲೋಚಿಸಿದರೆ ನಗು ಬರುತ್ತೆ. ಸೆಕೆಗೆ ಒದ್ದಾಡುತ್ತಿರುವಾಗ ತಣ್ಣನೆಯ ಗಾಳಿ ಬೀಸಿದರೆ ಹಾಯಿ. ಹಗಲೆಲ್ಲ ಮೈಮುರಿಯುವಂತೆ ದುಡಿದವನಿಗೆ ವಿಶ್ರಾಂತಿ ಹಾಯಿ. ಆದರೆ ಇದರ ಸುಖ ಗೊತ್ತಾಗುವುದು ಸೆಕೆಯಾದಾಗ ಮತ್ತು ಮೈಮುರಿದು ದುಡಿದಾಗ. ಒಂದಿಲ್ಲದೆ ಹೋದರೆ ಇನ್ನೊಂದಿಲ್ಲ. ಹೀಗೆ ಮಂಚದ ಪಾಲಾದ ಮೇಲೆ ಕಣ್ಣಿಗೆ ನಿದ್ದೆಯೇ ಹತ್ತುತ್ತಿಲ್ಲ. ಯಾವಾಗಲೂ ಯಾವುದೋ ಒಂದು ಚಿಂತೆ, ಶಾರೀರಿಕವಾಗಿ, ಮಾನಸಿಕವಾಗಿ..... ಇದನ್ನೆಲ್ಲಾ ಬಿಟ್ಟು ದೂರ ದೂರದ ಲೋಕಕ್ಕೆ ಪ್ರಯಾಣ ಮಾಡಿದ ಮೇಲೆಯೇ ಸುಖ, ಶಾಂತಿ ಸಿಗುತ್ತೇನೋ. ಸ್ವರ್ಗಲೋಕ ಅನ್ನೋದು ನಿಜವಾಗಿ ಇರುತ್ತದೆಯೇ? ಪುರಾಣ ಗ್ರಂಥಗಳಲ್ಲಿ ಹೇಳಿದಷ್ಟು ದಿವ್ಯವಾಗಿರುತ್ತದೆಯೇ? ಈ ಜೀವ ಶರೀರವನ್ನು ಬಿಟ್ಟ ಮೇಲೆ ಎಲ್ಲೆಲ್ಲಿಯೋ ತಿರುಗಾಡುತ್ತಿದೆಯೆಂದು ಹೇಳುತ್ತಾರೆ. ಅದಕ್ಕೆ ಹಸಿವು, ನೀರಡಿಕೆ, ಸ್ಪಂದನ, ಇಂತಹುದೇನೂ ಇರುವುದೇ ಇಲ್ಲವೇನೋ. ಇನ್ನು ಸ್ವರ್ಗವಾದರೇನು?

ನರಕವಾದರೇನು? ಯಾವುದಾದರೂ ಒಂದೇ..... ಆದರೂ ಕೊನೆಯ ನಿಮಿಷದವರೆವಿಗೂ ಈ ದೇಹವನ್ನು ಬಿಡಲು ಮನಸೇ ಬರುವುದಿಲ್ಲವಲ್ಲಾ..... ಇದೇ ಸುಖ..... ಇದೇ ಸತ್ಯ, ನಿತ್ಯ ಅಂತ ಒದ್ದಾಡುವುದು. ಈ ನರಜನ್ಮವೇ ಬೇಕೂಂತ ಯಾಕೆ ಈ ಒದ್ದಾಟ, ಏಕೆ ಈ ಭ್ರಾಂತಿ.....!

ಹತ್ತು ದಿನಗಳ ಕೆಳಗೆ ನಾಲ್ಕನೆಯವ ಸೂರಿ ಬಂದಿದ್ದ. ನಾನು ಕೇಳಲಿ ಅಂತ ಅವನ ಟೇಪ್ ರೆಕಾರ್ಡರ್‌ನಲ್ಲಿ ಘಂಟಸಾಲ ಹಾಡಿದ ಭಗವದ್ಗೀತೆ ಕ್ಯಾಸೆಟ್ ಹಾಕಿದ್ದ, ಎಷ್ಟು ಚೆನ್ನಾಗಿತ್ತು ಕೇಳೋಕೆ! ಆ ಸ್ವಲ್ಪ ಹೊತ್ತು ಎಲ್ಲವನ್ನೂ ಮರೆತು ಕಣ್ಣುಮುಚ್ಚಿ ಮೈ ಮರೆತಿದ್ದಳು.

"ಅದನ್ನಿಲ್ಲೇ ಇಟ್ಟು ಹೋಗೋ, ಅಮ್ಮನಿಗೆ ಸ್ವಲ್ಪ ಹೊತ್ತು ಹೋಗುತ್ತೆ" ಅಂದಿದ್ದ ಬಾಬು.

"ಸರಿ, ಸರಿ, ನಿನ್ನ ಮಕ್ಕಳು ಮೊದಲೇ ಪ್ರಚಂಡರು. ಒಂದೇ ದಿನಕ್ಕೆ ಹಾಳುಮಾಡಿ ಮೂಲೆಗೆಸೀತಾರಷ್ಟೆ" ಎನ್ನುತ್ತಾ ಟೇಪ್ ರೆಕಾರ್ಡರನ್ನು ಸೂಟ್‌ಕೇಸಿನೊಳಗಿಟ್ಟುಕೊಂಡಿದ್ದ.

ತನಗೆ ಪಿಚ್ಚೆನ್ನಿಸಿತಾಗ!

ನಿಜಕ್ಕೂ ಇವರೆಷ್ಟು ಸ್ವಾರ್ಥಿಗಳು? ಇವರಿಗೋಸ್ಕರ ತಾನೆಷ್ಟು ಮಾಡಿದ್ದೆ?

ಸೂರಿ ಎಂ.ಕಾಂ. ಓದುತ್ತಿದ್ದಾಗ ಫೀಜು ಕಟ್ಟಲು ದುಡ್ಡಿಲ್ಲದೆ ತನ್ನ ಕೈ ಬಳೆಗಳನ್ನು ಕೊಟ್ಟಿದ್ದಳು. ಹಿರಿಯವನು ಸೈಟ್‌ಕೊಳ್ಳಲು "ನಾಲ್ಕು ಸಾವಿರ ಕಡಿಮೆಯಾಗಿದೆಯಮ್ಮಾ" ಅಂದಾ, ಎರಡನೆಯವನಿಗೆ ದೊಡ್ಡ ಪ್ರೈವೇಟ್ ಕಂಪನಿಯೊಂದರಲ್ಲಿ ಸಿಕ್ಕ ಕೆಲಸಕ್ಕಾಗಿ ಐದು ಸಾವಿರ ಡಿಪಾಜಿಟ್ ಕಟ್ಟಬೇಕೆಂದಾಗ ತನ್ನ ಒಡವೆಗಳನ್ನೆಲ್ಲಾ ಮಾರಬೇಕಾಗಿ ಬಂದಿತ್ತು. ಮಕ್ಕಳ ಒಳಿತಿಗಿಂತ ಒಡವೆಗಳು ಹೆಚ್ಚೆಂದಾಗಲೀ ಸರ್ವಸ್ವವೆಂದಾಗಲೀ ತನಗೆಂದೂ ಅನ್ನಿಸಿರಲೇ ಇಲ್ಲ.

ಆದರೆ..... ಈ ದಿನ ಹಾಸಿಗೆ ಹಿಡಿದಿರುವ ತಾಯಿಗಾಗಿ ಅವನ ವಸ್ತುವನ್ನು ಕೆಲವು ದಿನ ಇಲ್ಲಿರಿಸಲೂ ಅವನ ಮನಸ್ಸೊಪ್ಪುತ್ತಿಲ್ಲ.

ರಾಮೇಶ್ವರಿ ಮೊನ್ನೆ ಬಂದಾಗ ಏನೆಂದಿದ್ದಳು?

"ಇದ್ದ ಒಡವೆಗಳನ್ನೆಲ್ಲಾ ಗಂಡುಮಕ್ಕಳಿಗಾಗಿಯೇ ಖರ್ಚು ಮಾಡಿಬಿಟ್ಟೆ ನೀನು. ನಿಜ ಹೇಳಬೇಕೂಂದರೆ ತಾಯಿಯ ಒಡವೆಗಳು ಹೆಣ್ಣು ಮಕ್ಕಳಿಗೇ ಸೇರಬೇಕು. ನಮಗೋಸ್ಕರ ಏನೂ ಉಳಿಸಲಿಲ್ಲ ನೀನು. ಲೋಕಾರೂಢಿಯಾಗಿ ತಾಯಂದಿರಿಗೆ ಹೆಣ್ಣುಮಕ್ಕಳ ಮೇಲೆ ಪ್ರೀತಿ ಅನ್ನುತ್ತಾರೆ. ಆದರೆ ನಿನಗೆ ಮಾತ್ರ ಗಂಡುಮಕ್ಕಳ ಮೇಲೆ ಹೆಚ್ಚು ಪ್ರೀತಿ."

ಇಂತಹ ಮಾತುಗಳಿಂದ ತನ್ನನ್ನೇಕೆ ನೋಯಿಸುತ್ತಾರಿವರು? ರಾಮೇಶ್ವರಿಗೆ ತಾನೇನು ಕಡಿಮೆ ಮಾಡಿದ್ದು? ತನಗೆ ಸಾಕೆನಿಸುವವರೆಗೂ ಓದಿಕೊಂಡಿದ್ದಳು. ಲಕ್ಷಣವಾದ ಗಂಡ ಸಿಕ್ಕಿದ್ದ. ಅವರ ಸಂಸಾರ ಚೆನ್ನಾಗಿತ್ತು. ಆದರೂ ಏಕೆ ಈ ಅಸಂತೃಪ್ತಿ? ನನ್ನ ಮುಖ ನೋಡಿದರೆ ಇವುರುಗಳಿಗೆ ಒಡವೆಗಳ ಹೊರತು ಬೇರೇನೂ ನೆನಪಾಗುವುದಿಲ್ಲವೇನೋ. ಯಾರೋ ಕವಿ ಹೇಳಿದ ಹಾಗೆ,

"ಪ್ರೀತಿ, ವಿಶ್ವಾಸ ಎಲ್ಲಾ ಬರೀ ಬೂಟಾಟಿಕೆ, ಆತ್ಮತೃಪ್ತಿಗಾಗಿ ಮನುಷ್ಯ ನಾರಿಸಿಕೊಂಡ ನಾಟಕೀಯತೆ....."

ಟಕ್..... ಟಕ್..... ಟಕ್.....

ಗೂರ್ಕಾ ಇದ್ದಂತಿದೆ.

ಕೋಲನ್ನು ಕುಟ್ಟುತ್ತಾ ಹೋಗುತ್ತಿದಾನೆ ಗೂರ್ಕಾ..... ಅಂದರೆ ಗಂಟೆ ಎರಡರ ಮೇಲಾಗಿರಬಹುದು.

ರೀಸಸ್ಗೆ ಹೋಗಬೇಕೆನಿಸುತ್ತಿದೆ. ಮತ್ತೆ ಬಾಬೂನ ಎಬ್ಬಿಸಬೇಕೇನೋ. ಪಾಪ ಅವನು ತಾನೆ ಎಷ್ಟು ಸಲಾಂತ ನಿದ್ದೆಗೆಟ್ಟು ಏಳುತ್ತಾನೆ? ವರಾಂಡದಿಂದ ಇವರ ಗೊರಕೆ ಕೇಳಿಸ್ತಾ ಇದೆ. ಎಷ್ಟು ಅದೃಷ್ಟವಂತರು! ತನಗೊಬ್ಬ ರೋಗಿಷ್ಠ ಹೆಂಡತಿ ಇದಾಳೆಂದೂ, ಅವಳಿಗೆ ತನ್ನ ಅವಶ್ಯಕತೆ ಬರಬಹುದೆಂದೂ ಆಲೋಚಿಸುವುದೇ ಇಲ್ಲ. ತಮ್ಮ ಕೆಲಸವಾಯಿತು, ತಾವಾಯಿತು. ಸಮಯಕ್ಕಿಷ್ಟು ತಿನ್ನುವುದು, ಆ ವೇದಾಂತ ಗ್ರಂಥಗಳನ್ನು ಮುಂದಿಟ್ಟುಕೊಂಡು ಕೂಡುವುದು, ಗುಡಿ, ಪುರಾಣ ಅಂತ ಹೋಗಿ ಬರುವುದು. ಹೀಗೆಯೇ ಏನೂ ಚಿಂತೆಯಿಲ್ಲ ದವರಂತೆಯೇ ಕಳೆಯುತ್ತಿದ್ದಾರೆ. ತಾನು ಹೀಗೆ ಹಾಸಿಗೆ ಹಿಡಿದಿರುವುದು

ಅವರಿಗೆ ದೊಡ್ಡ ಪೆಟ್ಟೇ ತಗುಲಿದಂತಾಗಿದೆ. ಆದರೂ ಮೇಲೇನೂ ತೋರಿಸಿಕೊಳ್ಳದೆ ಬಿಂಕವಾಗಿರ್ತಾರೆ. "ಸರಿಯಾಗಿ ಔಷಧಿ ತಗೋ, ಧೈರ್ಯವಾಗಿರು" ಅಂತ ಹೇಳುತ್ತಿರುತ್ತಾರೆ. ಡಾಕ್ಟರನ್ನ ಬಂದು ನೋಡಿಹೋಗು ಅಂತ ಕೇಳಿಕೋತಾ ಇರ್ತಾರೆ. ಇವರಿಗೆಲ್ಲೋ ಹುಚ್ಚು. ತನಗಿನ್ನು ವಾಸಿಯಾಗಿ, ಮೊದಲಿನಂತೆ ಕೆಲಸ ಕಾರ್ಯ ಮಾಡಿಕೊಳ್ಳಲು ಸಾಧ್ಯವೇ? ಎಷ್ಟೊಂದು ಮಾತ್ರೆಗಳು! ನುಂಗಿ ನುಂಗಿ ವಾಕರಿಕೆ ಬರುತ್ತೆ. ಏನು ಪ್ರಯೋಜನ? ಮಾತೂ ಬರಲಿಲ್ಲ, ಕೈ ಕಾಲೆರಡೂ ಸ್ವಾಧೀನಕ್ಕೆ ಬರಲಿಲ್ಲ. ಇನ್ನಿದು ವಾಸಿಯಾಗದು..... ತಾನು ಹೀಗೆಯೇ ಮಂಚದ ಮೇಲೆಯೇ..... ಹೆಣದಂತೆ.....

ಒಂದು ಮಾಡಬೇಕು..... ಕೂಗಬೇಕು..... ತಡಯೋಕ್ಕಾಗ್ತಿಲ್ಲ, ಕೂಗಲೂ ಆಗುತ್ತಿಲ್ಲ. ಇದೇನು ಕರ್ಮವೋ ದೇವರೇ?

ಯಾರದು? ಕೋಮಲಿ ಬಾತ್‌ರೂಂಗೆ ಹೋಗ್ತಿದ್ದಂತಿದೆ. ಕನಿಷ್ಠಪಕ್ಷ ಹಾಗೆ ಎದ್ದಾಗಲಾದರೂ ಕೋಣೆಯೊಳಕ್ಕೊಮ್ಮೆ ಬಗ್ಗಿ ನೋಡಬಾರದೇ?

"ಮಗೂ, ಬೆಡ್‌ಪ್ಯಾನ್ ಕೊಡಮ್ಮಾ" ಗಟ್ಟಿಯಾಗಿ ಕೂಗಿದೆ.

ಮತ್ತೆ ರೂಮಿನೊಳಕ್ಕೆ ವಾಪಸು ಹೋಗ್ತಿದಾಳೆ.

"ಮಗೂ....." ಇನ್ನೂ ಗಟ್ಟಿಯಾಗಿ ಕೂಗಿದೆ.

"ಅಬ್ಬಾ..... ಹಾಳು ಮುದುಕಿ, ರಾಕ್ಷಸಿಯಂತೆ ಮನುಷ್ಯರನ್ನು ತಿಂತಾಳೆ ಸುಮ್ನೆ" ಅನ್ನುತ್ತಾ ಬಂದಳು.

"ಏನು ಬೇಕು, ಯಾಕೆ ಹಾಗೆ ಪ್ರಾಣ ಹೋಗೋರ ಹಂಗೆ ಕೂಗ್ತೀರಾ? ರಾತ್ರಿ ಹೊತ್ತು ಕೂಡಾ ನಿದ್ದೆ ಮಾಡೋಕೆ ಬಿಡೊಲ್ಲವಾ?" ಸಿಟ್ಟಿನಿಂದ ಸಿಡುಕಿದ್ದಳು.

"ಒಂದ ಮಾಡಬೇಕು" ಅಂದೆ.

"ಏನೋ ವೈ ವೈ ವೈ ಅಂತೀರ, ನನಗರ್ಥವಾಗದು. ನಿಮ್ಗೆ ಮಾತು ಬಿದ್ದು ಹೋಗಿದ್ದೂ ನನ್ನ ಕರ್ಮಕ್ಕೇ ಬಂದಿದೆ. ಎಷ್ಟು ದಿನ ಹೀಗೆ ಕಿತ್ತು

ತಿಂತೀರಿ ನಮ್ಮನ್ನ....." ಜೋರಾಗಿ ಅರಚಿದಳು. ನಮ್ಮವರಿಗೆ ನಿದ್ರಾಭಂಗ ವಾದಂತಿದೆ. "ಏನು ಕೋಮಲಮ್ಮಾ" ಎಂದರು.

"ಅಗೋ, ಅವರು ಎದ್ದರಲ್ಲಾ, ಅವರನ್ನೇ ಕೇಳಿ" ಎಂದು ಸರ್ರನೆ ಹೋಗಿ ರೂಮಿನ ಬಾಗಿಲನ್ನು ಹಾಕಿಕೊಂಡಳು.

ಇವರು ಒಳಕ್ಕೆ ಬಂದವರೇ "ಏಕೆ, ನಿದ್ದೆ ಬರ್ತಿಲ್ಲವೇನು?" ಎಂದರು.

ನಾನು ಹೇಳಿದ್ದು ಅವರಿಗರ್ಥವಾಗಲು ಸ್ವಲ್ಪ ಸಮಯ ಹಿಡಿಸಿತು. ಬೆಡ್‌ಪ್ಯಾನ್ ಕೊಟ್ಟು ಮತ್ತೆ ಮಲಗಿಸಿ, ತಾವು ಹೋಗಿ ಮಲಗಿದರು.

ಇದು ದಿನಾ ನಡೆಯುವ ಕಾರ್ಯಕ್ರಮವೇ ಆದರೂ ಪ್ರತಿಸಲವೂ ಹೀಗೆ ಎಲ್ಲರನ್ನೂ ಗೋಳುಹುಯ್ದುಕೋತಾ ಇದೀನಲ್ಲಾ ಅಂತ ನೊಂದುಕೋತಾ, ನಾಚಿಕೆಯಿಂದ ಕುಗ್ಗಿ ಹೋಗ್ತಾ ಇರುತ್ತೀನಿ ನಾನು. ಇನ್ನೂ ಎಷ್ಟು ದಿನಾಂತ ಹೀಗೆ ಇವರಿಗೆಲ್ಲಾ ಬೇಸರ ಬರೋಹಾಗೆ ಮಾಡಿ ಈ ಮುದುಕಿ ಎಂದಿಗೆ ಸಾಯುತ್ತಪ್ಪಾ ಅನ್ನಿಸಿಕೊಂಡು ಬದುಕಬೇಕೋ!

ಈಗ ರೋಗ ಬಂದು ಹೀಗಾಗಿದೀನಿ. ಆದರೆ ಈ ಕಾಯಿಲೆ ಬರೋಕೆ ಮುಂಚೆ "ಇಲ್ಲಿ ನಿಮ್ಮ ಸೊಸೆ, ಮಕ್ಕಳನ್ನು ನೋಡಿಕೊಂಡು ಕೆಲಸ ಮಾಡಿಕೊಳ್ಳಲು ಕೈಲಾಗುತ್ತಿಲ್ಲ ಅನ್ನುತ್ತಿದ್ದಾಳೆ. ಸ್ವಲ್ಪ ದಿನವಾದರೂ ಇರೋಹಾಗೆ ಅಮ್ಮನ್ನ ಕಳುಹಿಸಿಕೊಡಿ" ಅಂತ ಬರೆದು ಕರೆಸಿಕೊಳ್ಳುತ್ತಿರಲಿಲ್ಲವೇ? ಎಷ್ಟು ಚಾಕರಿ ಮಾಡಿದಾಳೆ ಇವರಿಗೆಲ್ಲಾ. ಈ ಕೋಮಲಿಗೆ..... ತಾಯಿಯಿಲ್ಲದ ಹುಡುಗಿ ಅಂತ ಎಷ್ಟು ಅಕ್ಕರೆಯಿಂದ ನೋಡಿಕೊಳ್ಳುತ್ತಿದ್ದಳು. ತಾಯಿಯಿಲ್ಲದ ಕೊರತೆ ತಿಳಿಯದಂತೆ ಮೂರು ಬಾಣಂತನಗಳನ್ನೂ ತಾನೆ ಮಾಡಿದ್ದಳು. ಆಗೆಲ್ಲಾ ಕೋಮಲಿ ಏನಂದಿದ್ದಳು?

"ನನಗೆ ತಾಯಿಯಿಲ್ಲ, ಆದರೆ ನಿಮ್ಮನ್ನು ನೋಡಿದ ಮೇಲೆ ಹಾಗನ್ನಿಸುತ್ತಲೇ ಇಲ್ಲ" ಎಂದವಳು ಅದೇ ಬಾಯಿಯಲ್ಲಿ ಪಕ್ಕದ ಮನೆಯಾಕೆ ಯೊಂದಿಗೆ ಮೊನ್ನೆ "ಈಕೆ ಚೆನ್ನಾಗಿದ್ದಾಗ ಏನು ಗೋಳು ಹುಯ್ಕೊಳ್ಳೋಳು ಅಂತೀರಿ! ಯಾವ ಸೊಸೇನೂ ಪಡಬಾರದ ಕಷ್ಟ ಪಟ್ಟಿದೀನಿ. ಆ ಪಾಪ

ಸುಮ್ಮನೆ ಹೋಗುತ್ತೇನು?" ಅನ್ನುತ್ತಿದ್ದಳು. ಇವರೆಲ್ಲಾ ಏಕೆ ಹೀಗೆ ಬದಲಾಯಿಸಿದರೂಂತ ತಲೆ ಚಚ್ಚಿಕೊಂಡರೂ ಅರ್ಥವಾಗುತ್ತಿಲ್ಲ.

"ಈ ಮುದುಕಿ ಹಾಸಿಗೆ ಹಿಡಿದಳು, ಮಾತು ಬಿದ್ದು ಹೋಯಿತು. ಇನ್ನು ನಾವು ಏನಂದರೆ ತಾನೆ ಏನು ಮಾಡುವಂತಿದಾಳೆ. ನಾಲ್ಕು ಕಲ್ಲೆಸೆಯಲು ಇದೇ ಸಮಯ" ಅಂದುಕೋತಿದಾರೇನೋ.

ಶಕ್ತಿಹೀನಳಾಗಿ, ದೀನಾವಸ್ಥೆಯಲ್ಲಿರುವ ಮನುಷ್ಯನನ್ನು ಮಾತುಗಳಿಂದ ಹಿಂಸಿಸುವುದನ್ನು ಮಾನವತೆಯೆನ್ನಬಹುದೆ? ರಾಕ್ಷಸತ್ವ..... ಹೌದು ರಾಕ್ಷಸರು..... ನನ್ನ ರಕ್ತ ಹಂಚಿಕೊಂಡು ಹುಟ್ಟಿ ನನ್ನನ್ನೇ ಕಿತ್ತು ತಿನ್ನುತ್ತಿದ್ದಾರೆ. ಹೀಗೆ ಹಿಂಸಿಸುವ ಬದಲು ಒಂದಿಷ್ಟು ನಿದ್ರೆ ಮಾತ್ರ ನುಂಗಿಸಿ ಕೊಂದುಬಿಡಬಾರದೇ? ಒಂದೇ ಸಲ ಇವರಿಗೆಲ್ಲಾ ಪೀಡೆ ಕಳೆದುಹೋಗುತ್ತೆ. ಕೊಲ್ಲೋದೂಂದ್ರೆ ಜ್ಞಾಪಕ ಬರತ್ತೆ.....

ನಿನ್ನೆ ಸಾಯಂಕಾಲ ಬಾಬು ಸ್ನೇಹಿತ ಆಚಾರಿ ಬಂದಿದ್ದ. ಅವನೊಂದಿಗೆ ಬಾಬು, ಕೋಮಲಿ ಸಹ ಮನೆ ಮುಂದೆ ಕುರ್ಚಿ ಹಾಕಿಕೊಂಡು ಕುಳಿತು ಮಾತನಾಡುತ್ತಿದ್ದ ಪ್ರತಿಯೊಂದು ಮಾತೂ ತನಗೆ ಕೇಳಿಸುತ್ತಿತ್ತು. ಆಗ ಇವರು ಮನೇಲಿರಲಿಲ್ಲ – ಗುಡಿಗೆ ಹೋಗಿರಬೇಕು.

"ಹಲೋ ಕೋಮಲಿ ಅವರೇ, ನಿನ್ನೆ ಫಂಕ್ಷನ್‌ಗೆ ನೀವು ಬರಲಿಲ್ಲಾಂತ ನಮ್ಮಾಕೆ ತುಂಬಾ ನೆನೆಸಿಕೊಂಡಳು" ಎಂದ ಆಚಾರಿ.

"ನಾನು ಬರಬೇಕು ಅಂದುಕೊಂಡರೇನು ಪ್ರಯೋಜನ ಹೇಳಿ? ನಮ್ಮ ಮನೆ ವಿಷಯ ಗೊತ್ತಲ್ಲ ನಿಮಗೆ, ಆ ಮುದುಕಿ ಬದುಕಿರೋ ತನಕ ನನಗೆ ಈ ಸೆರೆಮನೆ ತಪ್ಪಿದ್ದಲ್ಲ....." ಎಂದಳು ಕೋಮಲಿ ದೈನ್ಯವಾಗಿ.

"ಹೇಗಿದಾರೆ ಈಗ?"

"ಯಥಾಪ್ರಕಾರ ಇದಾರೆ. ಹಾಗೂ ಇಲ್ಲ ಹೀಗೂ ಇಲ್ಲ. ನನ್ನ ಪ್ರಾಣ ತೆಗೆದ ಮೇಲೆ ಅವರು ಹೋಗೋದು" ಅವಳ ಕಂಠದಲ್ಲಿ ಆಕ್ರೋಶ ತುಂಬಿತ್ತು.

ಬಾಬು ಮೌನವಾಗಿದ್ದ.

"ಲೋ ಬಾಬೂ, ಈ ಮಧ್ಯೆ ಪೇಪರಿನಲ್ಲಿ ಮರ್ಸಿ ಕಿಲ್ಲಿಂಗ್ ಕುರಿತು ವಾದವಿವಾದ ನಡೀತಾ ಇದೆ. ಓದುತ್ತಿದ್ದೀಯಾ ನೀನು? ತುಂಬಾ ಇಂಟ್ರಸ್ಟಿಂಗ್ ಆಗಿದೆ....."

"ಮರ್ಸಿ ಕಿಲ್ಲಿಂಗೇ....." ಕೋಮಲಿಯ ಕುತೂಹಲ.

"ಹೌದುರೀ..... ದೇಹದಲ್ಲಿ ನಾನಾ ವಿಧವಾದ ಯಾತನೆಗಳಿದ್ದು ಅವುಗಳಿಂದ ವಿಮುಕ್ತಿಯಿಲ್ಲವೆಂದು ಖಚಿತವಾದಾಗ ಆ ಪೇಷೆಂಟನ್ನು ಆ ಯಾತನೆಗಳಿಂದ ವಿಮುಕ್ತಿಗೊಳಿಸುವುದು ಅಂದರೆ ಆತನ ಅನುಮತಿ ಪಡೆದೇ ಪ್ರಾಣ ತೆಗೆಯುವುದು ಎಂದರ್ಥ."

"ಹಾಗೇನು.....? ನಮ್ಮತ್ತೆಯಂತಹವರಿಗೆ ಇದು ಅನ್ವಯಿಸೊಲ್ಲ..... ಯಾಕೇಂದ್ರೆ ಆಕೆ ತಾನು ಚೆನ್ನಾಗಿಯೇ ಇದಾಳೆ, ನಮ್ಮನ್ನು ಕೊಲ್ತಿದಾಳಷ್ಟೆ!"

"ನೋ ನೋ, ಹಾಗನ್ನಬೇಡಿ. ಆಕೆಗೇನೂ ಯಾತನೆಗಳೇ ಇಲ್ಲಾನ್ನೋದು ತಪ್ಪು. ಅದನ್ನು ಹೇಳಿಕೊಳ್ಳೋಕೆ ಆಕೆಗೆ ಬಾಯಿದ್ದರೆ ತಾನೆ? ದೈಹಿಕವಾಗಿ ಆಕೆಗೆ ಎಷ್ಟೋ ನೋವಿರಬಹುದು. ಅದರಿಂದ ಮಾನಸಿಕವಾಗಿ ಸಹ ಆಕೆ ಕುಗ್ಗಿ ಹೋಗಿರಬಹುದು. ನಿಜವಾಗಿಯೂ ಆಕೆಯ ಪರಿಸ್ಥಿತಿ ತುಂಬಾ ದಯನೀಯವಾದದ್ದು....."

"ಆ ವಿಷಯ ಬಿಡಿ..... ಮರ್ಸಿ ಕಿಲ್ಲಿಂಗ್ ಕುರಿತು ಇನ್ನೂ ವಿವರಗಳಿದ್ದರೆ ಹೇಳಿ....."

"ಹೇಳಿದೆನಲ್ಲಾ, ದೀರ್ಘ ರೋಗಿಗಳು ತಮ್ಮ ಸುತ್ತಲಿನವರನ್ನು ಹಿಂಸಿಸುತ್ತಾರೆ – ಅವರಿಗೆ ಸುಖವಿಲ್ಲ, ಮಿಕ್ಕವರನ್ನೂ ಸುಖವಾಗಿರಗೊಡೊಲ್ಲ. ಅಂತಹ ನಿಕೃಷ್ಟವಾದ ಬದುಕು ಏಕೆ ಹೇಳಿ? ಅದಕ್ಕೇ ಪಾಶ್ಚಿಮಾತ್ಯ ದೇಶಗಳಲ್ಲಿ ಇದನ್ನು ಜಾರಿಗೆ ತರಬೇಕೆಂದು ಆಲೋಚಿಸುತ್ತಿದ್ದಾರೆ. ಅಂತಹವರನ್ನು ಈ ನರಕ ಯಾತನೆಯಿಂದ ವಿಮುಕ್ತಿಗೊಳಿಸಿ ಉಪಕಾರ ಮಾಡುತ್ತಾರೆ. ನಾವು ಅಂದುಕೋತೀವಿ, ಕೊಲ್ಲೋದು ಪಾಪ, ಅದೂ ಇದೂ ಅಂತ. ಆದರೆ ಅವರನ್ನು ಬಾಧಮುಕ್ತರನ್ನಾಗಿ ಮಾಡಿ ಒಳ್ಳೆಯದನ್ನೇ ಮಾಡುತ್ತಿದ್ದೀವಿ ಅಂದುಕೊಳ್ಳೋದಿಲ್ಲ....."

"ನಾನೂ ಇದನ್ನು ಕೇಳಿದೀನಿ. ನಮ್ಮ ಇಂಡಿಯಾದಲ್ಲಿ ಮಾತ್ರ ಈ ಪದ್ಧತಿ ಸರಿಹೋಗಲ್ಲ. ಕರ್ಮಸಿದ್ಧಾಂತ ನಮ್ಮ ನರನರಗಳಲ್ಲೂ ಜೀರ್ಣವಾಗಿದೆ. ಆದ್ದರಿಂದ ಪಾಪ ಭೀತಿಯಿಂದ ನಾವೇ ಸಾಯುತ್ತೇವೆ."

"ನೀವು ಹೇಳಿದ ವಿಷಯ ಚೆನ್ನಾಗಿದೆ. ಆದರೆ ನೋಡ್ತಾ ನೋಡ್ತಾ ಹೇಗೆ ಮನುಷ್ಯನ್ನ ಕೊಲ್ಲೋದು! ಅದು ಅಷ್ಟು ಸುಲಭವಾದ ಕೆಲಸವೇ?....."

ಈ ಮಾತುಗಳನ್ನು ಕೇಳುತ್ತಿದ್ದಷ್ಟು ಹೊತ್ತು ತನಗೆ ಮೈಯೆಲ್ಲಾ ಬೆವತು ನಡುಕ ಬಂದಿತ್ತು. ಎಂತಹುದೋ ಭೀತಿಯಿಂದ, ತನ್ನ ಕಂಠವನ್ನು ಅವ್ಯಕ್ತ ಹಸ್ತ ಹಿಸುಕುತ್ತಿದ್ದಂತಾಗಿ ವಿಲವಿಲನೆ ಒದ್ದಾಡಿದ್ದಳು. ಚೇತರಿಸಿಕೊಳ್ಳಲು ಸ್ವಲ್ಪ ಹೊತ್ತೇ ಹಿಡಿಸಿತ್ತು.

ಮಾತುಗಳಿಂದ ಹಿಂಸಿಸಿ..... ಸದಾ ಛೀ..... ಥೂ..... ಎನ್ನುತ್ತಾ ಬದುಕಿನ ಮೇಲಿನ ಆಶೆಯನ್ನು ಖೂನಿ ಮಾಡುತ್ತಾ ಸ್ವಲ್ಪ ಸ್ವಲ್ಪವಾಗಿ ಕೊಲ್ಲುವುದು ಅಭ್ಯಾಸವಾಗಿರುವ ಇವರಿಗೆ ಒಂದೇ ಸಲ ಕೊಲ್ಲುವ ವಿಷಯ ಹೇಗೆ ಇಷ್ಟವಾದೀತು? ನಾನು ಹೇಗೆ ಸಾಯಬೇಕೆನ್ನುವ ವಿಷಯ ಇವರಿಗೆಲ್ಲಾ ಚರ್ಚನೀಯಾಂಶವಾಯಿತೆ? ಅಯ್ಯೋ ನನ್ನ ಬಾಳೇ! ಇವರೆಲ್ಲಾ ಮುದುಕರಾಗುವುದೇ ಇಲ್ಲವೇ? ಯಾವ ಕಾಯಿಲೆಯೂ ಹತ್ತಿರಬಾರದಷ್ಟು ದೃಢಕಾಯರಾಗಿಯೇ ಇದ್ದುಬಿಡುತ್ತಾರೆಯೇ? ಈ ಪ್ರಪಂಚದಲ್ಲಿ ಇವರೆಲ್ಲಾ ಶಾಶ್ವತವಾಗಿ ಗೂಟ ಹೊಡೆದುಕೊಂಡು ಕುಳಿತಿರೋರ ಹಾಗೆ, ನಾನು ಮಾತ್ರ ಕೆಲಸಕ್ಕೆ ಬಾರದ ಕಸವಾಗಿಬಿಟ್ಟೆ.....

ಭಗವಂತಾ, ನನ್ನನ್ನು ಕಿವುಡಳನ್ನಾಗಿಯಾದರೂ ಮಾಡಬಾರದೇ? ಈ ಮಾತುಗಳನ್ನೆಲ್ಲಾ ಕೇಳಲಾರೆ ತಂದೇ, ನನಗೆ ಬೇಗ ಸಾವು ಕೊಡು..... ಹೀಗೆ ಯಾರಿಗೂ ಬೇಡದವಳಾಗಿ ಎಷ್ಟು ದಿನ ಬದುಕಲಿ? ಸಂತಾನವತಿಯಾದ ಸ್ತ್ರೀ ಎಷ್ಟೋ ಸಂಪತ್ತುಳ್ಳವಳು ಅನ್ನುತ್ತಾರೆ. ಆ ಮಕ್ಕಳೇ ಅವಳ ಐಶ್ವರ್ಯ, ರಕ್ಷೆ ಅಂತಾರೆ. ಅದು ಇಷ್ಟು ಜನ ಮಕ್ಕಳ ತಾಯಿಯಾದ ತನ್ನ ವಿಷಯದಲ್ಲಿ ಹಾಸ್ಯಾಸ್ಪದವಾಗಿ ಹೋಯಿತಲ್ಲಾ. ಈ ಸಂತಾನದಿಂದಾಗಿಯೇ ಇಷ್ಟೊಂದು ನಿಂದಾವಾಕ್ಯಗಳನ್ನು ಕೇಳಬೇಕಾಯಿತಲ್ಲಾ. ಇಷ್ಟೊಂದು ಚಿತ್ರಹಿಂಸೆಯನ್ನು

ನಾನು ತಡೆಯಲಾರೆ ದೇವರೇ! ಮತ್ತೊಂದು ಜನ್ಮ ಅಂತ ಇದ್ದಲ್ಲಿ ನನ್ನನ್ನು ಬಂಜೆಯಾಗಿ ಹುಟ್ಟಿಸು.....

ಒಂದು ತಿಂಗಳ ಹಿಂದೆ ಇರಬೇಕು, ಕಲ್ಕತ್ತಾದಲ್ಲಿರೋ ಮಗ ಕಾಂತೂ ಬಂದಿದ್ದ. ಆಗ ಬಾಬು ಹೇಳಿದ್ದ.

"ಅಮ್ಮನ್ನ ಕರಕೊಂಡು ಹೋಗು ಸ್ವಲ್ಪ ದಿನ. ಎಷ್ಟು ದಿನಾಂತ ನಾವೇ ನೋಡಿಕೊಳ್ಳೋದು. ನನ್ನ ಹೆಂಡತಿಗೂ ಮಕ್ಕಳನ್ನು ಕಟ್ಟಿಕೊಂಡು ಮಾಡಿ ಮಾಡಿ ಸಾಕಾಗಿದೆ. ಅಮ್ಮನ ವಿಷಯದಲ್ಲಿ ನಿನ್ನದೇನೂ ಜವಾಬ್ದಾರಿ ಇಲ್ಲವೇನು?"

ಅದಕ್ಕೆ ಇಪ್ಪತ್ತು ದಿನದ ಮುಂದಿನಿಂದ ಮನೆಯಲ್ಲಿ ರಾದ್ಧಾಂತ ನಡೆಯುತ್ತಲೇ ಇತ್ತು. ನನ್ನನ್ನು ಆಸ್ಪತ್ರೆಯಲ್ಲಿ ಸೇರಿಸಿ ಅಲ್ಲಿಯೇ ಬಿಡುವಂತೆ ಕೋಮಲಿ ಹಠ ಹಿಡಿದಿದ್ದಳು..... ಹೀಗೆ ಮನೆಯಲ್ಲಾದರು ಇದ್ದರೆ ಗಂಡ, ಮಕ್ಕಳು, ಮೊಮ್ಮಕ್ಕಳನ್ನು ನೋಡುತ್ತಾ ಸ್ವಲ್ಪ ಹೊತ್ತು ತಾನಿದ್ದ ಪರಿಸ್ಥಿತಿಯನ್ನು ಮರೆಯುವಂತಾಗುತ್ತಿತ್ತು. ಆ ಆಸ್ಪತ್ರೆಯಲ್ಲಿ ದಿಕ್ಕಿಲ್ಲದವಳಂತೆ ಬೆಡ್ ಮೇಲೆ ಮಲಗಿ..... ತನ್ನವರೂಂತ ಯಾರೂ ಹತ್ತಿರದಲ್ಲಿಲ್ಲದೆ ಆ ಔಷಧಿಗಳ ವಾಸನೆಯ ಮಧ್ಯೆ..... ತರತರಾವರಿ ರೋಗಿಗಳ ನಡುವೆ, ಈ ಇರುವಷ್ಟು ಮನಸ್ಥಿಮಿತವೂ ಇಲ್ಲದೆ ಹುಚ್ಚು ಹಿಡಿಯುತ್ತಷ್ಟೆ. ಆದ್ದರಿಂದಲೇ ಬಾಬು ಈ ವಿಷಯ ತನ್ನೊಂದಿಗೆ ಹೇಳಿದಾಗ ಹೋಗುವುದಿಲ್ಲವೆಂದು ಹಠ ಮಾಡಿದ್ದಳು. ಇವರು ಸಹಾ ಅಮ್ಮನಿಗೆ ಇಷ್ಟು ಮಾತ್ರವಾದರೂ ಮನಶ್ಯಾಂತಿಯಿಲ್ಲದೆ ಮಾಡುತ್ತೀಯೇನೋ ಎಂದು ನೊಂದುಕೊಂಡಿದ್ದರು. ಸದ್ಯಕ್ಕೆ ಸುಮ್ಮನಾಗಿದ್ದ. ಈಗ ಹೀಗೆ ಅಣ್ಣನನ್ನು ನೋಡಿದ ಕೂಡಲೇ ತನ್ನ ಮನಸ್ಸಿನಲ್ಲಿದ್ದುದನ್ನು ಕಕ್ಕಿದ್ದ.....

ಆದರೆ ಅವನು ಇವನ ಅಣ್ಣ ಅಲ್ಲವೇ? ಇವನಿಗಿಂತ ಬುದ್ಧಿವಂತ.

"ನೀನೇನಾದರೂ ಅಂದುಕೋ. ನಾನು ಕರೆದುಕೊಂಡು ಹೋಗೋ ಮಾತೇ ಇಲ್ಲ. ನಿಮ್ಮ ಅತ್ತಿಗೆ ನನ್ನ ಕೈಲಾಗೊಲ್ಲ ಅಂತ ಹೇಳಿಬಿಟ್ಟಿದ್ದಾಳೆ..... ಜವಾಬ್ದಾರಿ ಅಂತೀಯಾ?..... ನಿಜ..... ಎಷ್ಟು ಬೇಕೋ ಹೇಳು, ಹಣ ಕಳುಹಿಸ್ತೀನಿ....."

"ಹಾಗಾದರೆ ನನಗೂ ನನ್ನ ಹೆಂಡತಿಗೆ ಮಾತ್ರವೇ ಹಿಡಿದಿದೆಯೇನು ಗ್ರಹಚಾರ!"

"ಅದು ನಿನ್ನಿಷ್ಟ. ನಿನ್ನ ಕೈಲಾಗೊಲ್ಲಾಂದ್ರೆ ನೀನೂ ಮಾಡಬೇಡ ಎಲ್ಲಿಗಾದರೂ ಕಳುಹಿಸಿಬಿಡು....."

"ಎಲ್ಲಿಗೆ? ಅದನ್ನೂ ನೀನೇ ಹೇಳಿಬಿಡು....."

"ಲೋ ಮಕ್ಕಳಿರಾ, ನನ್ನನ್ನು ಒಂದೇ ಸಲ ಸ್ಮಶಾನಕ್ಕೆ ಕಳಿಸಿಬಿಡ್ರೋ....." ಎಂದು ತಲೆಯನ್ನು ಮಂಚಕ್ಕೆ ಹಾಕಿ ಬಡಿದುಕೊಂಡೆ, ಅಳುತ್ತಾ.....

ನನ್ನ ಮಾತು ಅರ್ಥವಾಗದಿದ್ದರೂ ಭಾವ ಅರ್ಥವಾಗಿತ್ತು ಅವರಿಗೆ.

ಅರ್ಥವಾದರೂ ನನ್ನ ಬಗ್ಗೆ ಅವರಿಗೆ ಅನುಕಂಪವೇನೂ ಇದ್ದಂತಿರಲಿಲ್ಲ. ನಿರ್ಲಿಪ್ತವಾಗಿ ನೋಡುತ್ತಿದ್ದರು.

ನನ್ನ ಎದೆ ಏಕೆ ಒಡೆದು ಹೋಗುತ್ತಿಲ್ಲ. ಕಲ್ಲಾಗಿರಬೇಕು ಅದು. ಅಂತಹ ಮಾತುಗಳನ್ನು ಕೇಳಿಯೂ ಇನ್ನೂ ಈ ಪ್ರಪಂಚವನ್ನು ನೋಡುತ್ತಿದ್ದೇನೆ..... ಕೇಳುತ್ತಿದ್ದೇನೆ.....

ದಯೆ, ಕರುಣೆಗಳಿಗೆ ನಿಲಯವಾಗಿ ಬದುಕಿನ ತನ್ನ ಹೊಟ್ಟೆಯಲ್ಲಿ ಹುಟ್ಟಿ ಇವರಿಷ್ಟು ಕಠಿಣಾತ್ಮರು ಹೇಗಾದರು? ಹೆತ್ತ ತಾಯಿ ಎಂಬ ಭಾವನೆಯೇ ಇಲ್ಲದೆ ಸ್ವಾರ್ಥ ಭಾವನೆ ಹೇಗೆ ಬಂತು? ನಾನು ಬೆಳೆಸಿದ ರೀತಿಯೇ ಸರಿಯಿಲ್ಲವೇ? ನನ್ನ ಸ್ತನ್ಯದಲ್ಲಿಯೇ ಇಷ್ಟು ವಿಷ ಇತ್ತೇ? "ನನ್ನ ಹೆಂಡತಿ ಮಾಡಲಾರಳು, ಅವಳಿಗೆ ಕೈಲಾಗದು" ಅದರಲ್ಲಿ ಸಾವಿರದಲ್ಲೊಂದು ಭಾಗವನ್ನಾದರು ನನ್ನ ಮೇಲೆ ತೋರಿಸಬಾರದೇ? ನಿಜ ಹೇಳಬೇಕೆಂದರೆ ಇವರ ಹೆಂಡತಿಯರು ಏಕೆ ಮಾಡಬೇಕು? ನಾನು ಹೆತ್ತದ್ದು ಇವರನ್ನೋ ಅವರನ್ನೋ. ಇವರು ಹೆತ್ತ ತಾಯಿಯ ಸೇವೆ ಮಾಡಿ ಋಣ ತೀರಿಸಿಕೊಳ್ಳ ಬಾರದೇನು? 'ತಾಯಿ' ಎಂಬ ಅಭಿಮಾನ ಇರಬೇಕಾದ ಮಕ್ಕಳಿಗೇ ಇಲ್ಲದಾಗ ಪರರ ಮಕ್ಕಳಿಗೆ ಹೇಗೆ ಬಂದೀತು?.....

"ಕೊಕ್ಕೊರೋಕೋ....."

ಕೋಳಿ ಕೂಗಿತ್ತು ಎಲ್ಲಿಯೋ.

ಅಂದರೆ ನಾಲ್ಕು ಘಂಟೆಯಾಗಿರಬೇಕು. ಪಕ್ಕದ ಮನೆಯ ಗಡಿಯಾರ ನಾಲ್ಕು ಹೊಡೆದದ್ದು ಕೇಳಿಸಲೇ ಇಲ್ಲವಲ್ಲಾ. ಅದಕ್ಕೆ ಕೊಟ್ಟ 'ಕೀ' ಬದುಕು ಮುಗಿದು ಹೋಯಿತೋ ಏನೋ.

ಅಬ್ಬಾ ಈ ಫ್ಯಾನ್ ಇಷ್ಟು ಜೋರಾಗಿ ತಿರುಗುತ್ತಿದೆಯಲ್ಲಾ..... ಚಳಿ..... ನಡುಕ ಬರ್ತಿದೆ. ಯಾರಾದರೂ ಫ್ಯಾನ್ ಆರಿಸಿದರಾಗುತ್ತಿತ್ತು. ಹೊದಿಕೆ ಪಕ್ಕಕ್ಕೆ ಜಾರಿ ಹೋಗಿದೆ. ಹೊದ್ದುಕೊಂಡರೆ ಚೆನ್ನಾಗಿರುತ್ತೆ, ಹೇಗೆ? ಕೈಗೆ ಹಿಡಿತ ಸಿಕ್ಕುತ್ತಿಲ್ಲ. ಅಯ್ಯೋ ಚಳಿ ಹೆಚ್ಚಾಗುತ್ತಿದೆ. ಒಳಗಿನಿಂದ ನಡುಕ..... ಏನು ಮಾಡಲಿ? ಮತ್ತೆ ಕೂಗಿ ಅವರನ್ನು ಎಬ್ಬಿಸೊಲ್ಲ. ಉಹುಂ..... ಈ ಸಲ ಅವರನ್ನು ಎಬ್ಬಿಸೋಲ್ಲ. ಈ ಚಳಿ ಹೆಚ್ಚಾಗಿ, ಮೈಯೆಲ್ಲಾ ಮರಗಟ್ಟಿ ಸತ್ತರೂ ಸರಿ. ನನಗೆ ಈ ಶಿಕ್ಷೆ ಆಗಬೇಕಾದ್ದೇ. ಈ ದರಿದ್ರ ಶರೀರ ತನ್ನನ್ನು ನಂಬಿಸಿ ಮೋಸ ಮಾಡಿತು. ಎಷ್ಟೋ ಆರೋಗ್ಯವಾಗಿದ್ದಂತೆ ನಂಬಿಸಿ ಒಂದು ಸಲ ಕೆಳಕ್ಕೆ ತಳ್ಳಿಬಿಟ್ಟಿತು..... ಆಗಲಿ..... ಹೀಗೆ ಸಾಯಲಿ..... ನನ್ನ ಕೈಗಳಿಗೇ ಶಕ್ತಿಯಿದ್ದಿದ್ದರೆ ಕತ್ತು ಹಿಸುಕಿ ಬಿಡುತ್ತಿದ್ದೆ..... ಎಷ್ಟು ಹಿಂಸಿಸಿದರೂ ತೃಪ್ತಿಯಾಗದು.....

ಚಳಿ..... ತುಂಬ..... ತುಂಬಾ ಹೆಚ್ಚಾಗಿದೆ..... ಒಳಗೆಲ್ಲಾ ಎಂಥದೋ ಉರಿ. ಕೈಗಳಲ್ಲಿ ಈ ಬಿಸಿಹಬೆ ಏಕೆ? ಯಾಕೆ ಹೀಗಾಗುತ್ತಿದೆ? ಎಂದೂ ಈ ರೀತಿ ಆಗಿದ್ದೇ ಇಲ್ಲ. ನನ್ನ ಕೊನೆಗಳಿಗೆ ಸಮೀಪಿಸುತ್ತಿದೆಯೇ? ಅಷ್ಟು ಅದೃಷ್ಟವೇ ನನಗೆ! ಯಮಧರ್ಮರಾಯ ಕಾಣಲಿಲ್ಲವಲ್ಲಾ. ಬೆಳಗಾಗುವುದರೊಳಗಾಗಿ ನನ್ನ ಪ್ರಾಣ ಹೋದರೆ ಎಷ್ಟು ಚೆನ್ನಾಗಿರುತ್ತೆ.

ಇದೇನಿದು? ಕಿವಿಯಲ್ಲಿ ಏನೋ ತುಂಬಿಕೊಂಡಂತೆ, ಕಿವಿಮುಚ್ಚಿ ಹೋದಂತೆ ಆಗುತ್ತಿದೆ. ಕಣ್ಣಮುಂದೆ ಕಪ್ಪು ವಲಯಗಳು ಕಾಣುತ್ತಿವೆ. ಮಿನುಗುತ್ತಿದೆ ನನಗೆ!! ನಿಜವಾಗಿಯೂ ಸತ್ತು ಹೋಗುತ್ತಿದ್ದೇನೆಯೇ ನಾನು? ಏನೋ ನನ್ನಿಂದ ಕಳಚಿಕೊಂಡು ಬೇರೆಯಾಗುತ್ತಿದ್ದಂತೆನಿಸುತ್ತದೆ. ಇದೇನೇ ಸಾವು? ಮರಣ ಯಾತನೆಯೆಂದರೆ ಇದೇನೇನು? ಎದೆಯ ಮೇಲೆ ಮಣಭಾರ

ಹೇರಿದಂತೆ..... ಹೌದು..... ನಾನು ಸಾಯುತ್ತಿದ್ದೇನೆ..... ಅಯ್ಯೋ..... ಬಾಬೂನ..... ದೊಡ್ಡೋನ್ನ..... ಮುರಳೀನ, ಕಾಂತೂನ..... ನನ್ನವರನ್ನು, ರಾಮೇಶ್ವರೀನ ನೋಡಲಾರನೆ ಇನ್ನು! ಕಾಂತೂ, ಕಮಲು ದೂರದಲ್ಲಿದಾರೆ. ಕಮಲೂಗೆ ಬಾಣಂತನ ಮಾಡಿ ಹಸುಗೂಸನ್ನು ನೋಡಬೇಕೆಂದು ಕೊಳ್ಳಲಿಲ್ಲವೇ ತಾನು? ಎಲ್ಲರಿಗೂ ದೂರವಾಗುತ್ತಿದ್ದೇನೆಯೇ? ಕೋಮಲಿ. ಉಹುಂ..... ನಾನು ಸಾಯೊಲ್ಲ..... ಸಾಯಲಾರೆ.....

ಲೋ ಬಾಬೂ..... ಡಾಕ್ಟರನ್ನು ಕರೆತಾರೋ..... ನಾನು ಬದುಕಬೇಕು..... ನೀವು ಬೈದರೂ ಹೊಡೆದರೂ ಬದುಕಿಯೇ ಇರುತ್ತೇನೆ..... ನಿಮ್ಮನ್ನೂ ಕಣ್ಣಿಂದ ನೋಡುತ್ತಾ ಹಾಸಿಗೆಯ ಮೇಲೆ ಬಿದ್ದಿದ್ದರೂ ಪರವಾಗಿಲ್ಲ..... ಬದುಕಿಯೇ ಇರ್ತೀನಿ..... ಸಾಯೊಲ್ಲ ಕಣ್ರೋ..... ಗಟ್ಟಿಯಾಗಿ ಕೂಗಬೇಕೆಂದು ಮಾಡಿದ ಪ್ರಯತ್ನ ಒಳಗೇ ಅಡಗಿ ಹೋಗುತ್ತಿದೆ..... ಉಸಿರು ಕಟ್ಟುತ್ತಿದೆ..... ಅಯ್ಯೋ.....



# ಹಂಬಲ

ಜತೆಯ ಹುಡುಗರೆಲ್ಲಾ ತಮ್ಮ ಮನೆಗಳಿಗೆ ಹೋಗಲು ತೋರುತ್ತಿರುವ ಉತ್ಸಾಹ ಕಂಡು ಮನಸ್ಸಿಗೆ ಕಿರಿಕಿರಿ ಅನಿಸುತ್ತದೆ. ನನಗೂ ಮನೆಯ ನೆನಪಾಗಿ ಬೇಸರ ಮೂಡುತ್ತದೆ. ಮನೆಗೆ ಹೋಗದೆ ಹಾಸ್ಟೆಲಿನಲ್ಲಿಯೇ ನಿಲ್ಲಲು ಉಪಾಯಗಳನ್ನು ಯೋಚಿಸಿ ಹಣ್ಣಾಗುತ್ತೇನೆ. ಕೊನೆಗೆ ಮನೆಗೆ ಹೋಗದೆ ಉಳಿಯುವುದು ಸಾಧ್ಯವೇ ಇಲ್ಲ ಅನ್ನಿಸಿ ನನ್ನಲ್ಲಿ ನಾನೇ ಸೆಟೆದುಕೊಳ್ಳುತ್ತೇನೆ. ಒಳಗೊಳಗೇ ಎಲ್ಲಿಯೋ ಪುಟ್ಟ ಆಶೆ ಇಣಿಕಿ ನೋಡುತ್ತದೆ. ಅಕಸ್ಮಾತ್ ಮನೆಯ ವಾತಾವರಣ ಬದಲಾಯಿಸಿ ನಮ್ಮ ಮನೆಯೂ ಎಲ್ಲರ ಮನೆಯಂತಿದ್ದರೆ ಎಂದು ಮನಸ್ಸಿನಲ್ಲಿ ಆಸೆಯ ಕುಡಿ ಏಳುತ್ತದೆ.

ರೈಲಿನಿಂದಿಳಿದಾಗ, ನನಗಾಗಿ ಯಾರೂ ಬಂದಿಲ್ಲ ಅಂತ ತಿಳಿದಾಗ ಅಷ್ಟೇನೂ ನೋವಾಗುವುದಿಲ್ಲ. ಅದು ಈಗಾಗಲೇ ನನಗೆ ಅಭ್ಯಾಸವಾಗಿ ಬಿಟ್ಟಿದೆ. ಆದರೆ ಮನೆಯಲ್ಲಿ ಕಾಲಿಟ್ಟಾಗ ಕೂಡಾ ಆಯಾ ಒಬ್ಬಳೇ ಕಂಡಾಗ ಮನಸು ಮುರುಟಿಕೊಳ್ಳುತ್ತದೆ. ಆಯಾ 'ಹೇಗಿದೀ, ಏನೂ' ಎಂದು ವಿಚಾರಿಸಿ ಕಾಫಿ, ತಿಂಡಿ ಕೊಡುತ್ತಾಳೆ. ತಂಗಿ ಎಲ್ಲಿ ಎಂದು ವಿಚಾರಿಸುತ್ತೇನೆ. ಪೋಲಿಯೋ ನಿಂದ ಕಾಲನ್ನು ಕಳೆದುಕೊಂಡ ತಂಗಿ ಮಲಗಿ ನಿದ್ರಿಸುತ್ತಿದ್ದ ಕೋಣೆಗೆ ಹೋಗುತ್ತೇನೆ. ಅವಳ ಮುಖ ಮುದ್ದಾಗಿ ಕಾಣುತ್ತದೆ. ಒಳಗಿನಿಂದ ಪ್ರೀತಿ, ಆತ್ಮೀಯತೆ ಉಕ್ಕಿ ಬರುತ್ತದೆ. ಹಣೆಯ ಮೇಲೆ ಕೈಯಾಡಿಸುತ್ತೇನೆ. ಕಣ್ಣು ತೆರೆದ ಅವಳಿಗೆ ನನ್ನನ್ನು ನೋಡಿ ಅಮಿತವಾದ ಸಂತೋಷವುಂಟಾಗುತ್ತದೆ. "ಅಣ್ಣಾ" ಎಂದು ಎರಡೂ ಕೈ ನೀಡುತ್ತಾಳೆ. ಅವಳನ್ನು ಎತ್ತಿ ತಂದು ಕುರ್ಚಿಯಲ್ಲಿ ಕೂರಿಸುತ್ತೇನೆ. ತಂಗಿ ಸಂತೋಷದಿಂದ ಪಟಪಟ ಮಾತನಾಡುತ್ತಾಳೆ. ಇಷ್ಟು ದಿನ ಏಕೆ ಬರಲಿಲ್ಲ ಎಂದು ಗಲಾಟೆ ಮಾಡುತ್ತಾಳೆ. ಅವಳನ್ನು ಸಮಾಧಾನ

ಮಾಡಿ ನಾನು ಅವಳಿಗಾಗಿ ತಂದ ಚಾಕೊಲೇಟ್ ಕೊಡುತ್ತೇನೆ. ಅದೆಂದರೆ ಅವಳಿಗೆ ಪ್ರಾಣ. ಅನಂತರ ಬೊಂಬೆ, ಪುಸ್ತಕ ಕೊಟ್ಟು, ಅದರಲ್ಲಿನ ಚಿತ್ರಗಳನ್ನು ತೋರಿಸಿಕೊಳ್ಳುತ್ತಾ ಕುಳಿತುಕೊಳ್ಳುತ್ತೇನೆ. ಆತ್ಮೀಯತೆಗಾಗಿ ತುಡಿದುಕೊಳ್ಳುತ್ತಿರುವ ಎರಡು ಜೀವಗಳ ನಡುವೆ ಹೊತ್ತು ಹೋದುದೇ ತಿಳಿಯುವುದಿಲ್ಲ. ಆಯಾ ಬಂದು ಊಟಕ್ಕೆಬ್ಬಿಸಿದಾಗಲೇ ಎಚ್ಚರ. ಅಪ್ಪ, ಚಿಕ್ಕಮ್ಮ ಇನ್ನೂ ಬಂದೇ ಇಲ್ಲ ಎಂದುಕೊಂಡಾಗ ಒಳಗೆ ಎದ್ದಿದ್ದ ಆಸೆಯ ಕುಡಿ ಅಲ್ಲಿಯೇ ಮುರುಟಿಕೊಳ್ಳುತ್ತದೆ. ತಂಗಿಯನ್ನು ಎತ್ತಿ ತಂದು ಡೈನಿಂಗ್ ಟೇಬಲ್ ಬಳಿ ಕುರ್ಚಿಯಲ್ಲಿ ಕೂಡಿಸಿ ಊಟ ಮಾಡಿಸುತ್ತೇನೆ.

ತಂಗಿಯನ್ನು ಪಕ್ಕದಲ್ಲಿ ಮಲಗಿಸಿಕೊಂಡು ಮಲಗುತ್ತೇನೆ. ಕತೆ ಕೇಳುತ್ತಾ ಕೇಳುತ್ತಾ ನಿದ್ದೆ ಮಾಡುತ್ತಾಳೆ ಅವಳು. ಅವಳ ಮುದ್ದು ಮುಖದಲ್ಲಿ ಸಂತೃಪ್ತಿ ಮೂಡಿದಂತೆ ಅನಿಸುತ್ತದೆ. ಅಪ್ಪ – ಅಮ್ಮನನ್ನು ಕುರಿತು ಆಲೋಚಿಸುತ್ತಾ ನಿದ್ರಿಸುತ್ತೇನೆ.

ಬೆಳಗಾಗಿ ಏಳುವ ವೇಳೆಗೆ ಬಿಸಿಲೇರಿದಂತೆನಿಸುತ್ತದೆ. ಇಷ್ಟು ಹೊತ್ತು ಮಲಗಿಬಿಟ್ಟೆನಲ್ಲಾ ಅಂದುಕೊಳ್ಳುತ್ತಿರುವಾಗಲೇ ಹೊರಗೆ ಮಾತು ಕೇಳಿಸುತ್ತದೆ.

"ಈವತ್ತು ಹೋಗೋದು ಬೇಡ, ಮೋಹನ ಮನೇಗ್ಬಂದಿದ್ದಾನೆ. ಪಾಪ, ಅವನ ಜತೆ ನಾಲ್ಕು ದಿನ ಮನೇಲಿರೋಣ." ಅದು ಚಿಕ್ಕಮ್ಮನ ಕಂಠ.

"ಅವನೇನೂ ಓಡಿಹೋಗಲ್ಲ. ಇನ್ನೂ ಸಾಕಷ್ಟು ರಜಾ ಇದೆ. ನಾಲ್ಕು ದಿನದಲ್ಲಿ ಬಂದುಬಿಡ್ತೇವಲ್ಲಾ. ಆಯಾ ಇರ್ತಾಳೆ, ಊಟ ತಿಂಡಿಗೆ ಯೋಚನೆಯಿಲ್ಲ. ನೀನು ಹೊರಡೋ ಏರ್ಪಾಟು ನೋಡು" ಅನ್ನುತ್ತಿದ್ದ ತಂದೆಯ ಕಂಠದಲ್ಲಿ ನಿರ್ಧಾರ ಧ್ವನಿಸುತ್ತದೆ.

ಉಸ್ಸೆಂದು ನಿಟ್ಟುಸಿರುಬಿಟ್ಟು ಮೇಲೇಳುತ್ತೇನೆ. ಹೊರಗೆ ಬಂದಾಗ ಅಪ್ಪ ಒಬ್ಬರೆ ಇರುತ್ತಾರೆ. "ಯಾವಾಗ ಬಂದೆ, ಹೇಗೆ ಓದುತ್ತಿದ್ದೀ, ಅಲ್ಲಿ ಎಲ್ಲಾ ಅನುಕೂಲವಾಗಿದೆಯೇ?" ಎಂದೆಲ್ಲಾ ವಿಚಾರಿಸುತ್ತಾರೆ. ಎಲ್ಲಾ ಜೀವವಿಲ್ಲದ ಪ್ರಶ್ನೆಗಳು. ಅದಕ್ಕಿಂತ ಹೆಚ್ಚಾಗಿ ಕೇಳಬೇಕಾದ್ದೇನಾದರೂ ಇದೆಯೆಂದೇ ತೋಚುವುದಿಲ್ಲ. ಅವರಿಗೆ ಕೇಳಿದ್ದಕ್ಕಷ್ಟು ಉತ್ತರ ಕೊಟ್ಟು ಬಚ್ಚಲು ಮನೆಗೆ

ಹೋಗುತ್ತೇನೆ. ಮುಖ ತೊಳೆದು ಬರುವಾಗ ಚಿಕ್ಕಮ್ಮ ಇದಿರಾಗುತ್ತಾರೆ. "ಹೇಗಿದ್ದೀ ಮೋನ?" ಎಂದು ತಲೆಯ ಮೇಲೆ ಕೈಯಾಡಿಸುತ್ತಾರೆ. ಅಷ್ಟಕ್ಕೇ ಕಣ್ಣಲ್ಲಿ ನೀರು ತುಂಬುತ್ತೆ ನನಗೆ. ಆದರೆ ಅಷ್ಟಕ್ಕಿಂತ ಹೆಚ್ಚಾಗಿ ನನ್ನನ್ನು ಪ್ರೀತಿಸುವ ಅವಕಾಶ ಚಿಕ್ಕಮ್ಮನಿಗಿಲ್ಲ ಎಂದು ಗೊತ್ತಾದ್ದರಿಂದ ಮೊಟಕಾಗಿ ಉತ್ತರಿಸಿ ಕಾಫಿ ಗುಟುಕರಿಸಲು ಪ್ರಯತ್ನಿಸುತ್ತೇನೆ.

ಮತ್ತೊಂದು ಗಂಟೆ ಕಳೆಯುತ್ತಿದ್ದಂತೆ ಅಪ್ಪ – ಚಿಕ್ಕಮ್ಮ ಹೊರಟು ನಿಲ್ಲುತ್ತಾರೆ. ಆಯಾಗೆ ಮನೆಯಲ್ಲಿ ನಿರ್ವಹಿಸಬೇಕಾದ ಬಾಧ್ಯತೆಗಳನ್ನು ಆತುರಾತುರವಾಗಿ ಒಪ್ಪಿಸುತ್ತಿರುವ ಚಿಕ್ಕಮ್ಮನ ಕಂಠ ಕೇಳುತ್ತಿರುತ್ತದೆ. ಲೇಟಾಯಿತೆಂದು ಅಪ್ಪ ಸಿಡಿಮಿಡಿ ಮಾಡುತ್ತಿರುತ್ತಾರೆ.

ಚಿಕ್ಕಮ್ಮ "ಬರ್ತೀನಿ ಮೋನ, ಬೇಗ ಬಂದು ಬಿಡ್ತೀನಿ" ಎಂದಂದು ಚಪ್ಪಲಿ ಮೆಟ್ಟಿ ತಂಗಿಯ ಕೆನ್ನೆಯ ಮೇಲೆ ಕೈಯ್ಯಾಡಿಸಿ ಮೆಟ್ಟಿಲಿಳಿಯುತ್ತಾರೆ. ಅವರ ಮುಖ ಬಾಡಿರುವುದು ಸ್ಪಷ್ಟವಾಗಿ ಕಾಣುತ್ತದೆ.

ಹೊರಗೆ ಅಪ್ಪನ ಗೊಣಗಾಟ ಕೇಳುತ್ತಲೇ ಇರುತ್ತದೆ.



ಮನಸ್ಸಿಗಾದ ಆಘಾತ ತಡೆದುಕೊಂಡು ತಂಗಿಯನ್ನು ರಮಿಸುತ್ತ ಒಂದು ಗಳಿಗೆ ಪುರುಸೊತ್ತಿಲ್ಲದಂತೆ ಎಂಗೇಜ್ ಮಾಡುತ್ತೇನೆ. ಮಧ್ಯಾಹ್ನ ತಂಗಿ ನಿದ್ದೆ ಮಾಡಿದ ಮೇಲೆ ಏನೋ ಹೆಚ್ಚು ಕೆಲಸ ಮಾಡಿ ಬಳಲಿದಂತೆನಿಸುತ್ತದೆ. ಮಂಚದ ಮೇಲೆ ಅಂಗಾತ ಮಲಗಿ ಸೂರನ್ನು ನೋಡುತ್ತಾ ಆಲೋಚನೆಯಲ್ಲಿ ಮುಳುಗುತ್ತೇನೆ. ನಿದ್ದೆಯೂ ಬಾರದು..... ಹಿಂದೆ..... ಬಹಳ ಹಿಂದೆ..... ನಮ್ಮ ಮನೆ..... ಆಗಿನ ಬದುಕು..... ಹೇಗಿತ್ತು? ಹೇಗಿತ್ತು? ಅದನ್ನು ನೆನೆಸಿಕೊಂಡರೆ ಆನಂದದಿಂದ ಕಣ್ಣು ತೇವವಾಗುತ್ತದೆ, ಮಂಜಾಗುತ್ತದೆ..... ಅಮ್ಮ..... ಅಮ್ಮ ಎಂದು ಉಚ್ಚರಿಸಿದರೆ ತಂಪೆನಿಸುತ್ತದೆ. ನಿಜವಾಗಿಯೂ ಮನೆಯೆಲ್ಲಾ ತಂಪು..... ನಂದಾದೀಪ ಬೆಳಗುತ್ತಿದ್ದಂತೆ..... ಆ ವಾತಾವರಣದಲ್ಲಿ ಹಿತವಾಗಿ ಕರಗಿ ಹೋಗುತ್ತಿರುವಂತೆ ಅನುಭವ.

ಇದೇ ಅಪ್ಪ ಆಗ ಹೇಗಿದ್ದರು? ಅಮ್ಮ, ನಾನೂ ಅಂದರೆ ಪ್ರಾಣ. ಅವರಿಗೆ ಕೆಲಸ ಮಾಡಿ ದಣಿದು ಬರುತ್ತಿದ್ದ ಅಪ್ಪ, ಅಮ್ಮನ ನಗುಮುಖ..... ದಣಿವಾರಿದ ನಂತರ ಅಪ್ಪ ಎಷ್ಟು ಸರಸವಾಗಿ ಮಾತನಾಡುತ್ತಿದ್ದರು! ಹೊಟ್ಟೆ ಬಿರಿಯುವಂತೆ ನಗುತ್ತಿದ್ದಿವಿ ನಿಜ..... ಆಗ ನಮಗೆ ನಗು, ಸಂತೃಪ್ತಿಗಳಿಂದಲೇ ಹೊಟ್ಟೆ ತುಂಬುತ್ತಿತ್ತು. ದಿನಾ ಪಲ್ಯ ಮಾಡುತ್ತಿರಲಿಲ್ಲ. ಎಷ್ಟೋ ದಿನ ಬರೀ ಸಾರೂ ಅನ್ನ. ಒಂದೊಂದು ದಿನ ಬರೀ ಮೆಂತೆಹಿಟ್ಟಿನ ಗೊಜ್ಜು, ಅನ್ನ ಊಟ ಮಾಡುತ್ತಿದ್ದೆವು. ಅದೆಷ್ಟು ರುಚಿಯಾಗಿರುತ್ತಿತ್ತು! ಎಂದಾದರೊಮ್ಮೆ ಎಳ್ಳುಪುಡಿ ಹಾಕಿದ ಹಾಗಲಕಾಯಿ ಗೊಜ್ಜು ಮಾಡಿದಾಗ ಹಬ್ಬದಂತೆಯೇ ಅಪ್ಪನಿಗೆ. ಚೆನ್ನಾಗಿ ಕಲಸಿ, ತುತ್ತು ಮಾಡಿಕೊಟ್ಟು ತಿನ್ನಿಸಿ 'ಕಾರಾನೇನೋ' ಎನ್ನುತ್ತಿದ್ದರು. "ಸ್ವಲ್ಪ ತುಪ್ಪ ಇದ್ದರೆ ಚೆನ್ನಾಗಿತ್ತು ಮಗೂಗೆ" ಅನ್ನುತ್ತಿದ್ದರು. "ಇಲ್ಲಪ್ಪಾ, ಕಾರಾನೇ ಇಲ್ಲ. ತುಂಬಾ ಚೆನ್ನಾಗಿದೆ" ಎನ್ನುತ್ತಿದೆ ನಾನು, ಕಾರಕ್ಕೆ ಕಣ್ಣಲ್ಲಿ ನೀರು ಬರುತ್ತಿದ್ದರು. ಅಪ್ಪಾ, ಅಮ್ಮ ಇಬ್ಬರೂ ನಗುತ್ತಾ ಒಂದು ಚಮಚ ಸಕ್ಕರೆ ನನ್ನ ಬಾಯಲ್ಲಿ ಹಾಕುತ್ತಿದ್ದರು.

ಸಾಯಂಕಾಲ ಆರು ಗಂಟೆಯಾಗುತ್ತಿದ್ದಂತೆ ಅಪ್ಪ ಮನೆಗೆ ಬಂದು ಬಿಡುತ್ತಿದ್ದರು. ಒಂದು ದಿನವೂ ಲೇಟಾಗುತ್ತಿರಲಿಲ್ಲ. ಎಂದಾದರೂ ಸಾವಕಾಶವಾದ ದಿನ, ನಾನೂ ಅಮ್ಮ ಬಾಗಿಲಲ್ಲೇ ಆತಂಕದಿಂದ ಎದುರು ನೋಡುತ್ತಾ ನಿಲ್ಲುತ್ತಿದ್ದೆವು. ಅಪ್ಪ ಬಂದ ಮೇಲೆ ಏನೋ ಕಾರಣ ಹೇಳುತ್ತಿದ್ದರು, ನಗುತ್ತಿದ್ದರು. ದಣಿದ ಮುಖದಲ್ಲಿ ಸಂತೃಪ್ತಿಯ ನಗೆ. ಅಪ್ಪ ಎಷ್ಟು ಚಂದ ಕಾಣಿಸುತ್ತಿದ್ದರು! ಅಮ್ಮನೂ ಅಷ್ಟೇ, ಪ್ರಪಂಚದಲ್ಲಿ ನನ್ನ ಕಣ್ಣಿಗೆ ಯಾರೂ ಅಷ್ಟು ಸುಂದರವಾಗಿ ಕಾಣಿಸಿಯೇ ಇಲ್ಲ.

ನಾನು ಸ್ಕೂಲಿಗೆ ಹೋಗಿ ಬರುತ್ತಿದ್ದಾಗಲೂ ಅಷ್ಟೇ, ಅಮ್ಮ ನನಗಾಗಿ ಕಾಯುತ್ತಾ ಮುಂಬಾಗಿಲಲ್ಲೇ ನಿಂತಿರುತ್ತಿದ್ದ ದೃಶ್ಯ ಇನ್ನೂ ಕಣ್ಣಿಗೆ ಕಟ್ಟಿದಂತಿದೆ. ಅದೊಂದು ದಿನ ಆಟದಲ್ಲಿ ತಲೆಗೆ ಪೆಟ್ಟು ತಾಗಿಸಿಕೊಂಡು ಬಂದಾಗ ಅಮ್ಮ ಎಷ್ಟು ಕಂಗಾಲಾಗಿದ್ದಳು? ತಲೆಗೆ ಮದ್ದು ಹಚ್ಚಿ, ಎದೆಗವಚಿಕೊಂಡು ಕಣ್ಣೀರು ತುಂಬಿಕೊಂಡಿದ್ದಳು. ಎಷ್ಟು ಹಿತವಾದ ಸ್ಪರ್ಶ. ಮಧುರವಾದ ಬಾಳು. ಅದು ಇನ್ನು ನಮ್ಮ ಪಾಲಿಗೆ ಎಂದೆಂದಿಗೂ ಇಲ್ಲವೇ? ಅಯ್ಯೋ.....

ತಮ್ಮನನ್ನು ಕರೆದು ತರುತ್ತೇನೆಂದು ತೌರಿಗೆ ಹೋದ ಅಮ್ಮ ಹಿಂದಿರುಗಿ ಬರಲೇ ಇಲ್ಲ. ತಮ್ಮನೂ ಬರಲಿಲ್ಲ. ಆಮೇಲೆ ಅಪ್ಪ ಹೇಳಿದರು ಅಮ್ಮ ದೇವರ ಬಳಿ ಹೋದಳೆಂದು. ನಾವೂ ಹೋಗೋಣ ಎಂದು ಸುಲಭವಾದ ಉಪಾಯ ಸೂಚಿಸಿದರೆ ನನ್ನನ್ನು ಅಪ್ಪಿಕೊಂಡು ಬಿಕ್ಕಿ ಬಿಕ್ಕಿ ಅತ್ತಿದ್ದರು. ನನ್ನನ್ನು ಬಿಟ್ಟಿರಲಾರದೆ ಸ್ಕೂಲಿನ ನೆಪ ಹೇಳಿ, ಅಪ್ಪ ನನ್ನನ್ನು ಅಮ್ಮನ ಜೊತೆ ಅಜ್ಜನ ಮನೆಗೆ ಕಳುಹಿಸದೆ ಇಲ್ಲಿಯೇ ಇರಿಸಿಕೊಂಡಿದ್ದರು. ಸ್ಕೂಲಿಗೆ ಹೋಗಲು ನನ್ನದೇನೂ ತಕರಾರಿರಲಿಲ್ಲ. ಮನೆಯಲ್ಲಿ ಶಂಕರಿ ಅಡಿಗೆ ಮಾಡಿಟ್ಟು ಹೋಗುತ್ತಿದ್ದಳು. ಅಪ್ಪ, ನಾನು ಅಮ್ಮನಿಗೋಸ್ಕರ ಕಾಯುತ್ತಾ ಕತೆ, ಗಿತೆ ಹೇಳಿಕೊಳ್ಳುತ್ತಾ ಕಾಲ ತಳ್ಳುತ್ತಿದ್ದೆವು. ಈಗಿನ್ನು ಅಮ್ಮ ಬರೋದೇ ಇಲ್ಲಾಂತ ಆದಮೇಲೆ ಏನು ಮಾಡಬೇಕೋ ದಿಕ್ಕೇ ತೋಚದಾಗಿತ್ತು. ತಲೆಮೇಲೆ ದೊಡ್ಡದೊಂದು ಗುಡ್ಡ ಬಿದ್ದಂತೆ ಆಗಿತ್ತು. ಅಪ್ಪ ಏನೋ ಕೆಲವು ದಿನ ನನ್ನನ್ನು ಮತ್ತೂ ಪ್ರೀತಿಯಿಂದ ನೋಡಿಕೊಂಡರು. ಆದರೆ ಅದರಲ್ಲಿ ಸುಖವಿರಲಿಲ್ಲ, ಸಂತೋಷವಿರಲಿಲ್ಲ. ಅಪ್ಪನ ಮುಖದಲ್ಲಿ ಮೊದಲಿನ ಕಳೆಯೂ ಇರಲಿಲ್ಲ, ತುಂಬಾ ಮಂಕಾಗಿರುತ್ತಿದ್ದರು.

ದಿನ ಕಳೆಯುತ್ತಿತ್ತು.....

ಒಂದು ದಿನ ನನ್ನನ್ನು ಶೀನಿ ಮನೆಯಲ್ಲಿರ ಹೇಳಿದರು. ಶೀನಿ ಅಪ್ಪ, ಶೀನಿ ಅಣ್ಣ ತುಂಬಾ ಒಳ್ಳೆಯವರು. ನನಗೆ ತಲೆಗೆ ಎಣ್ಣೆನೀರು ಹಾಕಿ, ಶೀನಿ ಚಕ್ಕಲಿ ಊಟ ಬಡಿಸಿ ಪ್ರೀತಿಯಿಂದ ನೋಡಿಕೊಂಡರು. ಎರಡು ದಿನ ಆದರೂ ಅಪ್ಪ ಬರಲಿಲ್ಲ. ಮಾರನೆಯ ದಿನ ಬಂದು ಕರೆದುಕೊಂಡು ಹೋದರು. ಅಪ್ಪನ ಮುಖ ಹೊಸದಾಗಿ ಕಾಣಿಸಿತು. ಸ್ವಲ್ಪ ಗೆಲುವಾಗಿದ್ದರು.

ಮನೆಯಲ್ಲಿ ಹೊಸಬರಾರೋ ಇದ್ದರು.....

"ನಿಮ್ಮ ಚಿಕ್ಕಮ್ಮ....." ಅಂದರು ಅಪ್ಪ.

ನನಗೆಲ್ಲಾ ಅರ್ಥವಾಗಿ ಹೋಯಿತು. ಹೆದರಿಕೆಯಿಂದ ನಡುಗಿ ಹೋದೆ ನಾನು. ಆದರೆ ನಾನಂದುಕೊಂಡಂಥಾದ್ದೇನೂ ಆಗಲಿಲ್ಲ. ಚಿಕ್ಕಮ್ಮ ತುಂಬಾ ಒಳ್ಳೆಯವರು. ನನ್ನನ್ನು ಪ್ರೀತಿಯಿಂದಲೆ ನೋಡುತ್ತಿದ್ದರು. ನಾನು ದೂರ

ದೂರವೇ ಇದ್ದರೂ ಅವರೇ ನನ್ನ ಹತ್ತಿರ ಬಂದು ಒಳ್ಳೇ ಮಾತಿನಲ್ಲಿ ನನ್ನನ್ನು ಬಳಿಗೆ ಕರೆದುಕೊಳ್ಳುತ್ತಿದ್ದರು.

ನನಗೆ ಇದೂ ಅಭ್ಯಾಸವಾಗುತ್ತಾ ಬಂತು. ಅಮ್ಮನನ್ನು ನೆನೆಸಿಕೊಂಡು ಅತ್ತಾಗಲೆಲ್ಲಾ ಚಿಕ್ಕಮ್ಮನಿಗೆ ಹೇಗೆ ಗೊತ್ತಾಗುತ್ತಿತ್ತೋ ಏನೋ ಇನ್ನೂ ಹೆಚ್ಚಾಗಿ ಮುದ್ದು ಮಾಡುತ್ತಿದ್ದರು. ಹೊಸ ಹೊಸ ಕತೆ ಹೇಳಿ ಮರೆಯುವಂತೆ ಮಾಡುತ್ತಿದ್ದರು.

ತಂಗಿ ಹುಟ್ಟಿದಾಗಲಂತೂ ನನ್ನ ಸಂತೋಷಕ್ಕೆ ಪಾರವೇ ಇರಲಿಲ್ಲ. ಅಷ್ಟು ಸಂತೋಷ ಒಳ್ಳೆಯದಲ್ಲವೇನೋ ಎನ್ನುವಂತೆ ಆಮೇಲಿನ ಘಟನೆಗಳು ನಡೆದು ಹೋಗಿದ್ದುವು. ಅವೆಲ್ಲದರ ವಿವರ ಈಗ್ಲೂ ನನಗೆ ಸರಿಯಾಗಿ ಗೊತ್ತೇ ಇಲ್ಲ. ತಂಗಿಗೆ ಪೋಲಿಯೋ ಆಗಿ ಇನ್ನು ಕಾಲು ಬರೋದೇ ಇಲ್ಲ ಅಂತಾದಾಗ ನಾನೂ ಚಿಕ್ಕಮ್ಮನೊಂದಿಗೆ ಅತ್ತಿದ್ದು ನೆನಪಿದೆ.

ಆ ನಂತರ ಅಪ್ಪ ಹಾಗೇಕಾದರೆಂದು ಮಾತ್ರ ನನಗೆ ಸರಿಯಾಗಿ ಗೊತ್ತಿಲ್ಲ. ಇದ್ದಕ್ಕಿದ್ದಂತೆ ಅಪ್ಪನಲ್ಲಿ ವಿಪರೀತವಾದ ಬದಲಾವಣೆ ಬರಲಾರಂಭಿಸಿತು. ಮನೆಗೆ ಯಾರು ಯಾರೋ ಬಂದು ಹೋಗುತ್ತಿದ್ದರು. ರಾಜಕೀಯ, ಅದೂ ಇದೂ ಮಾತುಕತೆ ನಡೆಯುತ್ತಿತ್ತು. ಅಪ್ಪ ಸ್ನೇಹಿತರೊಂದಿಗೆ ಸೇರಿ ಸದಾ ಎಲ್ಲೆಲ್ಲಿಗೋ ಹೋಗಿ ಬರುತ್ತಿದ್ದರು. ಚಿಕ್ಕಮ್ಮನನ್ನೂ ಬರುವಂತೆ ಕರೆಯುತ್ತಿದ್ದರು, ಚಿಕ್ಕಮ್ಮ ಹೋಗುತ್ತಿರಲಿಲ್ಲ. ಅಪ್ಪನಿಗೆ ಕೋಪ ಬರುತ್ತಿತ್ತು. ನನ್ನನ್ನಂತೂ ಅಪ್ಪ ಮೊದಲಿನಂತೆ ಮಾತೇ ಆಡಿಸುತ್ತಿರಲಿಲ್ಲ. ನನಗೂ ಯಾರೋ ಹೊಸಬರನ್ನು ನೋಡಿದಂತೆ ಅನಿಸುತ್ತಿತ್ತು. ಒಂದೊಂದು ಸಲ ಅಪ್ಪ ಹಿಂದೆ ನನ್ನನ್ನು ಎಷ್ಟು ಪ್ರೀತಿ ಮಾಡುತ್ತಿದ್ದರೆಂಬುದು ನೆನಪಾಗಿ ಅಳಬೇಕೆನಿಸಿದರೂ, ಚಿಕ್ಕಮ್ಮನ ಪ್ರೀತಿ, ತಂಗಿಯ ಮುದ್ದು ಮುಖ ಇವುಗಳಲ್ಲಿ ಅದನ್ನು ಮರೆಯುತ್ತಿದ್ದೆ.

ಬರಬರುತ್ತಾ ಮನೆ ಪೂರ್ತಿ ಬದಲಾಯಿಸಿಬಿಟ್ಟಿತು. ಇಕ್ಕಟ್ಟಾದ ಸಣ್ಣ ಮನೆಯಿಂದ ಬೇರೆ ದೊಡ್ಡ ಮನೆಗೆ ಹೋದೆವು. ಅಡಿಗೆ ಮಾಡಿಡುತ್ತಿದ್ದ ಶಂಕರಿ, ಈಗ ಇಲ್ಲಿಯೇ ಇದ್ದು ಎಲ್ಲಾ ನೋಡಿಕೊಳ್ಳುವಂತಾಯಿತು. ತಂಗಿಯನ್ನೂ ಸಹ. ಚಿಕ್ಕಮ್ಮನನ್ನೂ ಅಪ್ಪ ಬಲವಂತವಾಗಿ ತಮ್ಮ ಜತೆಯಲ್ಲಿ

ಎಳೆದೊಯ್ಯಲಾರಂಭಿಸಿದರು. ಈಗ ದಿನಾ ಮನೆಯಲ್ಲಿ ಎರಡು ಹೊತ್ತು ಪಲ್ಯ ಆಗುತ್ತಿತ್ತು. ಸಿಹಿ – ಕಾರ ತಿಂಡಿ ಆಗುತ್ತಿತ್ತು. ಇಕ್ಕಟ್ಟಾದ ಅಡಿಗೆ ಮನೆಯಲ್ಲಿ ಮೂವರು ಕುಳಿತು ಊಟ ಮಾಡುತ್ತಿದ್ದುದರ ಬದಲಾಗಿ ಡೈನಿಂಗ್ ಹಾಲ್, ಡೈನಿಂಗ್ ಟೇಬಲ್ ಬಂದಿತ್ತು. ಯಾರು ಯಾವಾಗ ಬಂದರೂ ಶಂಕರಿ ಬಡಿಸಲು ಸಿದ್ಧವಾಗಿರುತ್ತಿದ್ದಳು. ನಮ್ಮ ಅಂತಸ್ತು ಬೆಳೆದಿತ್ತು. ಆದರೆ ನಿಷ್ಕಾರಣವಾಗಿಯೇ ಇರಬೇಕು. ನನಗೆ ತೃಪ್ತಿ ಇರಲಿಲ್ಲ. ನನಗೆ ಇದು ಬೇಡ, ದಣಿದು ಬರುವ ಅಪ್ಪ, ಪ್ರೀತಿ ಮಾಡುವ ಅಪ್ಪ ಬೇಕು ಅನಿಸುತ್ತಿತ್ತು.

ದಿನಗಟ್ಟಲೆ ಅಪ್ಪ – ಚಿಕ್ಕಮ್ಮ ಇಬ್ಬರೂ ಇಲ್ಲದೆ, ನಾನೂ, ತಂಗಿ, ಶಂಕರಿ (ಈಗ ಅವಳನ್ನು ಆಯಾ ಅನ್ನುತ್ತಿದ್ದರು) ಇರಬೇಕಾಗುತ್ತಿತ್ತು. ತಂಗಿಯನ್ನು ನೋಡಿದರೆ ನನಗೆ ಪ್ರೀತಿ, ದುಃಖ, ಕರುಣೆ ಉಕ್ಕಿ ಬರುತ್ತಿತ್ತು..... ನನಗಾದರೋ ಹಳೆಯ ಸವಿ ನೆನಪುಗಳಾದರೂ ಇದೆ, ಅವಳಿಗದೂ ಇಲ್ಲ. ಅಪ್ಪ ಇನ್ನು ಎಂದಿಗೂ ಹಿಂದಿನಂತೆ ಆಗಲಾರರೇ?

ಒಂದು ದಿನ ಕೇಳಿಯೇ ಬಿಟ್ಟೆ "ಅಪ್ಪಾ, ಹೀಗೇಕೆ?" ಅಂತ.

ಒಂದು ಕ್ಷಣ ಅವರ ಮುಖದ ಮೇಲೆ ಕರಿ ನೆರಳೊಂದು ಹಾದು ಹೋದಂತೆ ಭಾಸವಾಯಿತು. ಸಿಟ್ಟು ಮಾಡಿಕೊಳ್ಳುತ್ತಾರೇನೋ, ಹೊಡೆಯುತ್ತಾರೇನೋ ಎಂದುಕೊಂಡೆ. ಉಹುಂ..... ಅದಕ್ಕಿಂತ ಹೆಚ್ಚಿನದಾದ ಉದಾಸೀನತೆಯಿಂದ ಕೂಡಿದ ನಗೆ ನಕ್ಕರು.

"ಹುಂ..... ದೊಡ್ಡೋನಾಗ್ತಿದ್ದೀ. ಈ ಸಲ ನಿನ್ನನ್ನು ಬೆಂಗ್ಳೂರಲ್ಲಿ ಹಾಸ್ಟೆಲ್‌ನಲ್ಲಿ ಬಿಟ್ಟು ಓದಿಸ್ಬೇಕು, ಆಗ ಸರಿಯಾಗತ್ತೆ" ಎಂದೆಂದು ಹೊರಟು ಹೋದರು. ನನಗೇನೂ ದುಃಖವಾಗಲಿಲ್ಲ. ಎಲ್ಲಿದ್ದರೂ ಒಂದೇ ಅನ್ನಿಸಿತು. ತಂಗಿಯದೇ ಚಿಂತೆ. ನಾನು ಇಲ್ಲದಿದ್ದರೆ ಅವಳನ್ನ ಮಾತನಾಡಿಸೋಕೆ ಇರೋಲ್ಲ, ಏನೋ ಹೇಗೆ ಹೇಳೋದು? ನಾನಿಲ್ಲವಲ್ಲಾಂತ ಆಗಲಾದರೂ ಅಪ್ಪ ಚಿಕ್ಕಮ್ಮನನ್ನು ಮನೆಯಲ್ಲಿರಲು ಬಿಡಬಹುದು ಅನ್ನಿಸಿತು. ಏನಾದರೂ ಸರಿ, ಚೆನ್ನಾಗಿ ಓದಬೇಕು, ಒಳ್ಳೇ ನೌಕರಿ ಹಿಡಿಯಬೇಕು. ತಂಗಿಯನ್ನು ಪ್ರೀತಿಯಿಂದ ನೋಡಿಕೊಳ್ಳಬೇಕು, ಅವಳು ಪ್ರೀತಿಗೆ ಹೊರತಾಗಬಾರದು ಎಂದೆಲ್ಲಾ ಆಲೋಚಿಸಿಕೊಂಡೆ.

ಹಾಸ್ಟೆಲಿನಲ್ಲಿದ್ದಾಗಲೂ ನನಗೆ ಮನೆಯದೇ ಯೋಚನೆ. ಏಕೋ ಎಲ್ಲರಂತೆ ಬಿಚ್ಚು ಮನಸ್ಸಿನಿಂದ ಹುಡುಗರೊಡನೆ ಬೆರೆಯಲು ಆಗುತ್ತಲೇ ಇಲ್ಲ. ಏನೋ ಕೊರತೆ. ಯಾವುದೋ ಕೊರತೆ ನನಗೆ. ಇಲ್ಲದ್ದು ಏನು ಎಂಬುದು ಅರ್ಥವಾಗದಿದ್ದರೂ ಅದು ಎಂದಿಗಾದರೂ ಸಿಕ್ಕುತ್ತದೆಯೇನೋ ಎಂಬ ಆಶೆ. ಓದಿನಲ್ಲಿ ಎಂದೂ ಹಿಂದೆ ಬೀಳದಿದ್ದರೂ ಮಿಕ್ಕ ವಿಷಯಗಳಲ್ಲಿ ನಿರಾಸಕ್ತಿ. ಈ ಸಲ ಮನೆಗೆ ಹೋದಾಗಲಾದರೂ ನನಗೆ ಬೇಕಾದ ತೃಪ್ತಿ ಲಭಿಸುತ್ತದೆಯೇನೋ ಎಂದುಕೊಳ್ಳುವುದು. ಮನೆಗೆ ಬಂದು ನಿರಾಶೆಯಿಂದ ಹಿಂದಿರುಗುವುದು ನನ್ನ ಪಾಲಿಗೆ ಕಟ್ಟಿಟ್ಟದ್ದೇ ಆಗಿದೆ. ಈ ಸಲವೂ ಅಷ್ಟೆ. ಅಪ್ಪ, ಚಿಕ್ಕಮ್ಮ ನಾಲ್ಕಾರು ದಿನಗಳಲ್ಲೋ ಹತ್ತಾರು ದಿನಗಳಲ್ಲೋ ಬಂದಾರು. ಚಿಕ್ಕಮ್ಮ ತಿಂಡಿ ತೀರ್ಥ ಮಾಡಿಯಾರು. ಮತ್ತೆ ಹಾಸ್ಟೆಲಿಗೆ ಪ್ರಯಾಣ. "ಬುದ್ಧಿವಂತನಾಗಿ ಓದಿಕೋ..... ಹಣ ಬೇಕಾದರೆ ಬರಿ..... ಕೆಟ್ಟ ಸಹವಾಸ ಮಾಡಬೇಡ....." ಮುಂತಾಗಿ ಅಪ್ಪನ ಹಿತವಚನಗಳು. ಎಲ್ಲವನ್ನೂ ಗಂಟು ಕಟ್ಟಿಕೊಂಡು ಪ್ರಯಾಣ ಮಾಡಬೇಕು ಎನ್ನಿಸಿದಾಗ ಗಂಟಲು ಕಟ್ಟಿದಂತಾಗಿ ಅಸ್ಪಷ್ಟವಾಗಿ ಅಮ್ಮನ ಮುಖ ಕಣ್ಣ ಮುಂದೆ ಹಾಯುತ್ತದೆ. ಅಮ್ಮ ಇಲ್ಲದೆ ಹೋಗಿದ್ದೇ ಇದಕ್ಕೆಲ್ಲಾ ಕಾರಣವೇನೋ ಎಂದು ಯೋಚಿಸುವಂತಾಗುತ್ತೆ.

ಕಣ್ಣೀರನ್ನು ಒರೆಸಿಕೊಳ್ಳುತ್ತಾ ಪಕ್ಕಕ್ಕೆ ತಿರುಗುತ್ತೇನೆ. ನಿದ್ದೆಯಲ್ಲಿಯೇ ನಗುತ್ತಿರುವ ತಂಗಿಯ ಮುಗ್ಧ ಮುಖದಲ್ಲಿ ಅಮ್ಮನನ್ನು ಕಾಣುತ್ತೇನೆ. ನಿಟ್ಟುಸಿರು ಬಿಟ್ಟು ತಂಗಿಯ ಮೈಮೇಲೆ ಕೈ ಹಾಕಿ ಕಣ್ಣು ಮುಚ್ಚುತ್ತೇನೆ.



# ಕಿತ್ತು ತಂದ ಹೂವು

ಅದೊಂದು ಭಾನುವಾರ. ಪಾರ್ವತಿ ಬೆಳಿಗ್ಗೆ ಬೇಗನೆ ಎದ್ದು ತಲೆಗೆ ಎಣ್ಣೆ ಹಚ್ಚಿಕೊಂಡು ನೀರು ಹಾಕಿಕೊಳ್ಳುವ ಪ್ರಯತ್ನದಲ್ಲಿದ್ದಳು.

ಕೆಲಸದವಳು ಲಚ್ಚಿ ಮನೆಯೆಲ್ಲಾ ಕಸಗುಡಿಸಿ ನೀರು ಹಾಕಿ ತೊಳೆಯುವ ಪ್ರಯತ್ನದಲ್ಲಿದ್ದಳು. ಇದ್ದಕ್ಕಿದ್ದಂತೆಯೇ ಲಚ್ಚಿಯು 'ಅಮ್ಮ' ಎಂಬ ಕೂಗು ಪಾರ್ವತಿಗೆ ಕೇಳಿಸಿತು. ಆ ಕೂಗಲ್ಲಿದ್ದ ಗಾಬರಿ ಅವಳನ್ನು ಕೂಡಲೇ ಅಲ್ಲಿಗೇ ಬರುವಂತೆ ಮಾಡಿತು.

"ಏನಾಯಿತೇ ಲಚ್ಚಿ" ಎನ್ನುತ್ತಾ ಪಾರ್ವತಿ ಹೊರಬಂದಳು. ಅಲ್ಲಿ ಅವಳು ಕಂಡ ದೃಶ್ಯ ಅವಳನ್ನು ದಿಗ್ಭ್ರಮೆಗೊಳಿಸಿತು.

ಚಿಂದಿ ಬಟ್ಟೆಯಲ್ಲಿ ಸುತ್ತಿದ್ದ ಕೆಂಪನೆಯ ಹಾಲುಗಲ್ಲದ ಹಸುಳೆಯನ್ನು ಕೈಗೆತ್ತಿಕೊಂಡಿದ್ದಳು ಲಚ್ಚಿ. ಮನೆ ತೊಳೆದ ನೀರು ಹೊರಗೆ ಬಂದದ್ದರಿಂದಾಗಿ ಚಿಂದಿ ಬಟ್ಟೆ ತುಸು ನೆನದಿತ್ತು. ಪ್ರಶ್ನಾರ್ಥಕವಾಗಿ ಲಚ್ಚಿಯ ಕಡೆ ನೋಡಿದ ಪಾರ್ವತಿಗೆ ಅಲ್ಲಿಯೂ ಆಶ್ಚರ್ಯ ಚಿಹ್ನೆಯೇ ಕಂಡುಬಂತು.

"ಮನೆ ತೊಳೆದು ಇಂಗೆ ಬಂದೆ ಕಣ್ರವ್ವಾ, ಈ ಮೂಲೇಲಿ ಮೂಟೆ ಇದ್ದಂತೆ ಕಾಣಿಸ್ತು. ನೋಡಿದ್ರೆ ಈ ಮಗಾ....."

ಪಾರ್ವತಿ ಮೂಕಳಾಗಿ ಕೇಳುತ್ತಿದ್ದಳು.

"ದೇವರಂಥಾ ಕೂಸು ಇಂಗೆ ಬಿಸಾಡೋಕೆ ಯಾರಿಗೆ ಮನಸ್ಸು ಬಂತೋ ಕಾಣೆ ಕಣ್ರವ್ವಾ. ನೋಡಿ ಎಂಗದೆ."

ಹತ್ತಿರ ಬಂದ ಲಚ್ಚಿಯ ಕೈಯಲ್ಲಿದ್ದ ಕೂಸನ್ನು ಅಪ್ರಯತ್ನವಾಗಿಯೇ ಎತ್ತಿಕೊಂಡಳು ಪಾರ್ವತಿ. ಅಷ್ಟೇ, ಅವಳಲ್ಲಿ ಅಡಗಿದ್ದ ಕೋಮಲ ಭಾವನೆಗಳು ಒಮ್ಮೆಗೇ ಜಾಗೃತವಾದುವು. ಬಾಗಿ ಮಗುವಿನ ಹಣೆಗೆ ಮುತ್ತಿಟ್ಟು ಎದೆಗಪ್ಪಿಕೊಂಡಳು. ಅಪರಿಚಿತವಾದ ಆ ಮಗುವಿನ ಅಪ್ಪುಗೆ ಅವಳ ಹೃದಯಕ್ಕೆ ತಂಪೆರೆದು ನೂತನೋತ್ಸಾಹವನ್ನು ಕೊಟ್ಟಿತು.

ಲಚ್ಚಿ ಮೆಟ್ಟಿಲಿಳಿದು ಸುತ್ತಲೂ ನೋಡಿಬಂದಳು. ಯಾರೂ ಕಾಣಲಿಲ್ಲ.

ಶೇಖರ ನಿದ್ದೆಯಿಂದೇಳುವ ವೇಳೆಗೆ ಪಾರ್ವತಿ ಲಚ್ಚಿಯ ಸಹಾಯದಿಂದ ಮಗುವಿಗೆ ಸ್ನಾನ ಮಾಡಿಸಿ, ಪೌಡರ್ ಹಚ್ಚುತ್ತಿದ್ದಳು.

"ಯಾರದು ಮಗು?" ಎಂದು, ಯಾರಾದರೂ ನೆಂಟರು ಮನೆಗೆ ಬಂದಿದಾರೇನೋ ಎಂದು ಸುತ್ತಲೂ ದೃಷ್ಟಿ ಹರಿಸಿದ ಶೇಖರ.

ಪಾರ್ವತಿ ನಸುನಕ್ಕಳು. ಅವಳ ಮುಖ ಹೊಸ ತೇಜಸ್ಸಿನಿಂದ ಬೆಳಗುತ್ತಿತ್ತು.

"ನಮ್ಮದೇ ಮಗು, ದೇವರು ಕೊಟ್ಟದ್ದು. ಎಷ್ಟೋ ದಿನದಿಂದ ನಾನು ಕೇಳಿಕೊಳ್ಳುತ್ತಿದ್ದ ವರ ಇಂದು ಲಭಿಸಿದೆ....." ಮೃದುವಾಗಿ ಹೇಳಿದಳು ಪಾರ್ವತಿ.

ಶೇಖರ ಮಾತಾಡದೆ ಮುಖ ತೊಳೆದುಕೊಳ್ಳಲು ಹೊರಟುಹೋದ. ಪಾರ್ವತಿ ಮೆತ್ತನೆಯ ಬಟ್ಟೆಯಲ್ಲಿ ಮಗುವನ್ನು ಸುತ್ತಿ ಹಾಸಿಗೆಯ ಮೇಲೆ ಮಲಗಿಸಿ ಬೆಚ್ಚಗೆ ಹೊದಿಸಿದಳು.

ಶೇಖರನಿಗೆ ಕಾಫಿ ಕೊಡುತ್ತಾ ಪಾರ್ವತಿ ನಡೆದ ವಿಷಯವನ್ನೆಲ್ಲಾ ವಿವರವಾಗಿ ಹೇಳಿದಳು. ಆಗಲೂ ಶೇಖರ ಮೌನ ಮುರಿಯಲಿಲ್ಲ.

"ಏಕೆ, ನಿಮಗಿಷ್ಟವಿಲ್ಲವೇ? ತಾನಾಗಿ ಬಂದ ಸಂಪತ್ತು. ಅದನ್ನು ಎತ್ತಿಕೊಂಡಾಕ್ಷಣ ನನ್ನ ಮನಸ್ಸೆಲ್ಲಾ ಹಗುರಾಗಿ ಗಾಳಿಯಲ್ಲಿ ತೇಲುತ್ತಿರುವಂತಿದೆ. ಎಷ್ಟೋ ಪೂಜೆ ಪುನಸ್ಕಾರ ಮಾಡಿ ಮಕ್ಕಳ ಪ್ರಾಪ್ತವಿಲ್ಲ ಅಂದುಕೊಂಡ ಮೇಲೆ ಈ ರೂಪದಲ್ಲಿ ಕರುಣಿಸಿದ್ದಾನೆ ದೇವರು. ನೀವು ಬೇಡ ಅನ್ನೊಲ್ಲ ತಾನೆ?"

ಶೇಖರ ತಲೆಯೆತ್ತಿ ಹೆಂಡತಿಯ ಕಡೆ ನೋಡಿದ. ಅಲ್ಲಿ ಗಂಡ ಏನನ್ನುವನೋ ಎಂಬ ಆತಂಕ, ಕಳವಳ ಉಕ್ಕಿ ಬರುತ್ತಿದ್ದ ಅವಳ ಸಂತೋಷಕ್ಕೆ

ತೆರೆ ಎಳೆದಿದ್ದುವು. ಹೆಂಡತಿಯ ಮನ ನೋಯಿಸುವ ಮನಸ್ಸಾಗಲಿಲ್ಲ ಅವನಿಗೆ. ಮೌನವಾಗಿಯೇ ಕಾಫಿ ಕುಡಿಯಲಾರಂಭಿಸಿದ.

ಪಾರ್ವತಿಗೆ ಅವನ ಮೌನ ಅಸಹನೀಯವಾಗಿತ್ತು.

"ನಿಮ್ಮ ಅಭಿಪ್ರಾಯ ಹೇಳಿ ಮತ್ತೆ, ನನ್ನ ಮಾತೇ ಸರಿ ಅಲ್ಲವೇ?"

ಶೇಖರ ಬಟ್ಟಲು ಕೆಳಗಿಟ್ಟು "ಕುಳಿತುಕೋ ಪಾರ್ವತಿ" ಎಂದ. ಪಾರ್ವತಿ ಕುರ್ಚಿಯೆಳೆದುಕೊಂಡು ಕುಳಿತಳು. ಗಂಡ ಬೇಡವೆಂದಾನೆಂಬ ಶಂಕೆಯಿಂದ ಅವಳ ಮನಸ್ಸು ತಳಮಳಗೊಂಡಿತ್ತು.

"ಪಾರೂ, ಮಗು ಯಾರದು ಅಂತಿ?"

"ನಮ್ಮದೇ ಅಂದೆನಲ್ಲ. ಯಾರಿಗೋ ಬೇಡವಾಯಿತು, ನಮ್ಮ ಮೊರೆ ಕೇಳಿದ ದೇವರು ಅದನ್ನು ನಮಗೆ ಕರುಣಿಸಿದ." ಪಾರ್ವತಿಯ ಮುಗ್ಧವಾದ ಮಾತಿಗೆ ಶೇಖರ ನಕ್ಕುಬಿಟ್ಟ.

"ಪಾರೂ, ದೇವರು ಅದೂ ಇದೂ ಅನ್ನದೆ ವಾಸ್ತವವಾಗಿ ಆಲೋಚಿಸು. ಯಾರದೋ ಮಗು, ನಮ್ಮ ಮನೆಯ ವರಾಂಡದಲ್ಲಿ ಮಲಗಿತ್ತು. ಇನ್ನು ಸ್ವಲ್ಪ ಹೊತ್ತಿಗೋ, ಕೆಲವು ದಿನಕ್ಕೋ ಅವರು ಬಂದು ಕೇಳಬಹುದು. ಅದುವರೆಗೂ ನೀನು ಜೋಪಾನ ಮಾಡುತ್ತೇನೆ ಅನ್ನುವುದಾದರೆ ಸರಿ. ಇಲ್ಲಾಂದರೆ ಪೊಲೀಸ್ ಸ್ಟೇಷನ್ನಿನಲ್ಲಿ ಒಪ್ಪಿಸಿ ಬರೋಣ."

ಪಾರ್ವತಿ ಹತಾಶಳಾದಳು. ಅವಳಿಗರಿವಿಲ್ಲದಂತೆಯೇ ಅವಳ ಕಣ್ಣುಗಳು ಹನಿಗೂಡಿದವು. ಕೆಲವು ಕ್ಷಣ ಮೌನವಾಗಿ ಕುಳಿತಿದ್ದ ನಂತರ ನಿಧಾನವಾಗಿ ಹೇಳಿದಳು.

"ಯಾರಾದರೂ ಬರುವಂತಿದ್ದರೆ ಇಲ್ಲೇಕೆ ಬಿಟ್ಟು ಹೋಗುತ್ತಿದ್ದರು. ನಿಮಗೆಲ್ಲೋ ಹುಚ್ಚು ಅಷ್ಟೆ. ಇನ್ನು ಮಗುವನ್ನು ಪೊಲೀಸ್ ಸ್ಟೇಷನ್ನಿನಲ್ಲಿ ಕೊಡುತ್ತೀನಿ ಅಂತೀರಲ್ಲ, ಅದಕ್ಕೆ ನಾನೊಪ್ಪೊಲ್ಲ. ಅಲ್ಲಿಂದ ಮಗು ಸೇರುವುದು ಅನಾಥಾಶ್ರಮಕ್ಕೆ ತಾನೆ? ತಂದೆ – ತಾಯಿಯಿಲ್ಲದ ಅನಾಥವಾಗಿ ಬೆಳೆದು ನಂತರ ಎಲ್ಲೋ ಬೀದಿ ಬಸವನಾಗಿ..... ಉಹುಂ..... ನನ್ನ ಮಗುವನ್ನು ಹಾಗೆ

ಆಗಗೊಡಲಾರೆ ನಾನು..... ಸರಿ ಸರಿ, ಮಗುವಿಗೆ ತೊಡಿಸಲು ಅಂಗಿಗಳೇ ಇಲ್ಲ, ಬೇಗ ಒಂದೆರಡು ಅಂಗಿ ಹೊಲಿದು ಅಡುಗೆ ಮಾಡುತ್ತೇನೆ..... ಗುಲಾಬಿ ಬಣ್ಣದ ಜಾಕೆಟ್ ಪೀಸ್ ಇರಬೇಕು ಮನೆಯಲ್ಲಿ..... ಭಾನುವಾರ ಆಫೀಸಿನ ಆತುರ ಇಲ್ಲ ತಾನೆ? ಮಗು ನಮ್ಮದೇ..... ನೀವು ಮತ್ತೇನೂ ಅನುಮಾನ ಇಟ್ಟುಕೋ ಬೇಡಿ....." ಎಂದು ಮತ್ತೆ ಮಾತಿಗೆ ಅವಕಾಶ ಕೊಡದೆ, ಒಂದಕ್ಕೊಂದು ಹೊಂದಿಕೆಯಿಲ್ಲದ ಮಾತುಗಳನ್ನಾಡುತ್ತಾ ಅಲ್ಲಿಂದ ಹೊರಟು ಹೋದಳು ಪಾರ್ವತಿ.

ಪಾರ್ವತಿ – ಶೇಖರರದು ಅನ್ಯೋನ್ಯ ದಾಂಪತ್ಯ. ಮದುವೆಯಾದ ನಂತರದ ನಾಲ್ಕು ವರ್ಷಗಳನ್ನು ಹಕ್ಕಿಗಳಂತೆ ಕಳೆದಿದ್ದರು. ದಿನದಿನವೂ ನಿತ್ಯನೂತನವಾಗಿತ್ತು ಅವರ ಪಾಲಿಗೆ. ಶೇಖರನನ್ನು ಸಂತೋಷಗೊಳಿಸಲು ಏನು ಮಾಡಬೇಕು ಎಂಬ ಆಲೋಚನೆಗಳಲ್ಲಿ, ಅದನ್ನು ಕಾರ್ಯರೂಪಕ್ಕೆ ತಂದು ಅವನನ್ನು ತೃಪ್ತಿಗೊಳಿಸುವುದರಲ್ಲಿ ಅವಳ ಸಮಯ ಕಳೆಯುತ್ತಿತ್ತು. ಸದಾ ಹಸನ್ಮುಖಿಯಾಗಿರುತ್ತಿದ್ದ ಪಾರ್ವತಿಯ ಮುಖದಲ್ಲಿ ನೋವಿನ ಗೆರೆ ಮೂಡಿದರೂ ಶೇಖರ ಕಳವಳಗೊಳ್ಳುತ್ತಿದ್ದ. ಅವರ ದಾಂಪತ್ಯದಲ್ಲಿ ವಿರಸವೆಂಬುದೇ ಇಲ್ಲವೆಂದಲ್ಲ, ಪ್ರಣಯ ಕಲಹಗಳು ಅದೆಷ್ಟೋ ಬಾರಿ ಇಣಿಕಿ ನೋಡಿ, ಅವರನ್ನು ಮತ್ತಷ್ಟು ಸನಿಹಗೊಳಿಸಿದ್ದುವು.

ನಾಲ್ಕು ವರ್ಷಗಳ ನಂತರ ಆಕಸ್ಮಾತ್ತಾಗಿ ಅವರ ಸಂಸಾರದಲ್ಲಿ ಅವರಿಗೇನೋ ಕೊರತೆಯಿದೆ ಎಂಬ ಭಾವನೆ ಬರತೊಡಗಿತು. ಅದೇನೆಂದು ಆಲೋಚಿಸಿ ಊಹಿಸಿಕೊಳ್ಳುವುದರಲ್ಲಿ ಮತ್ತೂ ಒಂದು ವರ್ಷ ಕಳೆದಿತ್ತು. ಮದುವೆಯಾದ ಹೊಸದರಲ್ಲಿ ಅಷ್ಟು ಬೇಗ ತಮಗೆ ಮಕ್ಕಳಾಗಬೇಕೆಂದು ಅವರು ಬಯಸಿರಲಿಲ್ಲ. ನಾಲ್ಕು ದಿನ ಹಾಯಾಗಿ ಕಳೆಯಬೇಕೆಂದೇ ಬಯಸಿದ್ದರು.

ಈಗ ಐದು ವರ್ಷಗಳ ನಂತರ ಅದನ್ನು ಕುರಿತು ತೀವ್ರವಾಗಿ ಆಲೋಚಿಸಬೇಕಾದ ಸಮಯ ಬಂದಿತ್ತು. ಪಾರ್ವತಿ ಡಾಕ್ಟರ ಬಳಿ ಹೋದಳು. ಸಣ್ಣ ಆಪರೇಷನ್ ಆಗಬೇಕೆಂದಾಗ ಪಾರ್ವತಿ ಹಿಂಜರಿಯಲಿಲ್ಲ.

ಮತ್ತೂ ಎರಡು ವರ್ಷಗಳು ಕಳೆದುವು. ಪಾರ್ವತಿ ಶೇಖರರು ಡಾಕ್ಟರ್ ಬಳಿಗೆ ಹತ್ತಾರು ಸಲ ಹೋಗಿ ಬಂದಿದ್ದರು.

ಕೊನೆಗೊಂದು ದಿನ ಅವರನ್ನು ಆಘಾತಗೊಳಿಸುವ ಸುದ್ದಿ ತಿಳಿಯಿತು – ಅದು ಅವರಿಗೆ ಮಕ್ಕಳಾಗುವ ಅವಕಾಶವೇ ಇಲ್ಲ ಎಂಬುದು.

ಕುಟುಂಬದ ವೈದ್ಯ ಮಿತ್ರ ಹೇಳಿದ್ದ. "ಶೇಖರ್, ಇದಕ್ಕಾಗಿ ನೀವು ವಿಚಾರಿಸಬಾರದು. ಮಿಸೆಸ್‌ಗೂ ಹೇಳು, ತುಂಬಾ ಮನಸ್ಸಿಗೆ ಹಚ್ಚಿಕೋ ಬೇಡ ಅಂತ. ಹೆಂಗಸರ ಸ್ವಭಾವ ಇಂತಹ ವಿಷಯಗಳಲ್ಲಿ ತುಂಬಾ ಸೂಕ್ಷ್ಮವಾಗಿರುತ್ತೆ. ನಮ್ಮ ದೇಶದ ತುಂಬಾ ಮಕ್ಕಳೇ ಮಕ್ಕಳು. ವಿಶಾಲ ಮನೋಭಾವನೆ ಬೆಳೆಸಿಕೊಳ್ಳಬೇಕು, ಅಷ್ಟೇ ಮುಖ್ಯವಾಗಿ ನಿನ್ನ ಮಿಸೆಸ್ ತುಂಬಾ ಮನಸ್ಸಿಗೆ ಹಚ್ಚಿಕೊಂಡು ಕೊರಗದಂತೆ ನೋಡಿಕೊಳ್ಳಬೇಕಾದ್ದು ನಿನ್ನ ಕರ್ತವ್ಯ. ಏನಂತಿ?"

ಆದರೆ ಪಾರ್ವತಿಯೇ ಅಲ್ಲ, ಶೇಖರನು ಅದನ್ನು ತುಂಬಾ ಮನಸ್ಸಿಗೆ ಹಚ್ಚಿಕೊಂಡಿದ್ದ. ಆದರೆ ಅವನು ಎಷ್ಟಾದರೂ ಗಂಡಸು, ಮನೆಯಿಂದ ಹೊರಗೆ ಕೆಲವಾರು ಗಂಟೆಗಳನ್ನು ಕಳೆಯುವ ಉದ್ಯೋಗಿ. ಮೆಲ್ಲಮೆಲ್ಲನೆ ತನ್ನ ಕೊರಗನ್ನು ನಾಲ್ಕಾರು ಹವ್ಯಾಸಗಳಲ್ಲಿ ಮರೆಯಲು ಪ್ರಯತ್ನಿಸತೊಡಗಿದ.

ಪಾರ್ವತಿಯೂ ಮನಸ್ಸಿಗೆ ಹಚ್ಚಿಕೊಂಡು ಕೊರಗದಿರಲು ತನ್ನ ಕೈಲಾದಷ್ಟು ಪ್ರಯತ್ನಗಳನ್ನೂ ಮಾಡುತ್ತಿದ್ದ. ಆದರೆ ಆ ದಿನ 'ತಮಗಿನ್ನು ಮಕ್ಕಳಾಗುವ ಯೋಗ ಇಲ್ಲ'ವೆಂದು ತಿಳಿದ ಕ್ಷಣ ತಗುಲಿದ ಶಾಕಿನಿಂದ ಪಾರ್ವತಿ ಚೇತರಿಸಿಕೊಳ್ಳುವುದು ಅಷ್ಟು ಸುಲಭವಾಗಿರಲಿಲ್ಲ. ಬರಬರುತ್ತಾ ಅವಳು ತನ್ನಲ್ಲಿ ತಾನೇ ಮುದುಡಿಕೊಳ್ಳತೊಡಗಿದ್ದಳು.

ದಿನಾ ಬೆಳಗಾಗುತ್ತಿತ್ತು, ಯಂತ್ರದಂತೆ ಕೆಲಸ ಕಾರ್ಯಗಳು ನಡೆಯುತ್ತಿದ್ದವು. ಸಂಜೆಯಾಗುತ್ತಿತ್ತು, ದಿನವೂ ಪಾರ್ವತಿ ಶೇಖರನಿಗಾಗಿ ಕಾಯುತ್ತಿದ್ದಳು, ಮುಗುಳ್ನಗೆ ಚೆಲ್ಲುತ್ತಿದ್ದಳು. ಸಂಜೆ ತಿರುಗಾಡಲು ಹೋಗುತ್ತಿದ್ದರು. ಇಬ್ಬರೂ ಮುಖವಾಡ ಧರಿಸಿ, ಒಬ್ಬರನ್ನೊಬ್ಬರು ಸಂತೋಷಗೊಳಿಸಲು ಪ್ರಯತ್ನಿಸುತ್ತಿದ್ದರು.

ಜೀವನವಿಡೀ ಬದುಕು ಇಷ್ಟೇ ಎಂದುಕೊಂಡಾಗ ಇಬ್ಬರಲ್ಲೂ ನಡುಕವುಂಟಾಗುತ್ತಿತ್ತು. ಆದರೆ ಅದನ್ನು ಬಾಯಿಬಿಟ್ಟು ಒಬ್ಬರೊಡನೊಬ್ಬರು ಹೇಳುತ್ತಿರಲಿಲ್ಲ.

ಪಾರ್ವತಿಯನ್ನು ಪಾರ್ಟಿಗಳಿಗೆ, ಪಿಕ್ನಿಕ್‌ಗಳಿಗೆ ಕರೆದೊಯ್ಯುತ್ತಿದ್ದ ಶೇಖರ. ಆದರೆ ಅದಾವುದರಲ್ಲೂ ಪಾರ್ವತಿ ಸುಲಭವಾಗಿ ಬೆರೆಯಲಾರದಾದಾಗ ಅದನ್ನೂ ಬಿಟ್ಟಿದ್ದ.

ಜೀವನ ಬರಡಾಗುತ್ತಿದ್ದ ಅನುಭವ ಅವರನ್ನು ಸುಡುತ್ತಿತ್ತು. ಹಾಗಾಗದಂತೆ ಅದಕ್ಕೆ ಚೇತನ ತುಂಬಲು ಇಬ್ಬರೂ ನಿರ್ವಂಚನೆಯಿಂದ ಪ್ರಯತ್ನಿಸುತ್ತಲೇ ಇದ್ದರು.

ಅವರಿಗೆ ಬದುಕು ಬೇಡವಾಗಿರಲಿಲ್ಲ, ಭಾರವಾಗಿತ್ತು ಅಷ್ಟೆ. ಅನಾಥಾಶ್ರಮದಿಂದ ಹಸುಳೆಯೊಂದನ್ನು ತಂದು ಬೆಳೆಸಿಕೊಳ್ಳಬೇಕೆಂಬ ಆಲೋಚನೆಯೂ ಬಂದಿತ್ತು. ಅದಿನ್ನೂ ಕಾರ್ಯರೂಪ ತಳೆದಿರಲಿಲ್ಲ.....

ಅಂತಹ ಸಮಯದಲ್ಲಿ ಅವರ ಮನೆಯಲ್ಲಿ ನವೋದಯವಾಗಿತ್ತು. ಪ್ರಭಾಕರ ಉದಿಸಿ ಬಂದಿದ್ದ. ನೂತನ ಶಿಶುವಿನ ಆಗಮನ ಮನೆಗೆಲ್ಲಾ ಬೆಳಕು ಕೊಟ್ಟಿತ್ತು, ಚೈತನ್ಯ ತುಂಬಿತ್ತು.

ಬರಿದೋ ಬರಿದಾಗಿದ್ದ ಮನೆ ಹೊಸ ಚೈತನ್ಯದಿಂದ ತುಂಬಿ ತುಳುಕಾಡತೊಡಗಿತ್ತು. ಪಾರ್ವತಿಗೀಗ ಬಿಡುವೆಂಬುದೇ ಇರಲಿಲ್ಲ. ಬೆಳಗಾದ ಕೂಡಲೇ ಪ್ರಭಾನ ಕೆಲಸದಿಂದಲೇ ಅವಳ ಕಾರ್ಯಕ್ರಮ ಮೊದಲಾಗುತ್ತಿತ್ತು. ಮಗುವಿಗೆ ಹಾಲು ಕುಡಿಸುವುದು, ನೀರು ಹಾಕುವುದು, ತಟ್ಟಿ ಮಲಗಿಸುವುದು ಇವುಗಳಲ್ಲಿ ಪಾರ್ವತಿ ಅಪೂರ್ವವಾದ ಸುಖವನ್ನನುಭವಿಸುತ್ತಿದ್ದಳು. ಎಳೆಯ ಮಗು ಮೆಲ್ಲಮೆಲ್ಲನೆ ಕಣ್ಣು ಹಿಗ್ಗಿಸಿ ನೋಡಲಾರಂಭಿಸಿತು – ಅಮ್ಮನನ್ನು. ಪಾರ್ವತಿಗೆ ಸ್ವರ್ಗಕ್ಕೆ ಮೂರೇಗೇಣು ಉಳಿದಿತ್ತು.

ಶೇಖರ ಹೇಳಿದಂತೆ ಮಗುವನ್ನು ಹುಡುಕಿಕೊಂಡು ಯಾರೂ ಬರಲಿಲ್ಲ. ತಿಂಗಳುಗಳು ಉರುಳಿದವು.

"ನೋಡಿ, ಪ್ರಭಾ ನಿಮ್ಮನ್ನೇ ನೋಡ್ತಿದಾನೆ. ನೋಡಿದರಾ?" ಎಂದು ಮಗುವನ್ನು ಗಂಡನ ಕೈಗೆ ಕೊಡುತ್ತಿದ್ದಳು. ಮೊದಮೊದಲು ಶೇಖರನಿಗೆ ಅಷ್ಟು ಆತ್ಮೀಯತೆ ಏರ್ಪಡದಿದ್ದರೂ ತನ್ನ ನಗು, ಕೇಕೆಗಳಿಂದ ಅವನ ಮನಸ್ಸನ್ನು ಸೆರೆಹಿಡಿಯಲು ಪ್ರಭಾನಿಗೆ ಹೆಚ್ಚು ದಿನ ಬೇಕಾಗಿರಲಿಲ್ಲ.

ಶೇಖರ ಈಗೀಗ ಆಫೀಸಿನಿಂದ ಮನೆಗೆ ಧಾವಿಸಿ ಬರುತ್ತಿದ್ದ. ಬಂದ ಕೂಡಲೇ ಮಗು ಕಾಣಿಸದಿದ್ದರೆ ಅವನಿಗೇನೂ ತೋಚುತ್ತಿರಲಿಲ್ಲ. ನಿದ್ದೆ ಮಾಡುತ್ತಿದ್ದರೂ ಎಬ್ಬಿಸಿ ಮುದ್ದಾಡಲು ಪ್ರಯತ್ನಿಸುತ್ತಿದ್ದ.

ಪಾರ್ವತಿ ನಗುತ್ತಿದ್ದಳು.

"ನಿಮಗೆ ಪ್ರಭಾ ಬಂದಾಗಲಿಂದ ನನ್ನ ನೆನಪೇ ಆಗಲೊಲ್ಲದು. ಸುಖವಾಗಿ ನಿದ್ದೆ ಮಾಡುತ್ತಿರುವ ಮಗುವನ್ನು ಎಬ್ಬಿಸದಿದ್ದರೆ ನನ್ನೊಡನೆ ಒಂದೆರಡು ಗಳಿಗೆ ಮಾತನಾಡಬಾರದೇನು?" ಎಂದು ಹುಸಿ ಮುನಿಸಿನಿಂದ ಛೇಡಿಸುತ್ತಿದ್ದಳು.

ಆದರೆ ಆಗಲೂ ಅವನು ಸಂಯಮಿಯಾಗಿರಲು ಪ್ರಯತ್ನಿಸುತ್ತಿದ್ದ. ಪಾರ್ವತಿಗೂ ಅದೇ ಹೇಳುತ್ತಿದ್ದ. ಹೆಚ್ಚು ಕಾಲ ಅವನಿಗೇ ಅದು ಸಾಧ್ಯವಾಗಲಿಲ್ಲ. ಮುದ್ದು ಮಗುವಿನ ಹಿತವಾದ ಸ್ಪರ್ಶ ಅವನಲ್ಲಿ ಅಡಗಿದ್ದ ಕೋಮಲ ಭಾವನೆಗಳನ್ನು ಹೊಡೆದೆಬ್ಬಿಸುತ್ತಿತ್ತು.

ಮಗುವಿಗೆ ಹಲ್ಲು ಬಂದಾಗ ಜ್ವರ, ನೆಗಡಿ, ಕೆಮ್ಮು ಇವುಗಳಿಂದ ತೀವ್ರವಾಗಿ ನರಳುತ್ತಿದ್ದಾಗ ಪಾರ್ವತಿ ಅರ್ಧವಾಗಿ ಹೋಗುತ್ತಿದ್ದಳು. ಅವನ ಆರೈಕೆಯಲ್ಲಿ ಅವಳಿಗೆ ಹಸಿವು, ನಿದ್ದೆಗಳ ಪರಿವೆಯೇ ಇರುತ್ತಿರಲಿಲ್ಲ. ಮತ್ತೆ ಮಗು ಚೇತರಿಸಿಕೊಂಡು ಗೆಲುವಾದ ಕೂಡಲೇ ಪ್ರಪಂಚವನ್ನೇ ಜಯಿಸಿದಷ್ಟು ಸಂತೋಷ.

ತಾನು ಹೆರಲಿಲ್ಲ, ಆದರೂ ತಾನು ತಾಯಿ ಎಂಬ ಭಾವನೆ ಅವಳನ್ನು ಪುನೀತಳನ್ನಾಗಿ ಮಾಡುತ್ತಿತ್ತು. ಮೂರು ವರ್ಷಗಳವರೆಗೆ ಪ್ರಭಾ ಆಗಾಗ ಅನಾರೋಗ್ಯಕ್ಕೆ ಈಡಾಗುತ್ತಿದ್ದ.

ಅನಂತರ ಪ್ರಭಾನ ಆರೋಗ್ಯ ಎಂದೂ ಕೆಡಲಿಲ್ಲ. ಮಗು ತುಂಬಿಕೊಂಡು ಮುದ್ದಾಗಿ ಕಾಣತೊಡಗಿದ.

ಕೆಂಪುಮಿಶ್ರಿತ ಬಿಳುಪು ಮೈಬಣ್ಣ, ಹಾಲುಗಲ್ಲ, ಮುಟ್ಟಿದರೆ ಬಾಡುತ್ತಾನೇನೋ ಎನ್ನುವಂತಿದ್ದ. ಅವನ ಚುರುಕು ಕಣ್ಣು, ಮೋಹಕ ನಗೆ ಎಂತಹವರನ್ನೂ ಆಕರ್ಷಿಸುತ್ತಿತ್ತು.

ಈಗ ನರ್ಸರಿಗೆ ಹೋಗತೊಡಗಿದ್ದ ಪ್ರಭಾ. ಚಿಕ್ಕಪುಟ್ಟ ಪದ್ಯಗಳನ್ನು ಹೇಳುವುದನ್ನು ಕಲಿತಿದ್ದ.

ದಿನಾ ಸಾಯಂಕಾಲ ತಾಯಿ ದೇವರ ದೀಪ ಹಚ್ಚುವಾಗ ತಾನೂ ಕೈಮುಗಿದು 'ಶುಕ್ಲಾಂ ಭರದರಂ' ಹೇಳುತ್ತಿದ್ದ. ಆ ನಂತರ ಅವನನ್ನು ಕೂಡಿಸಿಕೊಂಡು ಇಂಗ್ಲೀಷ್, ಕನ್ನಡ ಪದ್ಯಗಳನ್ನು ಹೇಳಿಕೊಡುತ್ತಿದ್ದಳು ಪಾರ್ವತಿ.

"ನೋಡಿ, ಇವನೆಷ್ಟು ಪದ್ಯ ಕಲಿತಿದಾನೆ ಅಂತ" ಎಂದು ಸಂಭ್ರಮದಿಂದ ಗಂಡನ ಮುಂದೆ ಮಗನ ಬುದ್ಧಿವಂತಿಕೆಯನ್ನು ಪ್ರದರ್ಶಿಸುತ್ತಿದ್ದಳು. ಶೇಖರ ತೃಪ್ತಿಯಿಂದ ತಾಯಿ ಮಕ್ಕಳನ್ನು ನೋಡುತ್ತಿದ್ದ.

ಪ್ರಭಾ ಶಾಲೆಗೆ ಹೋಗಲಾರಂಭಿಸಿದ್ದ. ಪ್ರಭಾ ಸಹಜವಾಗಿ ಮೃದು ಮನಸ್ಸಿನವ. ಆಟಪಾಟಗಳಲ್ಲಿ ಜಾಣ. ನೆರೆಹೊರೆಯ ಮಕ್ಕಳೊಂದಿಗೆ ಎಂದೂ ತಂಟೆ ತಕರಾರು ತರುತ್ತಿರಲಿಲ್ಲ. ಆದರೆ ಎಂದಾದರು ಅವನು ತಪ್ಪು ಮಾಡಿದಾಗ ಪಾರ್ವತಿ ಅವನನ್ನು ಮುದ್ದುಮಾಡಿ ಕೆಡಿಸುವ ತಪ್ಪನ್ನು ಮಾಡುತ್ತಿರಲಿಲ್ಲ. ತಾಯಿಯ ಶಿಕ್ಷಣದಲ್ಲಿ ಶಿಸ್ತಿನಿಂದ ಬೆಳೆಯತೊಡಗಿದ ಪ್ರಭಾ.

ಹೆಚ್ಚಾಗಿ ಹೊರಗೆ ಹುಡುಗರೊಂದಿಗೆ ಆಡುವುದಕ್ಕಿಂತಾ ತಾಯಿಯ ಸೆರಗು ಹಿಡಿದು ಹಿಂದೆ ತಿರುಗಾಡುವುದೇ ಪ್ರಭಾಕರನಿಗೆ ಹಿತವಾಗಿರುತ್ತಿತ್ತು. ಪಾರ್ವತಿಯೇ ಅವನನ್ನು ಓರಗೆಯವರೊಂದಿಗೆ ಆಡಲು ಕಳುಹಿಸುತ್ತಿದ್ದಳು. ಆದರೂ ಆಗಾಗ ಮಧ್ಯೆ ಮಧ್ಯೆ ಬಂದು ತಾಯಿ ಏನು ಮಾಡುತ್ತಿದ್ದಾಳೆ ಎಂದು ನೋಡಿ ಹೋಗದಿದ್ದರೆ ಅವನಿಗೆ ಸಮಾಧಾನವೇ ಇರುತ್ತಿರಲಿಲ್ಲ. ಜತೆಯವರು ಅವನನ್ನು 'ಕೂಸು ಮರಿ' ಎಂದು ಹಾಸ್ಯ ಮಾಡುತ್ತಿದ್ದುದೂ ಉಂಟು.

ತಂದೆ – ತಾಯಿಯರ ನೆರಳಲ್ಲಿ ಸೊಂಪಾಗಿ ಬೆಳೆದು ದೊಡ್ಡವನಾಗುತ್ತಾ ಹತ್ತು ಹುಟ್ಟಿದ ಹಬ್ಬಗಳನ್ನು ಮಾಡಿಕೊಂಡ ಪ್ರಭಾಕರ.

ಅದೊಂದು ಭಾನುವಾರ ಬೆಳಗನ್ನು ಪಾರ್ವತಿ ತನ್ನ ಜೀವನದಲ್ಲಿ ಸುದಿನವೆಂದು ಭಾವಿಸಿದ್ದಳು.

ಆದರೆ ಅಂತಹುದೇ ಇನ್ನೊಂದು ಭಾನುವಾರದ ಸಂಜೆ ತಮ್ಮ ಪಾಲಿಗೆ ದುರ್ದಿನವಾಗುತ್ತದೆಯೆಂದು ಅವಳು ತನ್ನ ಕನಸು ಮನಸ್ಸಿನಲ್ಲಿಯೂ ನೆನೆಸಿರಲಿಲ್ಲ.

ಅಂದು ಸಂಜೆ ಶೇಖರ – ಪಾರ್ವತಿ ಪ್ರಭಾನೊಂದಿಗೆ ಹೊರಗೆ ಹೊರಡುವ ಸಿದ್ಧತೆ ನಡೆಸಿದ್ದರು. ವಯಸ್ಸಾದ ಲಚ್ಚಿ ಬೇಗ ಬೇಗ ಕೆಲಸ ಮುಗಿಸಲು ಪ್ರಯತ್ನಿಸುತ್ತಿದ್ದಳು. ತೆರೆದ ಬಾಗಿಲಿನಿಂದ ಒಳಕ್ಕೆ ಹೆಜ್ಜೆ ಇಡುತ್ತಿದ್ದ ಹೊಸ ಮುಖ ಕಂಡು "ಯಾರು ಬೇಕ್ರವ್ವಾ" ಎಂದು ಕೇಳಿದಳು. ಆದರೆ ಆಕೆ ಉತ್ತರ ಕೊಡದೆ ನೇರವಾಗಿ ಮನೆಯೊಳಕ್ಕೆ ಪ್ರವೇಶಿಸಿದಳು. ಲಚ್ಚಿ ಯಾರೊಂದಿಗೋ ಮಾತನಾಡಿದ್ದನ್ನು ಕೇಳಿ ಪಾರ್ವತಿ ಕೋಣೆಯಿಂದ ಹೊರಬಂದಳು. ಅಪರಿಚಿತೆಯ ಮುಖ ಕಂಡು,

"ಬನ್ನಿ, ಯಾರು ಬೇಕಾಗಿತ್ತು?" ಎಂದಳು.

ಆಕೆ ಒಂದು ಕ್ಷಣ ಪಾರ್ವತಿಯ ಮುಖವನ್ನೇ ದಿಟ್ಟಿಸಿ ನೋಡಿ ನಂತರ ನಿಧಾನವಾಗಿ "ನಾನು ಪ್ರಭಾನ ತಾಯಿ, ಅವನನ್ನು ಕರೆದೊಯ್ಯಲು ಬಂದಿರುವೆ" ಎಂದಳು.

ಪಾರ್ವತಿಗೆ ತಲೆ ತಿರುಗಿ ಕಣ್ಣು ಕತ್ತಲಿಟ್ಟಂತಾಯಿತು. ಸಾವರಿಸಿಕೊಂಡು ಗೋಡೆಗಾತು ನಿಂತುಕೊಂಡಳು. ಅವಳ ಮುಖ ದೆವ್ವವನ್ನು ನೋಡಿದಂತೆ ಬಿಳಿಚಿಕೊಂಡಿತ್ತು.

ಆ ವೇಳೆಗೆ ಶೇಖರನೂ ಹೊರಗೆ ಬಂದಿದ್ದ. ತನ್ನನ್ನು ತಾನು ಸಂಭಾಳಿಸಿಕೊಂಡು ಆಕೆಗೆ ಕೂರಲು ಹೇಳಿದ.

"ನನಗೆ ಹೆಚ್ಚು ಸಮಯವಿಲ್ಲ. ಪ್ರಭಾಕರನನ್ನು ಕಳುಹಿಸಿದರೆ ನಾನು ಬೇಗನೆ ಹೊರಟು ಹೋಗುತ್ತೇನೆ. ಅವನನ್ನು ಇಷ್ಟು ದಿನದಿಂದ ಬೆಳೆಸಿದ್ದಕ್ಕೆ ನಾನು ಚಿರಋಣಿ. ನಿಮಗೆ ದುಃಖವಾಗುತ್ತೆ ನಿಜ, ಆದರೆ ಬೇರೆ ಉಪಾಯವಿಲ್ಲ. ಅವನು ನನಗೆ ಬೇಕು" ಎಂದಳು.

ಪಾರ್ವತಿಯ ಹೃದಯದಲ್ಲೆದ್ದಿದ್ದ ಗೊಂದಲ ಯಾರಿಗೂ ಅರ್ಥವಾಗುವಂತಿರಲಿಲ್ಲ.

ಕೈಯಲ್ಲಿನ್ನೂ ಪೊರಕೆ ಹಿಡಿದು ನಿಂತಿದ್ದ ಲಚ್ಚಿ ಒಂದು ಹೆಜ್ಜೆ ಮುಂ ಬಂದಳು.

"ಯಾರವ್ವಾ ನೀನು, ಒಳ್ಳೇ ಸಂದಾಕೈತಲ್ಲಾ. ಬುದ್ಧಿ ಗಿದ್ದಿ ಐತೊ ಇಲ್ವೋ, ಹುಚ್ಚಾಸ್ಪತ್ರೆಯಿಂದ ಬಂದಂಗದೆಯಲ್ಲಾ, ನಡೆ, ನಡೆ ಆಚೆ."

"ಇಲ್ಲಾ, ಇಲ್ಲಾ, ನೀನೇ ಸಾಕ್ಷಿ. ಹತ್ತು ವರ್ಷದ ಕೆಳಗೆ ಇದೆ ವರಾಂಡಾದಲ್ಲಿ ನೀನೇ ಮಗುವನ್ನೆತ್ತಿಕೊಂಡು ಒಳಗೆ ಹೋದೆ – ಹಸಿರು ಬಣ್ಣ ಚಿಂದಿಯಲ್ಲಿ ಸುತ್ತಿದ ಮಗು ಅಲ್ಲವೇ?"

"ಓ..... ಅಂಗೋ, ಅಂಗಾದ್ರೆ ನೀನೊಂದು ಮಗಾ ಎತ್ತು ಇಲ್ಲಿ ಮಡಗಿ ಅನ್ನು, ಅದನ್ಯಾಕೆ ಸಲಯಿ ಮಹಾರಾಣಿ ಅಂಗೆ ನೀ ಬತ್ತಿದ್ದಂಗೆ ನಿಂ ಕೊಡೋಕೆ ಕೂಲಿಯವರ್ನ ಇಕ್ಕಿದೀಯಾ ಇಲ್ಲಿ..... ನಾಚಿಕೆ ಆಗಾಕಿಲ್ವಾ ಮಾತು ಏಳಾಕೆ. ನಾಯಿ ಗೀಯಿ ಎತ್ಕೊಂಡೋಗಿದ್ದಾತು..... ಮರ್ಯಾದೆಯಾ ಆಚೆ ವೋಗು" ಎಂದು ಗದರಿದಳು ಲಚ್ಚಿ.

ಆಕೆ ಹತಾಶಳಾಗಿ ಮೋರೆ ಕೆಳಗೆ ಹಾಕಿ ಕುರ್ಚಿಯಲ್ಲಿ ಕುಳಿತುಕೊಂಡಳು ಶೇಖರ–ಪಾರ್ವತಿಯರಿಗೆ ತನ್ನ ದೈನ್ಯ ಪರಿಸ್ಥಿತಿಯನ್ನು ವಿವರಿಸಲು ಪ್ರಯತ್ನಿಸಿದಳು

ಹತ್ತು ವರ್ಷಗಳ ಕೆಳಗೆ ಇನ್ನೂ ಹೈಸ್ಕೂಲು ಓದಿನಲ್ಲಿರುವಾಗಲೆ ಪ್ರೇಮಪಾಶದಲ್ಲಿ ಸಿಲುಕಿದ್ದಳು ಹುಡುಗಿ ದೇವಕಿ. ಅರಿಯದ ಹುಡುಗಿ ಇನ್ನೂ ಒಂದು ಹೆಜ್ಜೆ ಮುಂದಿಟ್ಟು ಫಲಿತವಾಗಿ ಬಂದ ಪ್ರಕೃತಿ ಉಡುಗೊರೆಯನು ಗರ್ಭದಲ್ಲಿ ಧರಿಸಿದಾಗ ದಿಕ್ಕುಗಾಣದೆ ಕಂಗೆಟ್ಟಿದ್ದಳು. ಬಡ ತಂದೆ–ತಾಯಿಯರಿ ಇದನ್ನು ಹೇಳುವ ಧೈರ್ಯವೂ ಇಲ್ಲದೆ ಪ್ರೇಮಿಯೊಂದಿಗೆ ಓಡಿ ಬಂದಿದ್ದಳು ಅವನೇನೋ ಗುಡಿಯಲ್ಲಿ ತಾಳಿ ಕಟ್ಟಿದ್ದ. ಆದರೆ ಜೀವಿಸಲು ಮಾರ್ಗವಿರಲಿಲ್ಲ ಇಬ್ಬರು ಚಿಕ್ಕವರು, ಅನಾನುಭವಿಗಳು. ಸಂಪಾದನೆಗೆ ಮಾರ್ಗ ಹುಡುಕುತ್ತಿರು ವಾಗಲೇ ಒಂದು ದಿನ ಹೊರಗೆ ಹೋದವನು ತಿರುಗಿ ಬರಲೇ ಇಲ್ಲ ಏನಾದನೆಂಬುದೇ ತಿಳಿಯಲಿಲ್ಲ. ಆಗ ಊರಿನಲ್ಲಿ ಗಲಾಟೆಗಳಾಗುತ್ತಿದ್ದುದುಂಟು ಆಗ ದುಂಡಗರನ್ನೂ ಪ್ರೇಕ್ಷಕರನ್ನೂ ಕಲೆಹಾಕಿ ವ್ಯಾನುಗಳಲ್ಲಿ ಹತ್ತಿಸಿ ಜೈಲಿ ಕರೆದೊಯ್ದದ್ದೂ ಉಂಟು. ಹಾಗೇನಾದರೂ ಆಗಿರಬಹುದು.

ಆದರೆ ಪಾಪದ ಹುಡುಗಿ, ದಿನ ತುಂಬುತ್ತಿದ್ದ ದೇವಕಿ, ಮಾಡಬೇಕಾದರೂ ಏನನ್ನು?

ಸರ್ಕಾರದ ಆಸ್ಪತ್ರೆಯಲ್ಲಿ ಮಗು ಹುಟ್ಟಿತ್ತು. ಅದನ್ನು ನೋಡಿ ಸಂತೋಷಪಡುವ ಸ್ಥಿತಿಯಲ್ಲಿ ಅವಳೇನೂ ಇರಲಿಲ್ಲ. ಆದ್ದರಿಂದಲೇ ಮಗುವನ್ನು ಇವರ ಮನೆಯ ವರಾಂಡಾದಲ್ಲಿ ಮಲಗಿಸಿ ಲಕ್ಷ್ಮಿ ನಿಂತಿದ್ದು, ಕದ್ದು ನೋಡಿ ಮರೆಯಾಗಿದ್ದಳು. ಅನಂತರ ಅವಳು ಪಟ್ಟ ಬವಣೆ ಹೇಳತೀರದು. ಯಾರು ಯಾರ ಸಹಾಯ ಪಡೆದು ನರ್ಸ್ ಟ್ರೈನಿಂಗ್ ಮಾಡಿಕೊಂಡಿದ್ದಳು. ದೂರದ ಊರಲ್ಲಿ ಕೆಲಸ. ಆದರೆ ಅವಳ ಪ್ರಾಣ ಸದಾ ಅವಳ ಮಗನಿಗಾಗಿ ತುಡಿದುಕೊಳ್ಳುತ್ತಲೇ ಇತ್ತು. ಅದೇ ಕೆಲಸವಾಗಿ ಆಗಾಗ ಬಂದು ಮಗುವನ್ನು ದೂರದಿಂದಲೇ ನೋಡಿ ಹೋಗುತ್ತಿದ್ದಳು. ಮಗನನ್ನು ಕೇಳುವ ಧೈರ್ಯ, ಅವನನ್ನು ಪೋಷಿಸುವ ಚೈತನ್ಯ ಅವಳಲ್ಲಿರಲಿಲ್ಲ.

ಇದೀಗ ಅವಳ ಸುದೈವ ತೆರೆದಿತ್ತು. ಅವಳ ಪ್ರೇಮಿ ಹಿಂದಿರುಗಿದ್ದ. ಅವನೂ ಅಷ್ಟಿಷ್ಟು ಸಂಪಾದಿಸುತ್ತಿದ್ದ. ಮಗನನ್ನು ಪೋಷಿಸುವ, ವಿದ್ಯ ಕಲಿಸುವ ಚೈತನ್ಯ ಬಂದಿತ್ತು.

ದೇವಕಿ ಕಣ್ಣೀರಿಡುತ್ತಾ ಹೇಳಿದಳು.

"ಅಮ್ಮಾ, ನಿಮ್ಮ ಋಣ ಈ ಜನ್ಮದಲ್ಲಿ ತೀರಿಸುವಂತಹುದಲ್ಲ. ಅವನನ್ನು ಬೆಳೆಸಿದ ನಿಮಗೆ ಕರುಳಿನ ಸೆಳೆತ ಎಂತಹುದೆಂಬುದು ತಿಳಿದಿರಬಹುದು. ನೀವು ಖಂಡಿತವಾಗಿ ಅವನನ್ನು ನನಗೆ ಕೊಡುವುದಿಲ್ಲವೆಂದರೆ ನಾನೇನೂ ಮಾಡಲಾರೆ. ಬರಿಯ ಕೈಗಳಲ್ಲೇ ಹಿಂದಿರುಗುತ್ತೇನೆ. ಆದರೆ ನಾನು ಹೊತ್ತು ಹೆತ್ತ ಮಗನ ಮೇಲಿನ ಮೋಹ ಕಡಿದುಕೊಳ್ಳಲಾರದಾಗಿದ್ದೇನೆ. ನಿಮ್ಮನ್ನು ಬೇಡಿಕೊಳ್ಳುತ್ತಿದ್ದೇನೆ. ಇದರ ಮೇಲೆ ನಿಮ್ಮ ಇಷ್ಟ."

ಶೇಖರ ಪಾರ್ವತಿಯ ಕಡೆ ನೋಡಿದ. ಪಾರ್ವತಿ ಬಗ್ಗಿಸಿದ ತಲೆಯೆತ್ತಲೇ ಇಲ್ಲ. ನೀಟಾಗಿ ಡ್ರೆಸ್ ಮಾಡಿಕೊಂಡು ಬಂದು ಕೋಣೆಯ ಬಾಗಿಲ ಬಳಿ ನಿಂತಿದ್ದ ಪ್ರಭಾ ಪಿಳಿ ಪಿಳಿ ಕಣ್ಣು ಬಿಡುತ್ತಿದ್ದ.

ಎಷ್ಟು ಹೊತ್ತಾದರೂ ಗಂಡ – ಹೆಂಡತಿ ಬಾಯಿ ಬಿಡಲೇ ಇಲ್ಲ. ಶೇಖರ ಏನು ಹೇಳುತ್ತಾನೆಂದು ಪಾರ್ವತಿಗೆ ಗೊತ್ತು. ಆದ್ದರಿಂದಲೇ ಅವಳು ತಲೆಯೆತ್ತಿ ಅವನ ಕಡೆ ನೋಡುವ ಸಾಹಸವನ್ನೇ ಮಾಡಲಿಲ್ಲ. ಇದು ತಮಗೆ ಮುಖ್ಯವಾಗಿ ಪಾರ್ವತಿಗೆ ತಡೆದುಕೊಳ್ಳಲಾರದಂತಹ ಆಘಾತ ಎಂಬುದು ಶೇಖರನಿಗೆ ತಿಳಿಯದ ವಿಷಯವೂ ಆಗಿರಲಿಲ್ಲ. ಆದರೆ ಹೃದಯ ವಿದ್ರಾವಕವಾದ ಈ ಪರಿಸ್ಥಿತಿಯನ್ನು ಅವರು ಎದುರಿಸಲೇಬೇಕಾಗಿತ್ತು.

ಪ್ರಭಾ ಮೆಲ್ಲನೆ ಹೆಜ್ಜೆಯಿಡುತ್ತಾ ತಾಯಿಯ ಬಳಿ ಬಂದ. "ಅಮ್ಮಾ ನನ್ನನ್ನೆಲ್ಲೂ ಕಳುಹಿಸಬೇಡಮ್ಮಾ, ನಾ ಹೋಗೊಲ್ಲ" ಎಂದ. ಅವನ ಸೌಮ್ಯವಾದ ಮುಖದ ಮೇಲೆ ಭೀತಿಯ ಕರಿನೆರಳು ಹಬ್ಬಿತ್ತು.

ಶೇಖರ ಮಗನನ್ನು ಹತ್ತಿರಕ್ಕೆಳೆದುಕೊಂಡು ತಬ್ಬಿಕೊಂಡ. ಹಣೆಯ ಮೇಲೆ ಮುತ್ತಿಕ್ಕಿ, ತೊಡೆಯ ಮೇಲೆ ಕೂರಿಸಿಕೊಂಡು ಹೇಳಿದ.

"ಮಗೂ, ಆಕೆ ನಿನ್ನ ಹೆತ್ತ ತಾಯಿ. ಆಕೆ ಹೇಳಿದ್ದನ್ನೆಲ್ಲಾ ಕೇಳಿದೆ ತಾನೆ? ಈಗ ಕೆಲವು ದಿನ ಆಕೆಯ ಜತೆ ಹೋಗಿ ಬಾ, ಏನೂ?" ಎಂದ.

ಶೇಖರ ಬಹಳ ಹೊತ್ತು ದೇವಕಿಯೊಂದಿಗೆ ಮಾತಾಡಿದ. ಮತ್ತೂ ಮತ್ತೂ ವಿವರಗಳನ್ನು ಕೇಳಿದ. ಮಗನ ಬಗ್ಗೆ ಅವಳಿಗಿರುವ ಕಳಕಳಿಯನ್ನು ಖಾತ್ರಿ ಪಡಿಸಿಕೊಂಡ.

ಕೊನೆಗೆ ಪ್ರಭಾನನ್ನು ದೇವಕಿ ಕರೆದುಕೊಂಡು ಹೋಗುವುದೆಂದು ನಿಶ್ಚಿತವಾಯಿತು.

ಅವನ ಎಳೆಯ ಮುಖದ ಮೇಲೆ ಕಾಠಿಣ್ಯದ ಗೆರೆಯೊಂದು ಹಾದು ಹೋಯಿತು.

ಪಾರ್ವತಿ ಮಗನನ್ನು ಕಟ್ಟಿಕೊಂಡು ಅಳುತ್ತಲೇ ಇದ್ದಳು. "ಅಮ್ಮಾ, ನನ್ನನ್ನು ಕಳಿಸಬೇಡ. ಕಳಿಸೋಲ್ಲ ಅನ್ನಮ್ಮಾ" ಎಂದು ಪದೇ ಪದೇ ತಾಯಿಯನ್ನು ಬೇಡಿಕೊಂಡ.

ಅವಳಿಗೂ ಹಾಗನ್ನಬೇಕೆಂದೇ ಅನ್ನಿಸುತ್ತಿತ್ತು. ಕಳುಹಿಸುವುದಿಲ್ಲವೆಂದು ಖಂಡಿತವಾಗಿ ಹೇಳುವ ಹಕ್ಕು ತನಗಿದೆಯೆಂದು ಅವಳ ನಿಜವಾದ ಅಭಿಪ್ರಾಯ.

ಆದರೆ ಅದನ್ನು ಇತರರು ಮನ್ನಿಸಲಾರರೆಂದೂ ಅವಳಿಗೆ ಗೊತ್ತಿತ್ತು. ವಿಧಿಯ ಕೂರಲಗಿನ ತಿವಿತ ಅವಳನ್ನು ಜರ್ಜರಿತಳನ್ನಾಗಿ ಮಾಡಿತ್ತು.

ಶೇಖರ ಒಂದೆರಡು ದಿನ ಇದ್ದು ಮಗುವನ್ನು ಅಭ್ಯಾಸ ಮಾಡಿಕೊಂಡು ಅನಂತರ ಹೊರಡುವಂತೆ ದೇವಕಿಗೆ ಸಲಹೆ ಕೊಟ್ಟ.

ಹಾಗೆ ಎರಡು ದಿನ ಇದ್ದರೂ ಪ್ರಭಾ ಅವಳೊಂದಿಗೆ ಒಂದು ಮಾತು ಆಡಲಿಲ್ಲ. ಮತ್ತೂ ತಾಯಿಗೆ ಅಂಟಿಕೊಂಡೇ ಇದ್ದ. ಕೊನೆಯ ಗಳಿಗೆಯವರೆಗೂ ತಾನು ಹೊರಡದೆ ಇರಲು ಏನಾದರೂ ಅವಕಾಶವಾಗುತ್ತದೆಯೇನೋ ಎಂಬಂತೆ ಅವನ ಕಣ್ಣುಗಳು ಎದುರು ನೋಡುತ್ತಲೇ ಇದ್ದವು.

ಪವಾಡ ಏನೂ ನಡೆಯಲಿಲ್ಲ. ಅವರು ಹೊರಡಬೇಕಾದ ಗಳಿಗೆ ಸನ್ನಿಹಿತವಾಯಿತು. ಬುದ್ಧಿ ತಿಳಿದಾಗಿನಿಂದ ಎಂದೂ ಅತ್ತು, ಹಠ, ರಗಳೆ ಮಾಡದ ಪ್ರಭಾಕರನನ್ನು ಈಗ ಹಿಡಿಯುವುದು ಕಷ್ಟವಾಯಿತು. ಕರುಳನ್ನು ಹಿಂಡುವಂತಹ 'ಅಮ್ಮಾ, ಅಮ್ಮಾ' ಎಂಬ ಅವನ ರೋದನ ಎಂತಹವರಿಗಾದರೂ ಕಣ್ಣಲ್ಲಿ ನೀರು ತರಿಸುವಂತಿತ್ತು. ಕೊನೆಗೆ ಅವನನ್ನು ಬಲವಂತವಾಗಿ ಎತ್ತಿಕೊಂಡೇ ಹೋಗಬೇಕಾಯಿತು.....

ಆ ರಾತ್ರಿ ದಂಪತಿಗಳಿಗೆ ಕಾಳರಾತ್ರಿಯಾಗಿಯೇ ಕಳೆಯಿತು.

ಮಗನನ್ನು ಕಳುಹಿಸಿದ್ದು ಶೇಖರನಿಗೇನು ಕಡಿಮೆ ದುಃಖವಾಗಿರಲಿಲ್ಲ. ಆದರೆ ಅದು ತನ್ನ ಕರ್ತವ್ಯ ಎಂಬ ತೃಪ್ತಿ ಅವನಿಗಿತ್ತು. ಈಗ ತನ್ನ ಚಿಂತೆಗಿಂತ ಹೆಚ್ಚಾಗಿ ಪಾರ್ವತಿಯದೇ ಯೋಚನೆಯಾಗಿತ್ತು ಅವನಿಗೆ. ರಾತ್ರಿಯೆಲ್ಲಾ ಪಾರ್ವತಿಯನ್ನು ಯಾವ ರೀತಿ ಸಂತೈಸಬೇಕು, ಮತ್ತೆ ಅವಳು ಮಾಮೂಲು ಮನುಷ್ಯಳಾಗುವುದು ಸಾಧ್ಯವೇ, ಈ ಪರಿಸ್ಥಿತಿಯಲ್ಲಿ ತನ್ನ ಕರ್ತವ್ಯವೇನು? ಎಂದೆಲ್ಲಾ ಆಲೋಚಿಸುತ್ತಲೇ ಕಳೆದ ಶೇಖರನಿಗೆ, ಬೆಳಿಗ್ಗೆ ದಿನನಿತ್ಯದಂತೆ ಎದ್ದು ಕೆಲಸ ಕಾರ್ಯಗಳನ್ನು ಮಾಡಿಕೊಳ್ಳುತ್ತಿದ್ದ ಹೆಂಡತಿಯನ್ನು ನೋಡಿ ಒಂದು ವಿಧವಾದ ಭೀತಿಯಿಂದ ಕೂಡಿದ ಆಶ್ಚರ್ಯವಾಯಿತು. ಪಾರ್ವತಿ

ಹೊಸಬಳಂತೆ ತೀರಾ ಅಪರಿಚಿತಳಂತೆ ಕಂಡಳು. ಆದರೆ ಅವಳನ್ನು ಕೆದಕಿ ಮತ್ತಷ್ಟು ದುಃಖಿತಳನ್ನಾಗಿ ಮಾಡುವ ಸಾಹಸವೂ ಅವನಿಗುಂಟಾಗಲಿಲ್ಲ. ಸದ್ಯ, ಅವಳು ಹಾಸಿಗೆ ಹಿಡಿಯದೆ ಇಷ್ಟು ಮಾತ್ರ ಇದಾಳಲ್ಲಾ, ನಿಧಾನವಾಗಿ ಸಮಾಧಾನ ಹೇಳೋಣ ಎಂದುಕೊಂಡ.

ಪಾರ್ವತಿ ಸರ್ವ ಪ್ರಯತ್ನದಿಂದ ತನ್ನನ್ನು ತಾನು ಸಂಭಾಳಿಸಿಕೊಂಡಿದ್ದಳು. ಆ ಮನೆಯಲ್ಲಿ ಪ್ರಭಾ ಎಂದೂ ಇರಲೇ ಇಲ್ಲವೇನೋ ಎಂಬಂತೆ ಪ್ರವರ್ತಿಸುತ್ತಿದ್ದಳು. ಅವಳೆಷ್ಟು ಮಾಮೂಲಾಗಿರುವಂತೆ ಕಾಣಿಸಿಕೊಳ್ಳಲು ಪ್ರಯತ್ನಿಸಿದರೂ, ಅದರಲ್ಲಿನ ಅಸಹಜತೆ ಶೇಖರನಿಗೆ ಸುಲಭವಾಗಿ ಅರ್ಥವಾಗುತ್ತಿತ್ತು.

"ನೋಡು, ನೀನು ಸುಮ್ಮನೆ ಹೀಗೆ ಮನಸ್ಸಿಗೆ ಹಚ್ಚಿಕೊಂಡು ಕೊರಗಬೇಡ. ಬೇಕಾದರೆ ಒಂದು ಸಲ ಮನಸಾರೆ ಅತ್ತುಬಿಡೋಣ. ಹೀಗೆ ಒಳಗೊಳಗೇ ಕೊರಗಿದರೆ ನಿನ್ನ ಆರೋಗ್ಯ ಕೆಡಲೂಬಹುದು" ಎಂದಾಗ.

"ಏನಾಗಿದೆ ನನಗೆ? ನಾನೇನೂ ಕೊರಗು ಹಚ್ಚಿಕೊಳ್ಳಲಿಲ್ಲವಲ್ಲಾ! ಹಾಗೆಂದೆನೇನು ನಾನು?" ಎಂದು ಭಾವರಹಿತಳಾಗಿ ಪ್ರಶ್ನಿಸುತ್ತಿದ್ದಳು.

"ನೀನು ಅನ್ನದಿದ್ದರೂ ನನಗೆ ಅರ್ಥವಾಗುತ್ತೆ. ಪ್ರಭಾ ತಾಯಿಯ ಜತೆಯಲ್ಲಿ ತಾನೇ ಹೋಗಿದ್ದು! ಅಪ್ಪ - ಅಮ್ಮ ಅವನನ್ನು ಚೆನ್ನಾಗಿ ನೋಡಿಕೋತಾರೆ. ಅವನಿಗೇನು ಕೊರತೆಯಿರೊಲ್ಲ....."

ಪಾರ್ವತಿ ಶೇಖರನ ಮಾತನ್ನು ತಡೆದು "ಸುಮ್ಮನೆ ಏನೇನೋ ಹೇಳ ಬೇಡಿ. ಅರ್ಥವಿಲ್ಲದ ಮಾತು ಯಾಕೀಗ?" ಎಂದು ಮಾತು ಮುಗಿಸುತ್ತಿದ್ದಳು.

"ಒಳ್ಳೆಯ ಚಿತ್ರ ಬಂದಿದೆ, ಹೋಗೋಣವೇ?" ಎಂದರೆ,

"ನಡೆಯಿರಿ, ಹೋಗೋಣ" ಎನ್ನುವಳು.

"ಹವಾ ಚೆನ್ನಾಗಿದೆ, ಹಾಗೇ ವಾಕಿಂಗ್ ಹೋಗಿ ಬರೋಣವೇನು?" ಎಂದರೆ ಬೇಡವೆನ್ನುತ್ತಿರಲಿಲ್ಲ. ಶೇಖರ ಎಷ್ಟು ಪ್ರಯತ್ನಿಸಿದರೂ ಅವಳು ತನ್ನ ಮೇಲೆ ತಾನು ಹಾಕಿಕೊಂಡ ತೆರೆಯನ್ನು ಸರಿಸಲು ಸಮರ್ಥನಾಗಲಿಲ್ಲ. ಎಲ್ಲಾ ಯಾಂತ್ರಿಕವಾಗಿ ನಡೆಯುತ್ತಿತ್ತು.

ದಿನ, ವಾರ, ತಿಂಗಳುಗಳು ಉರುಳುತ್ತಿದ್ದುವು. ಪಾರ್ವತಿ – ಶೇಖರರ ಸಂಸಾರವೂ ಸಾರರಹಿತವಾಗಿ ಸಾಗುತ್ತಿತ್ತು. ಹತ್ತು ವರ್ಷಗಳ ಹಿಂದೆ ಮಕ್ಕಳಿಲ್ಲದ ಚಿಂತೆ ಅವರನ್ನು ಹಣ್ಣು ಮಾಡಿತ್ತು. ಆದರೆ ಇಂದು? ಇಂದು ಆ ಚಿಂತೆಗಿಂತೆ ಕಡಿಮೆಯೇನಾಗಿರಲಿಲ್ಲ. ಹಣ್ಣಿನ ಮಾಧುರ್ಯಕ್ಕೆ ಮಾರುಹೋಗಿ ರುಚಿ ನೋಡುತ್ತಿರುವಾಗಲೇ ಹದ್ದು ಹಾರಿಸಿಕೊಂಡು ಹೋಗಿತ್ತು. ಒಂದು ಮಗುವನ್ನು ತಂದು ಬೆಳೆಸಿಕೊಂಡಿದ್ದರೆ ಈ ದಿನ ಈ ದುಃಖ ಅವರನ್ನು ಕಾಡುತ್ತಿರಲಿಲ್ಲ. ಆದರೆ ಈಗ ಅದಕ್ಕಾಗಿ ಕಾಣದ ವಿಧಿಯನ್ನು ದೂರಿ ಪ್ರಯೋಜನವೂ ಇರಲಿಲ್ಲ. ಪಾರ್ವತಿ ತನ್ನ ನೋವನ್ನು ನುಂಗಿಕೊಳ್ಳುತ್ತಿದ್ದರೂ ಸಹಜವಾಗಿರಲು ಪ್ರಯತ್ನಿಸುತ್ತಿದ್ದಳು. ಯಾರೊಡನೆಯೂ ಕೊನೆಗೆ ಶೇಖರನೊಂದಿಗೆ ಸಹ ಅವಳು ತನ್ನನ್ನು ಸುಡುತ್ತಿದ್ದ ಚಿಂತೆಯನ್ನು ಹಂಚಿಕೊಳ್ಳಲು ಸಿದ್ಧಳಿರಲಿಲ್ಲ. ಅದನ್ನು ಮರೆಯಲು ಅವಳು ಹಳೆಯ ನೆನಪುಗಳ ಮೊರೆ ಹೊಕ್ಕಿದ್ದಳು. ಹತ್ತು ವರ್ಷಗಳ ಸವಿ ನೆನಪಿನಿಂದ ಮುಂದಿನ ದಿನಗಳನ್ನು ದೂಡುವ ನಿಶ್ಚಯ ಮಾಡಿಕೊಂಡಿದ್ದಳು.

ತನ್ನದೇ ಒಂದು ಪ್ರತ್ಯೇಕ ಪ್ರಪಂಚವನ್ನು ನಿರ್ಮಿಸಿಕೊಂಡಿದ್ದಳು. ಗಂಟೆಗಟ್ಟಲೆ ಆ ಪ್ರಪಂಚದಲ್ಲಿ ಕಳೆಯುತ್ತಿದ್ದಳು. ಅಲ್ಲಿ ಪ್ರಭಾ ಹೈಸ್ಕೂಲು ಮುಗಿಸಿ ಕಾಲೇಜಿನಲ್ಲಿ ಕಲಿಯುತ್ತಿದ್ದ ಚಿತ್ರ ಅವಳ ಕಣ್ಣ ಮುಂದೆ ಜೀವ ತಳೆಯುತ್ತಿತ್ತು. ನೋಡ ನೋಡುತ್ತಾ ಅವನು ಮೆಡಿಕಲ್ ವಿದ್ಯಾರ್ಥಿಯಾಗುತ್ತಿದ್ದ. ಅದನ್ನು ಮುಗಿಸಿ ಡಾಕ್ಟರಾಗಿ ಹೊರಬರುತ್ತಿದ್ದ. ಶುಭ್ರವರ್ಣದ ಉಡುಪಿನಲ್ಲಿ, ಕೊರಳಿನಲ್ಲಿ ಸ್ಟೆತಸ್ಕೋಪ್ ಧರಿಸಿ ಠೀವಿಯಿಂದ ಓಡಾಡುವ ಮೃದು ಮಾತಿನ, ಸೌಮ್ಯ ಮುಖದ ಡಾ|| ಪ್ರಭಾಕರ ಅವಳ ಮನಸ್ಸಿಗೆ ತಂಪು ನೀಡುತ್ತಿದ್ದ. ಆ ಪ್ರಪಂಚದಲ್ಲಿ ತಾಯಿ – ಮಕ್ಕಳಿಬ್ಬರೇ ಇರುತ್ತಿದ್ದರು.

ಒಂದೊಂದು ದಿನ ಎಷ್ಟು ಪ್ರಯತ್ನಿಸಿದರೂ ಪ್ರಭಾನ ಚಿತ್ರ ಕಣ್ಣ ಮುಂದೆ ಬರುತ್ತಿರಲಿಲ್ಲ. ಇಲ್ಲಿಂದ ಬಲವಂತವಾಗಿ ಕರೆದೊಯ್ದರಲ್ಲವೆ? ಅವನು ಅಲ್ಲಿ ಹೊಂದಿಕೊಳ್ಳದಿದ್ದರೆ? ಅವನ ಮನಸ್ಸುತುಂಬಾ ಸೂಕ್ಷ್ಮ. ಸಿಟ್ಟು – ಸೆಡವು ಗೊತ್ತೇ ಇರಲಿಲ್ಲ ಅವನಿಗೆ. ಎಂದು ಅವನ ಮೈಮೇಲೆ ಕೈ ಮಾಡಬೇಕಾದ ಅವಶ್ಯಕತೆಯೇ ಬಂದಿರಲಿಲ್ಲ. ಪಾರ್ವತಿಗೆ ಹೊಸ ಪರಿಸರಗಳು ಅವನಿಗೆ

ಹೇಗನಿಸುತ್ತವೆಯೋ? ಹುಟ್ಟಿದಾಗಿನಿಂದ ಪ್ರೀತಿ ವಾತ್ಸಲ್ಯಗಳನ್ನುಂಡು ಬೆಳೆದ ಹುಡುಗ, ದಿಕ್ಕೆಟ್ಟವನಂತೆ ಆಗಲಾರನೇ – ಹಾಗನ್ನಿಸಿದಾಗ ಅವಳ ಮನಸ್ಸು ತಪ್ಪಿತಸ್ಥ ಮನೋಭಾವನೆಯಿಂದ ತತ್ತರಿಸುತ್ತಿತ್ತು. ಮತ್ತೆ ತನಗೆ ತಾನೇ ಸಮಾಧಾನ ಹೇಳಿಕೊಳ್ಳುತ್ತಿದ್ದಳು. ಉಹುಂ, ಇರಲಾರದು. ತಂದೆ – ತಾಯಿ ಅಲ್ಲವೇ? ಅರ್ಥ ಮಾಡಿಕೊಳ್ಳಬಲ್ಲ. ತಾನಾಗಿ ಹೊಂದಿಕೊಳ್ಳುತ್ತಾನೆ. ಓದಿನಲ್ಲಿ ಹೇಗೂ ಚುರುಕು. ಅದರ ವಿಷಯ ಯೋಚಿಸಬೇಕಾಗಿಯೇ ಇಲ್ಲ ಎಂದು ತನ್ನನ್ನು ತಾನು ಸಮಾಧಾನ ಪಡಿಸಿಕೊಂಡು ಮತ್ತೆ ಬೆಳೆದ ಪ್ರಭಾನ ಚಿತ್ರವನ್ನು ಕಣ್ಣಮುಂದೆ ನಿಲ್ಲಿಸಿಕೊಳ್ಳಲು ಪ್ರಯತ್ನಿಸುತ್ತಿದ್ದಳು. ಇನ್ನು ಆ ದಿನ ಎಷ್ಟು ಮಾಡಿದರೂ ಅವಳ ಪ್ರಯತ್ನ ಸಫಲವಾಗುತ್ತಿರಲಿಲ್ಲ. ಮನಸ್ಸೆಲ್ಲಾ ಕದಡಿದಂತಾಗಿ ಮಂಕಾಗಿರುತ್ತಿದ್ದಳು.

ಶೇಖರ ಯಾಂತ್ರಿಕವಾಗಿ ಈ ಜೀವನ ವಿಧಾನಕ್ಕೆ ಹೊಂದಿಕೊಂಡಿದ್ದ. ದೇವರ ಕರುಣೆ ಇಷ್ಟು ಮಾತ್ರ ತಮ್ಮ ಮೇಲಿದ್ದರೆ ಸಾಕು, ಹೀಗೇ ದಿನ ತಳ್ಳಿದರೆ ಸಾಕು ಎಂದೆನಿಸುತ್ತಿತ್ತು ಅವನಿಗೆ.

ಮೂರು ನಾಲ್ಕು ವರ್ಷಗಳಿಗೊಮ್ಮೆ ಬೇರೆ ಊರುಗಳಿಗೆ ತಿರುಗಾಡಿ ಬರಲು ಹೋಗುತ್ತಿದ್ದರು – ಯಾಂತ್ರಿಕ ಜೀವನದಲ್ಲಿಯ ಬೇಸರ ನೀಗಿಸಲು ಅದು ಸ್ವಲ್ಪ ಮಟ್ಟಿಗಾದರೂ ಸಹಾಯ ಮಾಡುತ್ತಿತ್ತು.

ಒಮ್ಮೆ ಹಾಗೆ ಹೋಗಿದ್ದಾಗ ದೂರದ ಬಂಧುಗಳೊಬ್ಬರು ಆ ಊರಿನ ಆಸ್ಪತ್ರೆಯಲ್ಲಿರುವ ವಿಚಾರ ತಿಳಿದು ನೋಡಲು ಹೋಗಿದ್ದರು. ನೋಡಿ ವಾಪಸು ಬರುತ್ತಿದ್ದಾಗ ಆಸ್ಪತ್ರೆಯ ಆವರಣದಲ್ಲಿ ಹಠಾತ್ತಾಗಿ ಗರಬಡಿದವಳಂತೆ ನಿಂತುಬಿಟ್ಟಳು ಪಾರ್ವತಿ. ಏಕಿರಬಹುದೆಂದು ಶೇಖರನೂ ಪಾರ್ವತಿಯ ದೃಷ್ಟಿಯನ್ನನುಸರಿಸಿ ನೋಡಿದ. ಒಂದು ಕ್ಷಣ ಶೇಖರನ ಕಾಲು ತಡೆಯಿತು.

ಪಾರ್ವತಿ ತಟ್ಟನೆ ಮುಂದಕ್ಕೆ ಹೆಜ್ಜೆಯಿಟ್ಟು ತನಗೆದುರಾದ ವ್ಯಕ್ತಿಯ ತೋಳನ್ನು ಗಟ್ಟಿಯಾಗಿ ಹಿಡಿದುಕೊಂಡು "ನೀನು ದೇವಕಿ, ಹೌದಲ್ಲವೇ?" ಎಂದಳು.

ಆಕೆ ಕೈ ಕೊಸರಿಕೊಳ್ಳುತ್ತಾ "ಯಾರು ನೀವು? ನನ್ನ ಹೆಸರು ದೇವಕಿಯಲ್ಲ" ಎಂದಳು.

ಪಾರ್ವತಿ ಕೈ ಅವಳ ತೋಳಿನ ಮೇಲೆ ಬಿಗಿದುಕೊಂಡಿತ್ತು. ಕೃಶವಾದ ಅವಳ ಕೈಯಲ್ಲಿ ಅಷ್ಟು ಬಲವಿರಬಹುದೆಂದು ಆಕೆ ಊಹಿಸಿದಂತಿರಲಿಲ್ಲ.

ಶೇಖರ "ಏನಿದು ಪಾರ್ವತಿ, ಆಕೆಯ ಕೈ ಬಿಡು." ಪಾರ್ವತಿಯ ಕಣ್ಣುಗಳು ಉತ್ಸುಕತೆಯಿಂದ ಮಿನುಗಿದುವು. ಉತ್ತೇಜ ಸ್ವರದಲ್ಲಿ ಮೃದುತ್ವವನ್ನು ತುಂಬುತ್ತಾ "ಇವಳು ದೇವಕೀನೇರೀ, ಮಾತನಾಡಿಸಿದರೆ ತಪ್ಪೇ? ಮಗೂನ ಕುರಿತು ತಿಳಿದುಕೊಂಡರೆ ತಪ್ಪೇ?" ಎಂದಳು. ಆದರೆ ದೇವಕಿಯ ತೋಳನ್ನು ಹಿಡಿದ ಅವಳ ಕೈಯ ಹಿಡಿತ ಮಾತ್ರ ಸಡಿಲವಾಗಲಿಲ್ಲ.

ದೇವಕಿಗೆ ತಾನಿನ್ನು ತಪ್ಪಿಸಿಕೊಳ್ಳಲಾರೆನೆಂಬ ವಿಷಯ ಅರ್ಥವಾದಂತಿತ್ತು.

"ಅಮ್ಮಾ, ನೀವು ಇಲ್ಲಿಯೇ ಇರಿ. ಒಪ್ಪೊತ್ತಿನ ರಜಾ ಹಾಕಿ ಬರುವೆ, ಮನೆಗೆ ಹೋಗೋಣ" ಎಂದಳು.

"ಪ್ರಭಾ ಇಲ್ಲಿಯೇ ಇದಾನೇನು?" ಎಂದಳು ಪಾರ್ವತಿ, ಅವಳ ತೋಳಿನ ಮೇಲಿನ ಹಿಡಿತ ಸಡಿಲಿಸುತ್ತಾ.

"ಈಗ ಬಂದೆ" ಎಂದು ಒಳಕ್ಕೋಡಿದ ದೇವಕಿ ಕೆಲವೇ ನಿಮಿಷಗಳಲ್ಲಿ ಹಿಂದಿರುಗಿದಳು.

ಬಾಗಿಲು ತೆಗೆದು ಒಳಕ್ಕೆ ಪ್ರವೇಶಿಸಿದ ದೇವಕಿ "ಬನ್ನಿ" ಎಂದಳು.

ಒಳಗೆ ಹೆಜ್ಜೆಯಿಟ್ಟ ಪಾರ್ವತಿ ಮೈಯೆಲ್ಲಾ ಕಣ್ಣಾಗಿ ಗೋಡೆಗಳ ಮೇಲೆ ಕಣ್ಣಾಡಿಸಿದಳು – ಪ್ರಭಾನ ಭಾವಚಿತ್ರಗಳೇನಾದರೂ ಕಂಡು ಬರುವುದೇನೋ ಎಂದು. ಆದರೆ ಅವಳಿಗೆ ನಿರಾಶೆಯೇ ಕಾದಿತ್ತು.

ದೇವಕಿ "ಟೀ ಸೇರುತ್ತಲ್ಲವೇ?" ಎಂದಾಗ ಪಾರ್ವತಿ ಅವಳನ್ನು ತಡೆದು ಕೈಹಿಡಿದು ಕೂರಿಸಿಕೊಂಡು "ಏನೂ ಬೇಡ, ಹೇಳು, ಪ್ರಭಾ ಹೇಗಿದಾನೆ?" ಎಂದಳು. ಅವಳ ಕಣ್ಣುಗಳು ತೇವಗೊಂಡಿದ್ದವು. ಶೇಖರ ಮೂಕ ಪ್ರೇಕ್ಷಕನಂತೆ ಕುಳಿತಿದ್ದ. ಅವನ ಮನಸ್ಸು ನಿಷ್ಕಾರಣವಾಗಿಯೇ ಕೇಡನ್ನು ಶಂಕಿಸುತ್ತಿತ್ತು.

ದೇವಕಿ ತಲೆ ತಗ್ಗಿಸಿದಳು.

ಪ್ರಭಾನನ್ನು ಕರೆದೊಯ್ಯಲು ಬಂದಾಗ ತಲೆತಗ್ಗಿಸಿ ಕುಳಿತ ದೇವಕಿಯ ನೆನಪಾಯಿತವನಿಗೆ.

"ಅಮ್ಮಾ, ನನ್ನನ್ನು ಕ್ಷಮಿಸಬೇಕು ನೀವು" ಎಂದಳು ಕ್ಷೀಣ ಕಂಠದಿಂದ.

ಪಾರ್ವತಿಯ ಹುಬ್ಬುಗಳು ಮೇಲೇರಿದುವು. ಪ್ರಶ್ನಾರ್ಥಕವಾಗಿ ದೇವಕಿಯ ಕಡೆ ನೋಡಿದಳು.

"ಏಕೆ ದೇವಕಿ? ಏನಾಯಿತು? ಪ್ರಭಾ ಸತ್ತುಹೋದನೇ?" ಎಂದಾಗ ಅವಳ ಕಂಠ ಮಂಜಿನಂತೆ ತಣ್ಣಗಾಗಿತ್ತು.

ದೇವಕಿ ಕೂಡಲೇ ಪಾರ್ವತಿಯ ಕೈ ಹಿಡಿದುಕೊಂಡು "ಇಲ್ಲ..... ಇಲ್ಲ ಹಾಗನ್ನಬೇಡಿ..... ನನ್ನ ಕಂದ ಎಲ್ಲಿಯೋ ಬದುಕಿದ್ದಾನೆ..... ನನಗದೃಷ್ಟವಿಲ್ಲ..... ಅಷ್ಟೆ" ಎಂದಳು.

ಪಾರ್ವತಿ "ಅಯ್ಯೋ ದೇವರೇ, ಏನಾಯಿತೋ ಹೇಳಬಾರದೆ? ಈ ಬಳಸು ಮಾತಿನಿಂದ ನಮ್ಮನ್ನು ಕೊಲ್ಲುತ್ತೀಯೇನು?" ಎಂದು ಗದ್ದರಿಸಿದಳು. ಶೇಖರ ಅಸಹಜವಾದ ಅವಳ ಚರ್ಯೆಯನ್ನು ಗಮನಿಸುತ್ತಾ ಸುಮ್ಮನೆ ಕುಳಿತಿದ್ದ. ದೇವಕಿ ದುಗುಡ ತುಂಬಿದ ಕಂಠದಲ್ಲಿ ವಿವರಿಸತೊಡಗಿದಳು.

ಪ್ರಭಾನನ್ನು ಬೆಳೆಸುವುದು ಅವನನ್ನು ಕರೆದೊಯ್ದಷ್ಟು ಸುಲಭವಾಗಿರಲಿಲ್ಲ ಅವಳಿಗೆ. ಬಡಪೆಟ್ಟಿಗೆ ಅವನು ದೇವಕಿಯೊಂದಿಗೆ ಹೊಂದಿಕೊಳ್ಳಲಿಲ್ಲ. ದೇವಕಿ ಎಷ್ಟೋ ಸಹನೆಯಿಂದ ಅವನ ಹೊಸತನ ಹೋಗಲಾಡಿಸಿ, ತನ್ನವನನ್ನಾಗಿ ಮಾಡಿಕೊಳ್ಳಲು ಸಹಸ್ರಾ ಪ್ರಯತ್ನಿಸುತ್ತಿದ್ದಳು. ಪ್ರಭಾ ಚಂಡಿ ಹಿಡಿಯುತ್ತಿರಲಿಲ್ಲ. ಹಠ ಮಾಡುತ್ತಿರಲಿಲ್ಲ. ಅದಕ್ಕಿಂತ ಹೆಚ್ಚಿನದಾದ ಉದಾಸೀನತೆಯಿಂದಲೇ ದೇವಕಿಯನ್ನು ದೂರವಿರಿಸಿದ್ದ. ಯಾವುದಕ್ಕೂ ಬೇಕು, ಬೇಡ ಎನ್ನುತ್ತಿರಲಿಲ್ಲ. ದೂರ ಮಲಗುತ್ತಿದ್ದ ಮೈಮೇಲೆ ಕೈ ಹಾಕಿದರೆ ಸಿಡಿದು ದೂರವಾಗುತ್ತಿದ್ದ. ದೇವಕಿ ಕಣ್ಣೀರಿಡುತ್ತಿದ್ದಳು.

"ತಿಳಿದ ಹುಡುಗನಲ್ಲವೇ ನನ್ನ ಪರಿಸ್ಥಿತಿ ಹೀಗಿತ್ತು. ಇಲ್ಲವಾದರೆ ನಿನ್ನನ್ನಲ್ಲಿ ಬಿಡುತ್ತಿದ್ದನೇ? ನನ್ನ ಜೀವನ ನೀನು. ಹತ್ತು ವರ್ಷದಿಂದ ನಿನಗಾಗಿ ಜೀವ

ಹಿಡಿದಿದ್ದೇನೆ. ಮಗೂ, ನನ್ನನ್ನು ತಪ್ಪಿತಸ್ಥಳನ್ನಾಗಿ ತಿಳಿದರೂ ಸರಿ, ಸ್ವಲ್ಪ ಅರ್ಥ ಮಾಡಿಕೋ" ಎಂದು ಗೋಗರೆಯುತ್ತಿದ್ದಳು.

ಪ್ರಭಾನ ಮೌನವೇ ಅದಕ್ಕೂ ಉತ್ತರವಾಗುತ್ತಿತ್ತು.

ದೇವಕಿಯ ಗಂಡನಿಗೆ ಇದೊಂದೂ ಸರಿಬರುತ್ತಿರಲಿಲ್ಲ. "ಏಕಂತೆ, ಏನು ರೋಗ ಅವನಿಗೆ, ನಾಲ್ಕು ಬಿಟ್ಟರೆ ಸರಿ ದಾರಿಗೆ ಬರುತ್ತಾನೆ" ಅನ್ನುತ್ತಿದ್ದ. ಹೀಗಾಗಿ ದೇವಕಿಗೆ ಉಭಯ ಸಂಕಟವಾಗಿತ್ತು. ಜೈಲಿಗೆ ಹೋಗಿ ಬಂದ ಮೇಲೆ ದೇವಕಿಯ ಗಂಡ ತುಂಬಾ ಬದಲಾಗಿದ್ದ. ಮೊದಲಿನ ಸರಳ ವ್ಯಕ್ತಿಯಾಗಿರಲಿಲ್ಲ ಅವನು. ಮಾತಿಗೆ ಮುಂಚೆ ರೇಗಾಟ, ಆಗಾಗ ಕುಡಿದು ಬರುವುದು, ತೆಪ್ಪಗೆ ಮಲಗಿದರೆ ಮಲಗಿದ, ಇಲ್ಲದಿದ್ದರೆ ರಂಪಾಟ, ದೇವಕಿಗೂ ಹೊಡೆತಗಳೂ ಅಭ್ಯಾಸವಾದಂತಾಗಿತ್ತು. ಇದಕ್ಕೆಲ್ಲಾ ಮೂಕಸಾಕ್ಷಿಯಾಗಿರುತ್ತಿದ್ದ ಪ್ರಭಾ. ಹಾಯಾಗಿದ್ದ ಹುಡುಗನನ್ನು ಕರೆತಂದೆನಲ್ಲವೇ? ಎಂದು ಕೆಲವೇ ತಿಂಗಳುಗಳಲ್ಲಿ ಚಿಂತಿಸುವಂತಾಗಿತ್ತು ದೇವಕಿಗೆ. ಒಂದೇ ಒಂದು ಸಲ ಸಹ ಪ್ರಭಾನನ್ನು ಮಗನೆಂಬ ಪ್ರೀತಿಯಿಂದ ಮಾತನಾಡಿಸುವ ಪಾಪಕ್ಕೆ ಹೋಗಲಿಲ್ಲ ಅವನು.

ಪ್ರಭಾ ಆ ಮನೆಯಲ್ಲಿ ಹೊರಗಿನವನೆಂಬಂತೆ ಕೆಲವು ತಿಂಗಳುಗಳನ್ನು ಕಳೆದಿದ್ದ. ಆದರೆ ದೇವಕಿಯ ಪ್ರೀತಿ, ವಾತ್ಸಲ್ಯ, ಸತತ ಪ್ರಯತ್ನಗಳಿಂದಾಗಿ ಆಗಾಗ ದೇವಕಿಯೊಡನೆ ಒಂದೆರಡು ಮಾತನ್ನೂ ಆಡತೊಡಗಿದ. ಎಂದಾದರೂ ಅವನು ನಕ್ಕರೆ ದೇವಕಿ ಸ್ವರ್ಗಕ್ಕೆ ಮೂರೇ ಗೇಣಿದ್ದಂತೆ ಸಂತೋಷಪಡುತ್ತಿದ್ದಳು, ಗಾಳಿ ಗೋಪುರ ಕಟ್ಟುತ್ತಿದ್ದಳು. ಕಾಸಿಗೆ ಕಾಸು ಕೂಡಿ ಹಾಕಿ ಅವನನ್ನು ಓದಿಸಬೇಕು. ಅದಕ್ಕಾಗಿ ಅವಳ ಪ್ರಯತ್ನ ಅಷ್ಟಿಷ್ಟಲ್ಲ. ಆದರೆ ಇದೊಂದರಲ್ಲು ಗಂಡ ಅವಳೊಂದಿಗೆ ಸಹಕರಿಸುತ್ತಿರಲಿಲ್ಲ. ಇದೊಂದು ಪೀಡೆ ತನಗೆ ಅಡ್ಡವಾಗಿ ಬಂತೆಂದು ಗೊಣಗುತ್ತಿದ್ದ. ದೇವಕಿ ಎಷ್ಟು ಪ್ರಯತ್ನಿಸಿದರೂ ತಂದೆ – ಮಕ್ಕಳಲ್ಲಿ ಸಖ್ಯವೇರ್ಪಡಲಿಲ್ಲ. ಮುಖ ಸಿಂಡರಿಸಿಕೊಂಡೇ ತನ್ನ ಕಡೆ ನೋಡುವ ತಂದೆಯ ಬಗ್ಗೆ ಪ್ರಭಾನಲ್ಲಿ ತಿರಸ್ಕಾರ, ಅಸಹ್ಯ ಮೊಳೆತು ಬಲಿಯತೊಡಗಿತ್ತು.

ಪ್ರಭಾ ದೇವಕಿಯನ್ನು ಎಂದೂ ಅಮ್ಮ ಎಂದು ಕೂಗುತ್ತಲೇ ಇರಲಿಲ್ಲ. ಅದರ ಅವಶ್ಯಕತೆಯೇ ಬಾರದಂತೆ ಪ್ರವರ್ತಿಸುತ್ತಿದ್ದ.

ಎಂದಾದರು ಮೈ ಹುಷಾರಿಲ್ಲದೆ ಮಲಗಿದರೂ "ಅಮ್ಮಾ" ಎಂದು ನರಳುತ್ತಿರಲಿಲ್ಲ ಅವನು. ಹೆಚ್ಚು ನೋವು ಸಂಕಟಗಳಾದಾಗ ಅವನ ಮುಚ್ಚಿದ ಕಣ್ಣುಗಳಿಂದ ಕಣ್ಣೀರು ಹರಿಯುತ್ತಿತ್ತು. ಹಗಲೆಲ್ಲ ಪ್ರಭಾನನ್ನು ಅವರಿಂದ ಅಗಲಿಸಿ ಪಾಪ ಮಾಡಿದೆನೇ ಮತ್ತೆ ಕರೆದೊಯ್ದು ಬಿಟ್ಟು ಬರಲೇ ಅನ್ನಿಸುತ್ತಿತ್ತು ದೇವಕಿಗೆ.

ದೇವಕಿ ಪ್ರಭಾಕರನನ್ನು ಸೇರಿಸಿದ ಸ್ಕೂಲು, ಅಷ್ಟೇನೂ ಚೆನ್ನಾಗಿರಲಿಲ್ಲ. ಮನೆಯಲ್ಲಿನ ವಾತಾವರಣಕ್ಕೆ ಹೊಂದಿಕೊಳ್ಳದ ಪ್ರಭಾ, ಹೊರಗಿನ ಸ್ನೇಹದ ಆಕರ್ಷಣೆಗೆ ಒಳಗಾದ. ಬರಬರುತ್ತಾ ಅವನ ಒರಟು ಮಾತುಗಳು, ನಿರ್ಲಕ್ಷ್ಯ ದೇವಕಿಯನ್ನು ಭೀತಿಗೊಳ್ಳುವಂತೆ ಮಾಡಿತ್ತು. ತಾನು ಕರೆತಂದ ಸೌಮ್ಯ ಮುಖದ ಪ್ರಭಾಕರ ಇವನೇನಾ ಎನ್ನುವಷ್ಟರ ಮಟ್ಟಿಗೆ ಬದಲಾಗಿದ್ದ ಅವನು.

ಒಂದು ದಿನ ಓದಿಕೊಳ್ಳುತ್ತಾ ಕುಳಿತಿದ್ದ ಪ್ರಭಾನಿಗೆ ಏನೋ ಕೆಲಸ ಹೇಳಿದ ಅವನ ತಂದೆ. ಪ್ರಭಾ ತಲೆಯೆತ್ತಿ ನೋಡಲೂ ಇಲ್ಲ. ಸಿಟ್ಟಿನಿಂದ ಬಯ್ಯುತ್ತಾ ತನ್ನನ್ನು ಹೊಡೆಯಲು ಬಂದ ತಂದೆಯನ್ನು ಕ್ರೂರವಾಗಿ ನೋಡುತ್ತಾ ಸಿಡಿದು ನಿಂತ ಪ್ರಭಾಕರ. ಪ್ರಭಾನ ಬಾಯಲ್ಲಿ ಬಂದ ಅವಾಚ್ಯ ಬಯ್ಗಳನ್ನು ಕೇಳಿ ಅವನು ದಂಗಾಗಿ ನಿಂತ. ಅಂತಹ ಮಾತು ಅವನ ಬಾಯಲ್ಲಿ ಬರಬಹುದೆಂದು ಯಾರೂ ಊಹಿಸುವಂತೆಯೇ ಇರಲಿಲ್ಲ. ಈ ಗಲಾಟೆ ಕೇಳಿ ದೇವಕಿ ಹೊರಬರುವಷ್ಟರಲ್ಲಿಯೇ ಅಲ್ಲಿಯೇ ಬಿದ್ದಿದ್ದ ಸೌದೆಯ ತುಂಡೊಂದನ್ನು ತಂದೆಯ ಕಡೆ ಬೀಸಿ ಒಗೆದಿದ್ದ. ಅದು ಅವನ ತಲೆ ತಗುಲಿ ರಕ್ತ ಚಿಮ್ಮಿತ್ತು. "ಅಯ್ಯೋ ದೇವರೇ" ಎಂದು ಮುಂದೆ ಬಂದ ದೇವಕಿ ಗಂಡನ ಶುಶ್ರೂಷೆಗೆ ಮುಂದಾದಾಗ ಪ್ರಭಾ ಅಲ್ಲಿ ನಿಲ್ಲದೆ ಓಟಕಿತ್ತಿದ್ದ.

ದೇವಕಿ ಅವನಿಗಾಗಿ ಹುಡುಕಾಡಿದಳು. ಈಗ ಬರುತ್ತಾನೆ, ಆಗ ಬರುತ್ತಾನೆ ಎಂದು ಕಾದಳು. ಅವನ ಸ್ನೇಹಿತರೆನಿಸಿಕೊಂಡವರ ಮನೆಗೆಲ್ಲಾ ಹೋಗಿ ಬಂದಳು. ಎಲ್ಲೂ ಅವನ ಸುಳಿವೇ ಇಲ್ಲ. ಮನಸ್ಸು ನಿಲ್ಲದೆ ಪಾರ್ವತಿಯವರ ಊರಿಗೂ ಬಂದು ನೋಡಿಹೋದಳು. ಒಳಕ್ಕೆ ಬಂದು ವಿಷಯ ತಿಳಿಸುವ ಧೈರ್ಯವಿಲ್ಲದೆ ವಾಪಾಸಾಗಬೇಕಾಯಿತು. ಮತ್ತೆ ಅವನನ್ನು ಕಣ್ಣಿಂದ ನೋಡುವ ಅವಕಾಶ ಅವಳಿಗೆ ಸಿಗಲೇ ಇಲ್ಲ.

ದೇವಕಿ ಬಿಕ್ಕಿದಳು.

"ನಿಮ್ಮಲ್ಲಿ ಅರಳುತ್ತಿದ್ದ ಹೂವನ್ನು ಕಿತ್ತು ತಂದ ಪಾಪಿ ನಾನು. ನನ್ನ ಕರುಳ ಬಳ್ಳಿಯನ್ನು ನಾನೇ ಕಿವಿಚಿ ಹಾಕಿದೆ...."

ಪಾರ್ವತಿಗೆ ಇದೇನೂ ಕೇಳಿಸುವಂತಿರಲಿಲ್ಲ. ಪ್ರಭಾ ಇಲ್ಲ..... ಪ್ರಭಾ ಓಡಿಹೋದ..... ಪ್ರಭಾ ಕೆಟ್ಟ ಮಾತುಗಳನ್ನಾಡುತ್ತಾನೆ..... ಪೋಲಿ ತಿರುಗುತ್ತಾನೆ..... ಎಲ್ಲೋ ಅಲೆಯುತ್ತಿದ್ದಾನೆ..... ಅವಳ ಕನಸಿನ ಪ್ರಪಂಚದ ಸೌಮ್ಯ ಮುಖದ ಡಾ॥ ಪ್ರಭಾನ ಸುಂದರ ಆಕಾರ ಅವಳ ಕಣ್ಣ ಮುಂದೆ ಮಸಕು ಮಸಕಾಗಿ ಕರಗಿಹೋಗಿತ್ತು. ಎಲ್ಲೋ ದಿಕ್ಕಿಲ್ಲದೆ, ಅಲೆಮಾರಿಯಾದ ಪ್ರಭಾನನ್ನು ಊಹಿಸಿ ಕೊಳ್ಳಲಾರದೆ ತತ್ತರಿಸಿತು ಅವಳ ಜೀವ. "ಪ್ರಭಾ..... ಪ್ರಭಾ....." ಎಂದು ಅವಳ ಕರುಳಿನಾಳದಲ್ಲಿ ಹುದುಗಿದ್ದ ದುಃಖದ ಬುಗ್ಗೆ ಚಿಮ್ಮಿ ಮೇಲೆದ್ದಿತು. ಎತ್ತರದ ಶಿಖರದಿಂದ ಕೆಳಗೆ ಬಿದ್ದಂತಾಗಿ ಚಿಟ್ಟನೆ ಚೀರಿದಳು ಪಾರ್ವತಿ. ಅರಿವು ತಪ್ಪಿ ಕೆಳಗುರುಳಿದಳು. ಶೇಖರ ತಟ್ಟನೆ ಮುಂದೆ ಬಾಗಿ ಅವಳ ತಲೆಯನ್ನು ತನ್ನ ತೊಡೆಯ ಮೇಲಿರಿಸಿಕೊಂಡ.

ದೇವಕಿ ತನ್ನನ್ನು ತಾನು ಸಾವರಿಸಿಕೊಂಡು ಪಾರ್ವತಿಗೆ ಶೈತ್ಯೋಪಚಾರ ಗಳನ್ನು ಮಾಡತೊಡಗಿದಳು.

ಪಾರ್ವತಿಗೆ ಎಚ್ಚರವಾದ ಕೂಡಲೇ ಸುತ್ತಲೂ ನೋಡುತ್ತಾ "ಅಯ್ಯೋ ಇದೇನು, ಇಷ್ಟು ಹೊತ್ತಾಗಿ ಹೋಯಿತಲ್ಲಾ. ಪ್ರಭಾ ಸ್ಕೂಲಿನಿಂದ ಬರೋ ವೇಳೆಯಾಯಿತಲ್ಲಾ. ಮನೆಗೆ ಹೋಗೋಣವೇ?" ಎಂದಳು.

ಶೇಖರ ಎದ್ದು ನಿಂತು ಹುಚ್ಚುಕಳೆ ಸುರಿಯುತ್ತಿದ್ದ ಹೆಂಡತಿಯ ಕೈ ಹಿಡಿದುಕೊಂಡು ಮೃದುವಾಗಿ "ನಡೆ, ಪಾರ್ವತಿ" ಎಂದ.

ದೇವಕಿ ಬಿಟ್ಟ ಕಣ್ಣು ಬಿಟ್ಟಂತೆ ನೋಡುತ್ತಾ ನಿಂತಿದ್ದಳು.....



# ಖೈದಿ

ಮೂಲ : ಶ್ರೀ ಕುಲದೀಪ್ ಬಗ್ಗಾ

ಎರಡು ವರ್ಷಗಳಿಂದ ಮುಂಬಯಿಯಲ್ಲಿ ನೌಕರಿ ಮಾಡುತ್ತಿದ್ದೆ ನಾನು. ಮುಂಬಯಿ ಮಹಾನಗರದಲ್ಲಿನ ಜೀವನ ವೇಗವನ್ನು ತಡೆದುಕೊಳ್ಳುವುದು ಅಸಾಧ್ಯವಾಗಿ ಒಮ್ಮೊಮ್ಮೆ ಸ್ವಗ್ರಾಮಕ್ಕೆ ಹೋಗಿ ಕೆಲವು ಕಾಲ ಪ್ರಶಾಂತವಾಗಿ ಕಳೆಯೋಣವೆನಿಸುತ್ತಿತ್ತು. ಆದರೆ ಅದಕ್ಕೆ ತಕ್ಕ ಅವಕಾಶ ದೊರೆಯದೆಯೂ ಬಿಡುವಿಲ್ಲದ ಕೆಲಸಗಳಿಂದಾಗಿಯೂ ಆ ಬಯಕೆ ಒಳಗೊಳಗೇ ಉಳಿದು ಹೋಗುತ್ತಿತ್ತು.

ಸ್ವಗ್ರಾಮಕ್ಕೆ ಹೋದರೂ ಎರಡು ದಿನಕ್ಕಿಂತ ಹೆಚ್ಚಾಗಿ ಇರಬೇಕೆನಿಸುತ್ತಿರಲಿಲ್ಲ. ಬಾಲ್ಯದಲ್ಲಿನ ಸ್ನೇಹಿತರಾರೂ ಈಗ ಅಲ್ಲಿಲ್ಲ. ಸುಮ್ಮನೆ ಬೀದಿಗಳಲ್ಲಿ ತಿರುಗಾಡಿ ಬೋರ್ ಹೊಡೆಯುವುದೂ ನಿಜ. ಊರನ್ನೆಲ್ಲಾ ಸುತ್ತಲು ಕೇವಲ ಒಂದು ಗಂಟೆ ಸಾಕು. ಆ ಊರನ್ನು ನೋಡುತ್ತಿದ್ದಂತೆಲ್ಲಾ, ನಮ್ಮ ದೇಶ ಏನೂ ಬದಲಾಯಿಸಿಲ್ಲ ಎಂಬ ಭಾವನೆ ಉಂಟಾಗುತ್ತದೆ. ಏನೇನೂ ಬದಲಾಯಿಸಿಲ್ಲ.....

ಎಲ್ಲಿ ಹೋದರೂ ಒಂದೇ ಪ್ರಶ್ನೆ,

"ಯಾವಾಗ ಬಂದೆ ತಮ್ಮಾ?"

"ಈವತ್ತು ಬೆಳಿಗ್ಗೆ ಎಕ್ಸ್‌ಪ್ರೆಸ್‌ನಲ್ಲಿ ಬಂದೆ" ಆಯಿತು, ಅಷ್ಟಕ್ಕೆ ಮುಗಿಯುತ್ತೆ ಮಾತುಕತೆ.

ರಸ್ತೆಯ ಮೇಲೆ ಎಂದಿನಂತೆ ಎತ್ತಿನ ಗಾಡಿಗಳೂ, ಎಮ್ಮೆಗಳೂ, ಮೇಕೆಗಳೂ, ಕೊಳೆಯಾದ ಒರಟು ಬಟ್ಟೆಗಳಲ್ಲಿ ಮರೆಯಲಾರದ ಮುಖಗಳೂ ಕಾಣಬರುತ್ತವೆ.

ಅದನ್ನೆಲ್ಲಾ ನೋಡಿದಾಗ ಬೊಂಬಾಯಿ ನೆನಪಾಗುತ್ತದೆ. ಥಳಥಳ ಹೊಳೆಯುವ ರಸ್ತೆಗಳೂ, ಸೌಂದರ್ಯವೆಲ್ಲಾ ನಮ್ಮದೇ ಸ್ವತ್ತು ಎಂಬಂತೆ ಅಲಂಕರಿಸಿಕೊಂಡು ಕಾಣುವ ಹೆಣ್ಣುಮಕ್ಕಳೂ – ಉಸಿರಾಡಲೂ ಸಾಧ್ಯವಾಗದಂತಹ ಜನಸಂದಣಿ – ಎಲ್ಲದರ ನೆನಪಾಗತ್ತೆ.

ಇದೆಲ್ಲಾ ಸಾಮಾನ್ಯವಾಗಿ ನಡೆಯುವುದೇ. ಕನಿಷ್ಠ ಪಕ್ಷ ಆರು ತಿಂಗಳಿಗೊಮ್ಮೆಯಾದರೂ ಮನೆಗೆ ಹೋಗದೆ ಮಾತ್ರ ಇರಲಾರೆ ನಾನು. ಮುಂಬಯಿಯಲ್ಲಿ ನಾನೊಬ್ಬ ಅಪರಿಚಿತನಂತೆ, ಗುಂಪಿನಿಂದ ತಪ್ಪಿಸಿಕೊಂಡ ಪರದೇಶಿಯಂತೆ ಭಾಸವಾಗುತ್ತಿರುತ್ತದೆ. ಇದು ಬಹಳ ವಿಚಿತ್ರವಾದ ಪರಿಸ್ಥಿತಿ. ಸ್ವಂತ ಊರಿನಲ್ಲಿಯೂ ಇದಕ್ಕೆ ಹೊರತಾಗಿರುವುದಿಲ್ಲ. ಅಲ್ಲಿಯೂ ಒಮ್ಮೊಮ್ಮೆ ಒಂಟಿತನವನ್ನು ಅನುಭವಿಸಬೇಕಾಗುತ್ತದೆ. ನೌಕರಿ ಮಾಡುತ್ತಿದ್ದರೂ ಇಲ್ಲಿಯೂ ಒಮ್ಮೊಮ್ಮೆ ನನ್ನನ್ನು ಒಂಟಿತನ ಬಾಧಿಸುತ್ತದೆ. ಬರಬರುತ್ತಾ ನನ್ನನ್ನು ಗುರುತಿಸುವವರೇ ಇಲ್ಲವಾಗುತ್ತಾರೇನೋ ಅನ್ನಿಸುತ್ತದೆ.

ಈ ಸಲ ನನಗೆ ಸುಲಭವಾಗಿ ರಜೆ ದೊರೆತಿತ್ತು. ರೈಲಿನಲ್ಲಿ ಸುಖವಾಗಿ ಪ್ರಯಾಣ ಮಾಡಬೇಕೆಂಬ ಇಚ್ಛೆಯಿಂದ ತುಂಬಾ ದಿನಗಳ ಮೊದಲೇ ಬರ್ತ್ ರಿಸರ್ವ್ ಮಾಡಿಸಿಕೊಂಡಿದ್ದೆ. ಟ್ರೈನು ಹೊರಡುವುದು ರಾತ್ರಿ ಹತ್ತು ಗಂಟೆಗೆ. ನಾನು ರೈಲಿನಲ್ಲಿ ಹತ್ತಿದ ಕೂಡಲೇ ನನ್ನ ಬರ್ತ್‌ನ ಮೇಲೆ ಬಿಚಾಣಾ ಹಾಸಿದೆ. ಆ ಸಮಯದಲ್ಲಿ ಒಬ್ಬ ಯುವಕ ನನ್ನ ಬಳಿಗೆ ಬಂದು ನನ್ನ ವಿವರಗಳನ್ನು ಕೇಳಲು ಪ್ರಾರಂಭಿಸಿದ. ನಾನು ಹೊರಟಿರುವ ಊರಿನ ಹೆಸರನ್ನು ಕೇಳಿದ ಕೂಡಲೇ ಆ ಯುವಕನ ಮುಖ ಆನಂದದಿಂದ ವಿಕಸಿಸಿತು.

"ನೀವು ನನಗೊಂದು ಸಹಾಯ ಮಾಡಬೇಕು."

ನನ್ನ ಎದೆ ಝಲ್ಲೆಂದಿತು. ಸರಿ, ದೊಡ್ಡ ಉಪ್ಪಿನಕಾಯಿ ಜಾಡಿಯನ್ನು ನಮ್ಮೂರಿನಲ್ಲಿ ಯಾರಿಗಾದರೂ ಕೊಡುವಂತೆ ಹೇಳುತ್ತಾನೇನೋ ಎಂದು ಹೆದರಿದೆ.

"ಹೇಳಿ" ಎಂದೆ.

"ನನ್ನ ತಂಗಿ ಸಹ ಇದೇ ರೈಲಿನಲ್ಲಿ ನೀವು ಹೊರಟಿರೋ ಊರಿಗೇ ಹೊರಟಿದಾಳೆ. ನಮ್ಮ ಅಕ್ಕನ ಮನೆಗೇಂತ ಹೋಗ್ತಿದಾಳೆ. ಜತೆಯಲ್ಲಿ ಯಾರೂ ಇಲ್ಲ, ರಾತ್ರಿ ಪ್ರಯಾಣ ಬೇರೆ. ದಯವಿಟ್ಟು ನೀವು ಅವಳನ್ನ ಸ್ವಲ್ಪ ಹುಷಾರಾಗಿ ನೋಡಿಕೊಂಡರೆ ತುಂಬಾ ಉಪಕಾರ ಆಗುತ್ತೆ. ಸ್ಟೇಷನ್ನಿನಲ್ಲಿ ಅವಳನ್ನ ರಿಸೀವ್ ಮಾಡಿಕೊಳ್ಳೋಕೆ ನಮ್ಮ ಭಾವನವರು ಬರುತ್ತಾರೆ. ಟೆಲಿಗ್ರಾಂ ಏನೋ ಕೊಟ್ಟಿದೀನಿ. ಆದರೆ ನಮ್ಮ ಟೆಲಿಗ್ರಾಂ ಡಿಪಾರ್ಟ್‌ಮೆಂಟನ್ನು ಕುರಿತು ನಿಮಗೆ ತಿಳಿಯದ್ದೇನಿದೆ? ಅಕಸ್ಮಾತ್ ನಮ್ಮ ಭಾವನವರು ಸ್ಟೇಷನ್ನಿಗೆ ಬಾರದೆ ಹೋದರೆ ನೀವೇ ನನ್ನ ತಂಗಿಯನ್ನು ಮನೆಗೆ ತಲುಪಿಸಬೇಕು. ನಿಮಗೆ ತೊಂದರೆ ಕೊಡುತ್ತಿರುವುದಕ್ಕಾಗಿ ಕ್ಷಮಿಸಿ" ಒಂದೇ ಸಮನೆ ಕೊರೆಯತೊಡಗಿದ ಆತ.

ಬಹುಶಃ ಚಿಕ್ಕ ಹುಡುಗಿಯಿರಬಹುದು, ಅದಕ್ಕಾಗಿಯೇ ಈ ಅಣ್ಣ ಇಷ್ಟು ಗಾಬರಿಯಿಂದ ಅಲವತ್ತುಕೊಳ್ಳುತ್ತಿದ್ದಾರೆ ಎನ್ನಿಸಿತು. ಹಾಗೆಯೇ ಆಗಲೆಂದು ಅಭಯಕೊಟ್ಟೆ. ಕೂಡಲೇ ಆ ಯುವಕನ ಮುಖದ ಮೇಲಿನ ಚಿಂತೆ ಮಾಯವಾಯಿತು. ಪೋರ್ಟರ್ ಬಂದು ಸಾಮಾನುಗಳನ್ನು ಒಳಗಿರಿಸಿದ. ರೈಲಿನ ಹೊರಗೇ ನಿಂತಿದ್ದ ತಂಗಿಯನ್ನು ಒಳಕ್ಕೆ ಕರೆದ ಆತ. ಆಕೆಯನ್ನು ನೋಡಿ ಚಕಿತನಾದೆ ನಾನು. ಆಕೆ ಸುಮಾರು ಇಪ್ಪತ್ತೆರಡು – ಇಪ್ಪತ್ಮೂರು ವರ್ಷದ ಯುವತಿ. ಹಾಲು ಕುಡಿಯುವ ಹಸುಳೆಯಿರಬಹುದೆಂದು ಆತುರದಲ್ಲಿ ಮಾತು ಕೊಟ್ಟೆನಲ್ಲಾ ಎಂದು ನನ್ನನ್ನು ನಾನು ನಿಂದಿಸಿಕೊಳ್ಳುವಂತಾಯಿತು. ಗೋಧಿ ಮೈಬಣ್ಣ, ಸುಂದರವಾದ ಮೈಕಟ್ಟು, ಚೆಲುವಾದ ಮುಖ, ತುಟಿಗಳ ಮೇಲೆ ತುಂಟನಗೆ ತುಳುಕುತ್ತಿತ್ತು. ಆ ಹುಡುಗಿಯನ್ನು ನೋಡಿ ಸ್ವಲ್ಪ ನರ್ವಸ್ ಆದದ್ದಂತೂ ನಿಜ. ಈ ಹುಡುಗಿಯನ್ನು ನಾನು ಕರೆದೊಯ್ಯುವುದೇನು ಬಂತು, ಆಕೆಯೇ ನನಗೆ ಪ್ರಪಂಚವನ್ನೆಲ್ಲಾ ತೋರಿಸಬಲ್ಲ ದಿಟ್ಟೆಯೆನ್ನಿಸಿತು.

ಆಕೆಯ ಅಣ್ಣ ತಂಗಿಯನ್ನು ನನಗೆ ಪರಿಚಯಿಸಿದರು.

"ನೋಡು, ಇವರು ನೀನು ಇಳಿಯುವ ಸ್ಟೇಷನ್ನಿನಲ್ಲಿಯೇ ಇಳಿಯುತ್ತಾರಂತೆ. ನಿನಗೇನು ಬೇಕಾದರೂ ನೋಡಿಕೊಳ್ಳುವಂತೆ ಹೇಳಿದೀನಿ. ನೀನು ಏನೂ ಸಂಕೋಚಪಟ್ಟುಕೋ ಬೇಡ."

ಆ ಹುಡುಗಿ ನಾಟಕದಲ್ಲಿನಂತೆ ಕೈ ಆಡಿಸುತ್ತಾ ಅಣ್ಣನನ್ನು ತರಾಟೆಗೆ ತೆಗೆದುಕೊಂಡಳು. "ಈಗ ತೃಪ್ತಿಯಾಯಿತೇನಪ್ಪ ನಿನಗೆ. ಹೋಗು, ಹೋಗಿ ಅಮ್ಮನಿಗೆ ಹೇಳು" ಎಂದಂದು ನನ್ನ ಕಡೆ ನೋಡಿ "ನೋಡಿ, ಇವರು ನನ್ನನ್ನು ಇನ್ನೂ ಎಳೇ ಮಗು ಅಂತ ತಿಳ್ಕೊಂಡಿದಾರೆ. ಒಂದು ವಾರದಿಂದ ನಾನು ಒಬ್ಬಳೇ ಹೇಗೆ ಪ್ರಯಾಣ ಮಾಡ್ತೀನಪ್ಪಾ ಅಂತ ಪೇಚಾಡಿದ್ದೇ ಪೇಚಾಡಿದ್ದು....." ಎಂದಳು.

ನಾನು ಮಧ್ಯದಲ್ಲಿಯೇ ಕಲ್ಪಿಸಿಕೊಂಡು "ಹೌದು ಮತ್ತೆ, ಮಕ್ಕಳು ಎಷ್ಟು ದೊಡ್ಡೋರಾದರೂ ತಂದೆ ತಾಯಿಗಳಿಗೆ ಹಸುಮಕ್ಕಳಂತೆಯೇ ಕಾಣುತ್ತಾರೆ."

"ಊಹುಂ, ಹಾಗಲ್ಲ ವಿಷಯ, ಬೇರೆಯೇ ಇದೆ. ನಮ್ಮ ಅಣ್ಣ ಎಲ್ಲಿಗೆ ಹೋದರೂ ಬಂದರೂ ಮನೆಯಲ್ಲಿ ಯಾರೂ ಲೆಕ್ಕನೇ ಮಾಡೊಲ್ಲ. ನಾನು ಹೊರಟರೇನೇ ಇಷ್ಟೆಲ್ಲಾ ಗಲಾಟೆ. ಹೆಣ್ಣುಮಕ್ಕಳೂಂದರೆ ಮಾತ್ರ....."

ಮತ್ತೆ ಕೆಲವರು ಪ್ರಯಾಣಿಕರು ರೈಲಿನಲ್ಲಿ ಹತ್ತಿದರು. ಪೋರ್ಟರ್ಸ್ ಸಾಮಾನುಗಳನ್ನು ಒಳಗಿಡುತ್ತಿದ್ದರು. ಆ ಹುಡುಗಿಯ ಅಣ್ಣ ಮತ್ತೆ ಹಳೆಯ ಹಾಡನ್ನು ಹಾಡತೊಡಗಿದ.

"ರಾತ್ರಿ ಪ್ರಯಾಣ..... ಒಬ್ಬಳೇ ಹೆಣ್ಣುಮಗಳು..... ನೀವು ಸ್ವಲ್ಪ ಗಮನಿಸಿ ಕೊಳ್ಳಬೇಕು. ನಿಮಗೆ ತುಂಬಾ ತೊಂದರೆ ಕೊಡ್ತಿದೀನಿ. ಆದರೂ....."

ಅಷ್ಟರಲ್ಲಿಯೇ ಆ ಹುಡುಗಿಯ ಅಣ್ಣನಿಗೆ ನನ್ನ ಮೇಲೆ ಏನೋ ಅನುಮಾನ ಬಂದಂತೆ ಕಂಡಿತು. ಏನೇನೋ ಪ್ರಶ್ನೆಗಳನ್ನು ಕೇಳತೊಡಗಿದ. ನಮ್ಮ ಊರಿನಲ್ಲಿನ ಕೆಲವರ ವಿವರಗಳನ್ನು ಕೇಳಿದ. ಅವನ ಪ್ರಶ್ನೆಗಳಲ್ಲಿ ನನ್ನ ಮೇಲಿನ ಸಂದೇಹ ಸ್ಪಷ್ಟವಾಗಿ ಕಾಣುತ್ತಿತ್ತು. ಅವನು ವಿವರಗಳನ್ನು ಕೇಳಿದ ಕೆಲವರಲ್ಲಿ ನನಗೆ ಇಬ್ಬರನ್ನು ಕುರಿತು ಮಾತ್ರವೇ ಗೊತ್ತಿತ್ತು.

ಅದು ನನ್ನ ಸ್ವಂತ ಊರಾದರೂ ಬಹಳ ಕಾಲದಿಂದ ನಾನಲ್ಲಿ ಇರುತ್ತಿಲ್ಲವೆಂದು ಹೇಳಿದೆ. ಅಲ್ಲಿ ಇದ್ದಾಗ ಸಹ ಅವರಿವರನ್ನು ಕುರಿತು ಹೆಚ್ಚಾಗಿ ತಿಳಿದುಕೊಳ್ಳುವ ಅಭ್ಯಾಸ ನನಗಿಲ್ಲವೆಂದು ಹೇಳಿದೆ. ಇದು ಎಷ್ಟು ವಿಚಿತ್ರವಾದ

ವಿಷಯ! ಅವನು ಯಾರೆಂದು ನನಗೆ ಗೊತ್ತಿಲ್ಲ. ನನ್ನ ಬಗ್ಗೆ ಅವನಿಗೂ ಗೊತ್ತಿಲ್ಲ. ಆದರೂ ಕೆಲಕ್ಷಣಗಳ ಹಿಂದಿನವರೆಗೂ ಅವನಿಗೆ ನನ್ನ ಮೇಲೆ ನಂಬಿಕೆ ಇತ್ತು. ಈ ಕ್ಷಣದಲ್ಲಿ ಆ ಸ್ಥಳವನ್ನು ಸಂದೇಹ ಆಕ್ರಮಿಸಿತ್ತು.

ಬರಬರುತ್ತಾ ಕಂಪಾರ್ಟ್‌ಮೆಂಟ್ ಪ್ರಯಾಣಿಕರಿಂದ ತುಂಬಿಹೋಯಿತು. ಆ ಹುಡುಗಿಯ ಬರ್ತಿನ ಬಳಿ ಎಲ್ಲರೂ ಗಂಡಸರೇ. ಹೆಂಗಸರಾರೂ ಇರಲಿಲ್ಲ. ಆ ಹುಡುಗಿಯ ಅಣ್ಣನಿಗೆ ಇದೊಂದು ದೊಡ್ಡ ಸಮಸ್ಯೆಯಾಗಿ ಕಾಡತೊಡಗಿತು. ಆ ಕೋಚ್‌ನ ಕಂಡಕ್ಟರನ್ನು ಹುಡುಕಿ ಆತನೊಂದಿಗೆ ತನ್ನ ತಂಗಿಗೆ ಹೆಣ್ಣುಮಕ್ಕಳ ಬರ್ತಿನ ಬಳಿ ಬರ್ತ್ ಕೊಡಬೇಕೆಂದು ವಾದಿಸತೊಡಗಿದ. ಕಂಡಕ್ಟರ್ ತನ್ನ ಅಸಹಾಯಕತೆಯನ್ನು ವ್ಯಕ್ತಪಡಿಸಿದ.

ಇವರ ಮಾತುಗಳೆಲ್ಲಾ ನನ್ನ ಕಿವಿಯಲ್ಲಿ ಬೀಳುತ್ತಲೇ ಇದ್ದವು. ನಾನು ಮಧ್ಯದಲ್ಲಿ ಪ್ರವೇಶಿಸಿದರೆ ಆ ಮಹಾನುಭಾವನಿಗೆ ನನ್ನ ಮೇಲೆಲ್ಲಿ ಅನುಮಾನ ವುಂಟಾಗುವುದೋ ಎಂಬ ಹೆದರಿಕೆಯಿಂದ ನಾನು ಮೌನವಾಗಿದ್ದು ಬಿಟ್ಟೆ.

ಅನಂತರ ನೇರವಾಗಿ ಆ ಹುಡುಗಿಯನ್ನೇ ಕೇಳಿದೆ. "ಈಗ ನಿಮಗೆ ಈ ಬರ್ತ್ ತೆಗೆದುಕೊಳ್ಳುವುದರಿಂದ ಅನಾನುಕೂಲವೇನಾದರೂ ಆಗಿದೆಯೇ?"

"ನನಗೇನೂ ಅನಾನುಕೂಲವಾಗಿಲ್ಲ ಮಹಾರಾಯರೇ, ಅದೆಲ್ಲಾ ನಮ್ಮಣ್ಣನ ಗಾಬರಿ ಅಷ್ಟೆ. ಹೆಂಗಸರ ಬರ್ತ್ ಬಳಿ ನನ್ನ ಬರ್ತ್ ಸಹ ಇದ್ದರೆ ನನಗೆ ಸೆಕ್ಯೂರಿಟಿ ಅಂತ ನಮ್ಮಣ್ಣನ ಸ್ವಂತ ಅಭಿಪ್ರಾಯ."

ನಾನೂ ಆ ವಿಷಯವನ್ನು ಕುರಿತು ಆಲೋಚಿಸಿದೆ. ಗಂಡಸರ ಮಧ್ಯೆ ಒಬ್ಬ ಹುಡುಗಿ ಪ್ರಯಾಣಿಸಬೇಕಾದರೆ ಉಂಟಾಗುವ ತೊಂದರೆಗಳ ಬಗ್ಗೆ ಚಿಂತಿಸಬೇಕಾದದ್ದೇ.....

ನಾನೂ ಸಹ ಕಂಡಕ್ಟರ್ ಬಳಿ ಹೋಗಿ ವಾದಿಸ ತೊಡಗಿದೆ. ಸ್ವಲ್ಪಹೊತ್ತು ಆ ವಾಗ್ಯುದ್ಧ ಹೀಗೇ ನಡೆದಲ್ಲಿ ಕಂಡಕ್ಟರ್ ರೈಲಿನಿಂದಿಳಿದು ಓಡಿ ಹೋಗುತ್ತಾ ನೆನಿಸಿತು. ಆತ ಮಾತ್ರ ಏನು ಮಾಡಬಲ್ಲ ಪಾಪ! ಅಷ್ಟರಲ್ಲಿ ಇದನ್ನೆಲ್ಲಾ ಕೇಳುತ್ತಿದ್ದ ಒಬ್ಬ ವ್ಯಕ್ತಿ ಉದಾರವಾಗಿ "ನೋಡೀ, ನಾನೂ ನನ್ನ ಪತ್ನಿ ಪ್ರಯಾಣ

ಮಾಡುತ್ತಿದ್ದೇವೆ. ಈ ಹುಡುಗಿಯನ್ನು ನನ್ನ ಬರ್ತ್ ಮೇಲೆ ಮಲಗುವಂತೆ ಹೇಳಿ. ಒಂದು ರಾತ್ರಿಯ ಪ್ರಯಾಣವನ್ನು ಕುರಿತು ತಾನೇ ಇಷ್ಟೆಲ್ಲಾ ಗಲಾಟೆ. ಬೆಳಗಾದ ಕೂಡಲೇ ಅವರವರ ಸೀಟುಗಳಲ್ಲಿ ಅವರು ಕೂಡಬಹುದು" ಎಂದ.

ಆ ಹುಡುಗಿಯ ಅಣ್ಣ ಮತ್ತೆ ನನ್ನ ಕಡೆ ತಿರುಗಿದ. "ನೋಡೀ..... ಮರೀಬೇಡಿ..... ಸ್ವಲ್ಪ ಆ ಬರ್ತ್ ವ್ಯವಹಾರ ನೋಡಿಕೊಳ್ಳಿ. ಆತ ಮಾತು ತಪ್ಪಿದರೆ ಮತ್ತೆ ಆತನನ್ನು ರಿಕ್ವೆಸ್ಟ್ ಮಾಡಿ."

ಕೇಳಿದ ಮಾತುಗಳನ್ನೇ ಮತ್ತೆ ಮತ್ತೆ ಕೇಳುತ್ತಿದ್ದುದರಿಂದಾಗಿ ನನಗೆ ತಲೆ ಚಿಟ್ಟು ಹಿಡಿದಂತಾಯಿತು. ರೈಲು ಹೊರಟರೆ ಸಾಕಪ್ಪಾ ಅನ್ನಿಸಿಬಿಟ್ಟಿತ್ತು.

ನನ್ನ ಮೊರೆ ಗಾರ್ಡಿಗೆ ಕೇಳಿಸಿರಬೇಕು. ರೈಲು ಚಲಿಸಿತು.

"ಈತ ನಿಮ್ಮ ಚಿಕ್ಕ ಅಣ್ಣನೇನು?"

"ಹೌದು"

"ನಿಮ್ಮ ಮೇಲೆ ತುಂಬಾ ಪ್ರೀತಿ ಅಂತ ಕಾಣುತ್ತೆ"

ಆ ಹುಡುಗಿ ನಕ್ಕಳು.

ಈಗ ಆ ಹುಡುಗಿಯನ್ನು ನಿಧಾನವಾಗಿ ಪರಿಶೀಲಿಸಿ ನೋಡಿದೆ. ಹುಡುಗಿ ಆಕರ್ಷಣೀಯವಾಗಿದ್ದಳು. ಅವಳ ಕಣ್ಣಿನಲ್ಲಿ ಒಂದು ವಿಧವಾದ ಹೊಳಪಿತ್ತು.

"ಇರಬಹುದು. ಆದರೆ ಅಕ್ಕನೇ ಆಗಲಿ, ತಂಗಿಯೇ ಆಗಲಿ ಪ್ರತಿಯೊಬ್ಬ ಸೋದರನೂ ಅವಳನ್ನು ಬುದ್ಧಿಯಿಲ್ಲದ ಪೆದ್ದು ಅಂತಲೇ ತಿಳಿದುಕೋತಾನೆ. ಅಷ್ಟೇ ಅಲ್ಲ, ಪ್ರತಿಯೊಬ್ಬ ಹೆಣ್ಣೂ ಅವಕಾಶ ಸಿಕ್ಕಿದರೆ ಮತ್ತೊಬ್ಬನೊಂದಿಗೆ ಓಡಿಹೋಗುತ್ತಾಳೆಂದೇ ಸಂದೇಹ ಪಡುತ್ತಾನೆ." ಗಂಭೀರವಾದ ವಿಷಯವನ್ನು ಹಗುರವಾಗಿ ತೇಲಿಸಿ ನಗುತ್ತಲೇ ಹೇಳಿದ್ದಳವಳು. ಒಬ್ಬ ಹೆಣ್ಣುಮಗಳು ಸ್ವಲ್ಪವೂ ಸಂಕೋಚವಿಲ್ಲದೆ ಸ್ಪಷ್ಟವಾಗಿ ಈ ರೀತಿ ಮಾತನಾಡಿದ್ದು ನನಗೆ ತುಂಬಾ ಆಶ್ಚರ್ಯವನ್ನುಂಟು ಮಾಡಿತ್ತು.

"ನೀವೇ ಹೇಳಿ. ಆ ಬರ್ತ್ ಮೇಲೆ ಮಲಗಿದರೆ ಏನಾಗತ್ತೆ ಅಂತೀನಿ. ಇಷ್ಟು ಜನ ಇರುವ ಈ ಕಂಪಾರ್ಟ್‌ಮೆಂಟಿನಲ್ಲಿ ನನ್ನೊಂದಿಗೆ ಸರಸವಾಡಲು

ಯಾವ ಪುಂಡನಿಗಾದರೂ ಹೇಗೆ ಧೈರ್ಯ ಬಂದೀತು? ನಿಜ ಹೇಳಬೇಕೆಂದರೆ ಇಷ್ಟು ಜನ ಇರುವುದೇ ಒಂದು ಸೆಕ್ಯೂರಿಟಿ ಅಂದುಕೋಬಹುದಲ್ಲಾ....."

ಆ ಹುಡುಗಿ ಹೇಳಿದ್ದರಲ್ಲೂ ಪಾಯಿಂಟ್ ಇತ್ತು. ಹುಡುಗಿ ಚುರುಕಾಗಿದ್ದಾಳೆನಿಸಿತು. ಬೊಂಬಾಯಿಯಲ್ಲಿ ನಿವಾಸಿಸುವ ಹುಡುಗಿ, ಆಧುನಿಕವಾದ ಭಾವನೆಗಳನ್ನು ಬೆಳೆಸಿಕೊಂಡಿರುವುದು ಸಹಜ. ಆದರೆ ಅವರ ಮನೆಯವರು ಮಾತ್ರ ಇನ್ನೂ ಹಳೆಯ ಗೊಡ್ಡು ಸಂಪ್ರದಾಯಗಳಿಂದ ಹೊರಬಂದಂತಿಲ್ಲ. ಅವಳ ಕೆಲವು ಮಾತುಗಳು ನನಗೆ ಹಿಡಿಸಿದುವು. ಕೆಲವು ಮಾತುಗಳು ಹಿಡಿಸಲಿಲ್ಲ ಸಹ. ಒಂದೊಂದು ಸಲ ಅವಳ ಮಾತು ನನ್ನನ್ನು ಚಿಂತೆಗೀಡು ಮಾಡಿತು ಸಹ.

ನಾನೂ ಈ ದೇಶದಲ್ಲಿಯೇ ಹುಟ್ಟಿ ಬೆಳೆದವನು. ನನ್ನಲ್ಲಿಯೂ ಆಧುನಿಕ ಭಾವನೆಗಳಿದ್ದರೂ ಹಳೆಯ ಭಾವನೆಗಳ ವಾಸನೆ ಇನ್ನೂ ಹೋಗಿಲ್ಲವೆಂದೇ ಹೇಳಬೇಕು. ಪೂರ್ತಿಯಾಗಿ ಇಲ್ಲಿನವನೂ ಅಲ್ಲ, ಪೂರ್ತಿಯಾಗಿ ಅಲ್ಲಿನವನೂ ಅಲ್ಲ. ಭಾರತೀಯ ಸಂಸ್ಕೃತಿಯನ್ನು ಕುರಿತು, ಬದುಕಿನ ಹೊಸ ಹೊಸ ಮೌಲ್ಯಗಳನ್ನು ಕುರಿತು ಬಹಳ ಹೊತ್ತು ಮಾತನಾಡಿದೆವು. ನಮ್ಮಿಬ್ಬರ ಮಧ್ಯೆ ಬಹಳಷ್ಟು ಅಭಿಪ್ರಾಯ ಭೇದಗಳಿದ್ದವು. ಆ ಹುಡುಗಿ ಮೌನ ವಹಿಸಿದಳು ಆಗಾಗ ನನ್ನ ಕಡೆ ನೋಡಿಯೂ ನೋಡದಂತೆ ದೃಷ್ಟಿ ಬೀರತೊಡಗಿದಳು. ಮೃದು ಮಂದಹಾಸ ಅವಳ ತುಟಿಗಳ ಮೇಲೆ ಲಾಸ್ಯವಾಡತೊಡಗಿತು. ನಮ್ಮಿಬ್ಬರ ಮಧ್ಯೆ ಪ್ರೀತಿ ಹುಟ್ಟುತ್ತದೆಯೇನೋ ಎನ್ನಿಸತೊಡಗಿತು. ಮತ್ತೆ ಸಂಭಾಷಣೆ ಪ್ರಾರಂಭಿಸಿ ತನ್ನ ಕಾಲೇಜಿನ ವಿಷಯಗಳನ್ನು ಹೇಳತೊಡಗಿದಳು. ನಾನೂ ನನ್ನ ಆಫೀಸಿನಲ್ಲಿನ ವಿಶೇಷಗಳನ್ನು ಹೇಳತೊಡಗಿದೆ.

ರಾತ್ರಿ ಹನ್ನೊಂದು ಗಂಟೆಯ ಸಮಯದಲ್ಲಿ ಅವಳ ಸಾಮಾನುಗಳನ್ನು ನನಗೆ ಒಪ್ಪಿಸಿ ಅತ್ತ ಕಡೆಯ ಬರ್ತಿನ ಮೇಲೆ ಮಲಗಲು ಹೋದಳು. ಅವಳ ಬರ್ತಿನ ಮೇಲೆ ಮಧ್ಯ ವಯಸ್ಸಿನ ವ್ಯಕ್ತಿ ಬಂದು ಮಲಗಿದ.

★ ★

ಬೆಳಗಾಗಿ ನಾನು ಏಳುವ ವೇಳೆಗೆ ನನ್ನ ಎದುರಿನ ಸೀಟಿನಲ್ಲಿ ಅವಳು ನಗುತ್ತಾ ಕುಳಿತಿದ್ದುದು ಕಾಣಿಸಿತು. ಸೂಟ್‌ಕೇಸಿನಿಂದ ಟವಲನ್ನು ಹೊರತೆಗೆಯುತ್ತಿದ್ದ ಅವಳನ್ನು

"ರಾತ್ರಿ ಚೆನ್ನಾಗಿ ನಿದ್ದೆ ಬಂದಿತೇ?" ಎಂದು ವಿಚಾರಿಸಿದೆ.

"ಹಾಂ, ಚೆನ್ನಾಗಿ ನಿದ್ದೆ ಬಂತು."

ಅನಂತರ ಮತ್ತೆ ನಮ್ಮ ಸಂಭಾಷಣೆ ಮೊದಲಾಯಿತು. ಸಹಜವಾಗಿಯೇ ಬರಲಿರುವ ಸ್ಟೇಷನ್ನನ್ನು ಕುರಿತು ಕೇಳಿದಳು. ಆ ಸ್ಟೇಷನ್ನಿನಿಂದ ಅಜಂತಾ ಎಲ್ಲೋರಾ ಗುಹೆಗಳಿಗೆ ಬಸ್ಸುಗಳು ಹೋಗುತ್ತಿರುತ್ತವೆಯೆಂದು ಹೇಳಿದೆ ನಾನು.

"ನೀವು ಆ ಗುಹೆಗಳನ್ನು ನೋಡಿದೀರೇನು?" ಪ್ರಶ್ನಿಸಿದೆ ನಾನು.

"ಇಲ್ಲ. ಆದರೆ ನೋಡಬೇಕೆಂಬ ಆಸೆ ಮಟ್ಟಿಗಿದೆ. ಅಪೂರ್ವವಾದ ಗುಹೆಗಳು ಎಂದು ಕೇಳಿದ್ದೇನೆ. ಈ ವಿಷಯ ಮೊದಲೇ ತಿಳಿದಿದ್ದರೆ ಅದಕ್ಕೆ ತಕ್ಕಂತೆ ಕಾರ್ಯಕ್ರಮ ರೂಪಿಸಿಕೊಳ್ಳಬಹುದಾಗಿತ್ತು" ಹಾಗೆನ್ನುತ್ತಾ ಆಲೋಚನಾ ಮಗ್ನಳಾದಳು ಅವಳು. ಅವಳ ಮುಖದಲ್ಲಿ ಅಸಂತೃಪ್ತಿ ಕಾಣಿಸುತ್ತಿತ್ತು. "ನನಗೊಂದು ಆಲೋಚನೆ ಹೊಳೀತಿದೆ. ನಾವು ಬರೋ ಸ್ಟೇಷನ್‌ನಲ್ಲಿ ಇಳಿದುಬಿಡೋಣ. ಅಜಂತಾ, ಎಲ್ಲೋರಾ ಗುಹೆಗಳನ್ನು ನೋಡಿ, ರಾತ್ರಿಯ ರೈಲಿನಲ್ಲಿ ಊರಿಗೆ ಹೋಗಬಹುದು. ಆ ಗುಹೆಗಳಲ್ಲಿ ಓಡಾಡುತ್ತಿದ್ದರೆ ಅಲೌಕಿಕವಾದ ಅನುಭವವುಂಟಾಗುತ್ತದೆಯಲ್ಲವೇ? ಅಲ್ಲಿಯ ಅದ್ಭುತವಾದ ಕಲಾಖಂಡಗಳನ್ನು ಕುರಿತು ಬಹಳಷ್ಟು ಕೇಳಿದೀನಿ ನಾನು."

"ಜೋಕ್ ಮಾಡ್ತಿದೀರಾ?" ನನಗುಂಟಾದ ನಿಬ್ಬೆರಗನ್ನು ತೋರ್ಪಡಿಸಿ ಕೊಳ್ಳದೆ ಕೇಳಿದೆ.

ಇಂತಹ ಸುಂದರಿಯಾದ ಹುಡುಗಿಯೊಂದಿಗೆ ಅಜಂತಾ, ಎಲ್ಲೋರಾ ಗುಹೆಗಳನ್ನು ನೋಡುತ್ತಿದ್ದರೆ ಉಂಟಾಗುವ ಆನಂದವನ್ನು ಊಹಿಸುತ್ತಿದ್ದಂತೆ ನನ್ನ ಮೈ ಪುಳಕಗೊಂಡಿತು. ಈ ಬಯಕೆಯನ್ನು ಹತ್ತಿಕ್ಕುವುದೂ ಕಷ್ಟವೇ. ಆ ಗುಹೆಗಳಲ್ಲಿನ ಶಿಲ್ಪಗಳು ಸಹ ಸ್ತ್ರೀ ಪುರುಷ ಬಾಂಧವ್ಯವನ್ನು ಕುರಿತಾದುವೇ ಅಲ್ಲವೇ? ಅತಿ ಕಷ್ಟದಿಂದ ಆ ಬಯಕೆಯನ್ನು ಹೊರದೂಡಿದೆ.

"ಅಲ್ಲಿ ನಿಮ್ಮ ಭಾವನವರು ಸ್ಟೇಷನ್ನಿಗೆ ಬಂದಿರುತ್ತಾರೆ. ಬರಬೇಕಾದ ಗಾಡಿಯಲ್ಲಿ ನೀವು ಬಾರದೆ ಹೋದರೆ ಅವರು ಗಾಬರಿಪಡುವುದಿಲ್ಲವೇ?"

"ರಾತ್ರಿ ರೈಲಿನಲ್ಲಿ ಬರ್ತಿದೀನೀಂತ ಟೆಲಿಗ್ರಾಂ ಕೊಡ್ತೀನಿ" ಎಂದಳು.

ನಾನು ಗಟ್ಟಿಯಾಗಿ ನಕ್ಕುಬಿಟ್ಟೆ. "ಅಂದರೆ ನೀವು ನನಗೆ ವಾರಂಟ್ ಬರೋ ಹಾಗೆ ಮಾಡ್ತಿದೀರಿ ಅಂತಾಯಿತು. ನಿಮ್ಮ ಅಣ್ಣ ಕೂಡಲೇ ನನ್ನ ಚಹರೆಯೊಂದಿಗೆ ಪೊಲೀಸ್ ಸ್ಟೇಷನ್ನಿನಲ್ಲಿ ರಿಪೋರ್ಟ್ ಮಾಡ್ತಾರಷ್ಟೆ" ಎಂದೆ.

ಅವಳೂ ಕಿಲಕಿಲನೆ ನಕ್ಕು "ರೈಲು ಪ್ರಯಾಣದಲ್ಲಿ ಯಾರನ್ನೋ ಪ್ರೇಮಿಸಿ ಅವನೊಂದಿಗೆ ಓಡಿಹೋದಳೆಂಬ ಹೆಸರು ನನಗೂ ಬರುತ್ತದೆಯಷ್ಟೆ!" ಎಂದಳು.

ಇದೇ ಧೋರಣೆಯಲ್ಲಿ ಬಹಳ ಹೊತ್ತು ನಮ್ಮಿಬ್ಬರ ಮಧ್ಯೆ ಸಂಭಾಷಣೆ ನಡೆಯಿತು. ನನ್ನ ಮನಸ್ಸು ಹಗುರಾಗಿ ಯಾವುದೋ ಲೋಕದಲ್ಲಿ ವಿಹರಿಸುತ್ತಿದ್ದಂತಿತ್ತು. ಹೊಸ ಹೊಸ ವಿಷಯಗಳಲ್ಲಿ ಹೊಸ ಹೊಸ ಕೋನಗಳು ಆವಿರ್ಭವಿಸಿ ಸವೆದು ಹೋಗ ತೊಡಗಿದ್ದುವು.

ಈ ಸಲ ಆ ಹುಡುಗಿ ಸ್ವಲ್ಪ ಸೀರಿಯಸ್ ಆಗಿಯೇ ಕೇಳಿದಳು.

"ಈ ತಮಾಷೆಯ ಮಾತುಗಳೆಲ್ಲಾ ಹಾಗಿರಲಿ. ನಾವು ಬರೋ ಸ್ಟೇಷನ್ನಿನಲ್ಲಿ ಇಳಿಯುತ್ತಿದ್ದೇವೆಯೋ ಇಲ್ಲವೋ ಹೇಳಿ ಮತ್ತೆ."

ನಾನು ಮಾತಿನ ರೀತಿಯನ್ನು ಬದಲಾಯಿಸಿ ನಾನು ಬಹಳ ಅರ್ಜಂಟಾಗಿ ಮನೆಗೆ ಹೋಗಬೇಕಾಗಿರುವುದರಿಂದ ಆ ಸ್ಟೇಷನ್ನಿನಲ್ಲಿ ಇಳಿಯಲು ಸಾಧ್ಯವಿಲ್ಲವೆಂದು ಖಂಡಿತವಾಗಿ ಹೇಳಿಬಿಟ್ಟೆ. ಹೀಗೇ ಇನ್ನೂ ಒಂದೆರಡು ಸುಳ್ಳುಗಳನ್ನು ಸೇರಿಸಿ ಹೇಳಿದೆ.

ಆ ಗುಹೆಗಳಲ್ಲಿನ ಶಿಲ್ಪಗಳ ವಿಷಯದಲ್ಲಿಯೂ ನಾನು ಕರೆದುಕೊಂಡು ಹೋಗುವ ಹುಡುಗಿಯ ಸ್ವಭಾವದ ವಿಷಯದಲ್ಲಿಯೂ ನನಗೆ ತಿಳಿಯದಂತಹ ಭಯ ನನ್ನಲ್ಲಿ ಉಂಟಾಗಿದ್ದಿರಬಹುದು.

ನಮ್ಮ ಹತ್ತಿರದಲ್ಲಿಯೇ ಕುಳಿತಿದ್ದ ಒಬ್ಬ ದೊಡ್ಡ ಮನುಷ್ಯ ಮೊದಲಿನಿಂದ ನಮ್ಮ ಸಂಭಾಷಣೆಯನ್ನು ಕೇಳುತ್ತಿದ್ದನೆಂದು ಕಾಣುತ್ತೆ. ಆ ಹುಡುಗಿಯ ಕಡೆ ತಿರುಗಿ,

"ನಿಮಗೇನೂ ಅಭ್ಯಂತರವಿಲ್ಲದಿದ್ದಲ್ಲಿ ನಿಮಗೆ ಜತೆಯಾಗಿ ನಾನು ಬರುತ್ತೀನಿ" ಎಂದಂದ ಆ ಬುದ್ಧಿವಂತ.

ವಿಷಯ ನನ್ನ ಕೈಜಾರಿ ಹೋಗುತ್ತಿದ್ದಂತೆನಿಸಿತು. ಆ ಹುಡುಗಿಯ ಅಣ್ಣನ ಮುಖ ನನ್ನ ಕಣ್ಣ ಮುಂದೆ ನಿಂತಿತು.

"ಸರಿ, ಬರೋ ಸ್ಟೇಷನ್ನಿನಲ್ಲಿ ನಾನು ಒಂಟಿಯಾಗಿಯೇ ಇಳೀತೀನಿ. ನಾನು ರಾತ್ರಿ ರೈಲಿಗೆ ಬರ್ತೀನಿ ಅಂತ ನಮ್ಮ ಭಾವನವರಿಗೆ ಹೇಳಿಬಿಡಿ ನೀವು" ಎಂದಳು ಆ ಹುಡುಗಿ.

"ನಿಮ್ಮ ಭಾವನವರನ್ನು ಹೇಗೆ ಗುರ್ತಿಸಲಿ ನಾನು? ಅವರನ್ನು ನಾನೆಂದೂ ನೋಡಿಲ್ಲವಷ್ಟೆ!" ಎಂದಂದು, ಆ ಹುಡುಗಿಯ ಜತೆಗೆ ಹೊರಡಲು ಮುಂದೆ ಬಂದಾತನ ಕಡೆ ಪರಿಶೀಲಿಸಿ ನೋಡಿದೆ. ನನ್ನ ದೃಷ್ಟಿಗೆ ನಂಬರ್‌ವನ್ ರೋಗ್ ತರಹಾ ಕಾಣಿಸಿದ ಆತ. ಆತನ ಧೈರ್ಯ ನನ್ನನ್ನು ಕೆರಳಿಸಿತ್ತು. ನಮ್ಮ ಮಾತಿನ ಮಧ್ಯೆ ಆತ ಪ್ರವೇಶಿಸಿದ್ದು ನನಗೆ ಸ್ವಲ್ಪವೂ ಸರಿಬರಲಿಲ್ಲ.

ಮತ್ತೊಂದು ವಿಷಯ ಸಹ ನನಗೆ ತುಂಬಾ ಆಶ್ಚರ್ಯವನ್ನುಂಟು ಮಾಡಿತ್ತು. ಹೆಣ್ಣುಮಕ್ಕಳನ್ನು ತಿಳುವಳಿಕೆಯಿಲ್ಲದವರು ಅಂದುಕೊಳ್ಳುವುದು ಅರ್ಥವಿಲ್ಲದ ವಿಷಯ ಎಂದು ನನಗನ್ನಿಸಿತ್ತು. ಆ ವ್ಯಕ್ತಿಯ ಮಾತಿಗೆ ಅವಳು ಉತ್ತರ ಕೊಟ್ಟಿರಲಿಲ್ಲ. ಕೇಳಿಸಿಕೊಂಡರೂ ಕೇಳಿಸಿಕೊಳ್ಳದವಳಂತೆ ಸುಮ್ಮನಿದ್ದು ಬಿಟ್ಟಿದ್ದಳು. ಆ ವ್ಯಕ್ತಿ ಮತ್ತೊಮ್ಮೆ ಪ್ರಯತ್ನಿಸಿದ. ಆದರೂ ಆ ಹುಡುಗಿ ತನ್ನನ್ನಲ್ಲ ವೆಂಬಂತೆ ನಿರ್ಲಕ್ಷ್ಯದಿಂದ ಪುಟಗಳನ್ನು ತಿರುವಿ ಹಾಕುತ್ತಾ ಮೌನವಾಗಿದ್ದು ಬಿಟ್ಟಿದ್ದಳು. ನಮ್ಮ ಮಧ್ಯೆ ಕೆಲವು ಕ್ಷಣಗಳು ಮೌನವಾಗಿ ಕಳೆದ ನಂತರ ನನ್ನನ್ನು ದಿಟ್ಟಿಸಿ ನೋಡುತ್ತಾ "ನೀವು ಅನಾವಶ್ಯಕವಾಗಿ ಚಿಂತಿಸಬೇಡಿ" ಎಂದಳು.

ನನ್ನ ಹೊಣೆಗಾರಿಕೆ ನನ್ನನ್ನು ಸುಮ್ಮನಿರಗೊಡಲಿಲ್ಲ. ಆ ಹುಡುಗಿಯ ಅಣ್ಣ ಈ ಹೊಣೆಯನ್ನು ನನ್ನ ತಲೆಗೆ ಕಟ್ಟಿ ಒಳ್ಳೆಯ ಕೆಲಸ ಮಾಡಿದನೆಂದೇ ನನಗನ್ನಿಸಿತ್ತು.

"ನೋಡಿ, ನಿಮ್ಮನ್ನು ಒಬ್ಬರನ್ನೇ ಸ್ಟೇಷನ್ನಿನಲ್ಲಿ ಇಳಿಯಗೊಡಲಾರೆ ನಾನು. ನಿಮ್ಮನ್ನು ಕ್ಷೇಮವಾಗಿ ಮನೆಗೆ ಸೇರಿಸುತ್ತೇನೆಂದು ನಿಮ್ಮ ಅಣ್ಣನಿಗೆ ಮಾತು

ಕೊಟ್ಟಿದೀನಿ ಅಂತ ನಿಮಗೂ ಗೊತ್ತು. ಅದನ್ನು ಕುರಿತು ಆಲೋಚಿಸಬೇಕಾದ ಹೊಣೆ ನಿಮ್ಮ ಮೇಲೂ ಇದೆ ಅಲ್ಲವೇ?" ಎಂದೆ.

"ನೀವು ನನಗೆ ಏನಾಗುತ್ತೀರಿ ಅಂತ? ಒಬ್ಬ ಸಹಪ್ರಯಾಣಿಕ ಅಂತ ನಮ್ಮಣ್ಣ ನನ್ನ ಬಾಧ್ಯತೆಯನ್ನು ನಿಮಗೆ ಒಪ್ಪಿಸಿದ. ನಿಮ್ಮ ರೀತಿ ನೋಡುತ್ತಿದ್ದರೆ...."

ಆ ಹುಡುಗಿ ನನ್ನೊಂದಿಗೆ ಜಗಳಕ್ಕೆ ಇಳಿಯುತ್ತಾಳೇನೋ ಎಂದು ಹೆದರಿದ ನಾನು. ನಂಬರ್ ವನ್ ರೋಗ್ ಮಾತ್ರ ಸಂತೋಷದಿಂದಿರುವಂತೆ ಕಾಣಿಸುತ್ತಿತ್ತು. ತನ್ನ ಪ್ಲಾನ್ ಸಕ್ಸೆಸ್ ಆಗುತ್ತೇಂತ ಎದುರು ನೋಡುತ್ತಿದ್ದಂತಿತ್ತು ಅವನು.

"ನೋಡಿ, ನನಗೇನೂ ಅಭ್ಯಂತರವಿಲ್ಲ. ನಿಮಗೆ ತೋಚಿದಂತೆ ಮಾಡಬಹುದು. ನಿಮಗೆ ಮೈನಾರಿಟಿ ತೀರಿದೆ. ನಿಮ್ಮನ್ನು ಅಡ್ಡಿಪಡಿಸುವವರು ಯಾರೂ ಇಲ್ಲ. ನಿಮ್ಮ ಅಣ್ಣ ನಿಮ್ಮ ಬಾಧ್ಯತೆಯನ್ನು ನನ್ನ ಮೇಲೆ ಹೊರಿಸಿದಾಗ ನೀವೇನೂ ಮಾತನಾಡಲಿಲ್ಲ. ಈಗ ನೋಡಿದರೆ ಹೀಗೆ ಹೇಳುತ್ತಿದ್ದೀರಿ. ನಿಮ್ಮ ಅಣ್ಣ ಹೇಳಿದ ಮಾತಿಗೆ ಒಪ್ಪಿಕೊಂಡಿದ್ದು ನನ್ನದೇ ತಪ್ಪು ಅನ್ನಿಸುತ್ತಿದೆ. ಈ ವಿಷಯದಲ್ಲಿ ನಾನು ಸಿಕ್ಕಿಹಾಕಿಕೊಳ್ಳಬಾರದಿತ್ತು" ಎಂದೆ ಗಂಭೀರವಾಗಿ.

ಆ ಹುಡುಗಿ ತನ್ನ ತೊಂದರೆಗಳನ್ನು ವಿವರಿಸತೊಡಗಿದಳು. ಮತ್ತೆ ವಾಪಸಾಗುವಾಗ ಜತೆಯಲ್ಲಿ ಅಕ್ಕ, ಅಕ್ಕನ ಮಕ್ಕಳೂ ಇರುತ್ತಾರಂತೆ. ಅವರೆಲ್ಲರ ಜತೇಲಿ ಆ ಗುಹೆಗಳನ್ನು ನೋಡಲು ಹೋಗುವುದು ಸಾಧ್ಯವಾಗದಂತೆ. ಆನಂತರ ಎರಡು ಮೂರು ವರ್ಷ ಓದಿನಲ್ಲಿ ಬಿಜಿ ಆಗಿಬಿಡುತ್ತಾಳಂತೆ. ಆ ನಂತರದ ವಿಷಯ ಹೇಗೆ ಹೇಳುವುದು.....

ಆ ಸ್ಟೇಷನ್ ಬಂದಿತ್ತು. ಮತ್ತೆ ರೈಲು ಹೊರಟಿತು. ಆ ಹುಡುಗಿ ಇಳಿಯಲಿಲ್ಲ. ನಾನು ಹಾಯಾಗಿ ಉಸಿರೆಳೆದುಕೊಂಡೆ. ಆ ಹುಡುಗಿ ನಾನು ತಿಳಿದುಕೊಂಡಷ್ಟು ಹಠಮಾರಿಯಲ್ಲ.

ನನ್ನ ಬಳಿ ಕುಳಿತ ದೊಡ್ಡಮನುಷ್ಯ ಕಮ್ ನಂಬರ್ ವನ್ ರೋಗ್‌ನ ಮುಖ ಆಶಾಭಂಗದಿಂದ ಕಪ್ಪಿಟ್ಟಿತ್ತು. ಆಗಾಗ ನನ್ನನ್ನು ತಿಂದುಬಿಡುವಂತೆ ನೋಡುತ್ತಿದ್ದ. ನಾನೀಗ ನಂಬರ್ ವನ್ ರೋಗ್‌ಗೆ ನಂಬರ್ ಒನ್ ಶತ್ರುವಾಗಿ ಪರಿಣಮಿಸಿದ್ದೆ. ಆ ವ್ಯಕ್ತಿಯೊಂದಿಗೆ ಈ ಹುಡುಗಿ, ಅಜಂತಾ, ಎಲ್ಲೋರಾ

ಗುಹೆಗಳನ್ನು ನೋಡಲು ಹೋಗಿದ್ದಿದ್ದರೆ ಅವನ ಪ್ಲಾನ್ ಸಕ್ಸೆಸ್ ಆಗುತ್ತಿತ್ತೇನೋ. ಅವನಿಗೆ ಅವಕಾಶ ಸಿಕ್ಕುತ್ತಿದ್ದುದಂತೂ ಖಂಡಿತ. ನಿಜ ಹೇಳಬೇಕೆಂದರೆ ನನ್ನ ಮನಸ್ಸಿನಲ್ಲಿಯ ಒಳಮನಸ್ಸು ಸಹ ಈ ಅವಕಾಶವನ್ನು ಕಳೆದುಕೊಂಡದ್ದಕ್ಕಾಗಿ ನನ್ನನ್ನು ಹಳಿಯುತ್ತಿತ್ತು.....

ಟ್ರೈನ್ ಒಂದು ದೊಡ್ಡ ಸ್ಟೇಷನ್ನಿನಲ್ಲಿ ನಿಂತಿತು. ಅಲ್ಲಿ ಆ ಹುಡುಗಿಯೂ ನಾನೂ ಹೊಟ್ಟೆಯ ತುಂಬಾ ತಿಂಡಿ ತಿಂದೆವು. ಕೆಲವರು ಪ್ರಯಾಣಿಕರು ಅಲ್ಲಿ ಇಳಿದಳು. ಹೊಸ ಪ್ರಯಾಣಿಕರು ಹತ್ತಿ ಕುಳಿತರು. ನಾವಿಬ್ಬರೂ ಮತ್ತೆ ಮಾಮೂಲಾಗಿ ಸಂಭಾಷಣೆಯಲ್ಲಿ ಮುಳುಗಿದೆವು. ಕಂಡಕ್ಟರ್ ನಮ್ಮ ಟಿಕೆಟ್ಟು ಗಳನ್ನು ಚೆಕ್ ಮಾಡಲು ಬಂದಾಗ ತಾತ್ಕಾಲಿಕವಾಗಿ ನಮ್ಮ ಸಂಭಾಷಣೆ ನಿಂತಿತ್ತು.

ಆಗ ನಮಗೆದುರಾಗಿ ಮೂರುಜನ ಕಾನ್ಸ್‌ಟೇಬಲ್ಸ್ ಕುಳಿತಿದ್ದುದು ನನ್ನ ಗಮನಕ್ಕೆ ಬಂತು. ಕಂಡಕ್ಟರ್ ಅವರ ಪಾಸುಗಳನ್ನು ನೋಡುತ್ತಿದ್ದ. ಅವರು ರಾಜಸ್ಥಾನ್‌ನಲ್ಲಿಯ ಯಾವುದೋ ಊರಿಗೆ ಹೋಗಬೇಕಂತೆ. ರೂಟನ್ನು ಕುರಿತು ಕಂಡಕ್ಟರನ್ನು ವಿಚಾರಿಸುತ್ತಿದ್ದರು.

"ಆ ಊರಿನಲ್ಲಿ ನಿಮಗೇನು ಕೆಲಸ?" ಒಬ್ಬ ಪ್ರಯಾಣಿಕ ಅವರನ್ನು ಕೇಳಿದ.

"ಬಹಳ ಕಷ್ಟತರವಾದ ಕೆಲಸದ ಮೇಲೆ ಹೋಗ್ತಿದೀವಿ. ರಾಜಸ್ಥಾನ್‌ನಲ್ಲಿ ಒಬ್ಬ ಕಳ್ಳ ಸಿಕ್ಕುಬಿದ್ದಿದ್ದಾನೆ. ಒಂದು ಕೇಸಿನ ಸಂದರ್ಭದಲ್ಲಿ ನಾವು ಅವನನ್ನು ಇಲ್ಲಿಗೆ ಕರೆತರಬೇಕಾಗಿದೆ."

ಆ ಕ್ರೂರನಾದ ಕಳ್ಳನನ್ನು ಕುರಿತು ಭಯಂಕರವಾಗಿ ವರ್ಣಿಸತೊಡಗಿದರು. ಹಾಗೆ ಹೇಳುವಾಗ ಅವರ ಮುಖದಲ್ಲಿ ಭಯ, ಗಾಬರಿ ಸ್ಪಷ್ಟವಾಗಿ ಕಾಣುತ್ತಿತ್ತು.

ಆ ಖೈದಿಯನ್ನು ಇಷ್ಟು ದೂರ ಕರೆದುಕೊಂಡು ಬರುವುದು ಕಷ್ಟ ಸಾಧ್ಯವಾದ ಕೆಲಸ. ಆ ಕಳ್ಳ ಎಷ್ಟೋ ಸಲ ಚಲಿಸುತ್ತಿದ್ದ ಎಕ್ಸ್‌ಪ್ರೆಸ್ ರೈಲಿನೊಳಗಿನಿಂದ ಧುಮುಕಿ ಓಡಿಹೋಗಿದ್ದನಂತೆ.

ನಮ್ಮ ಕಂಪಾರ್ಟ್‌ಮೆಂಟಿನಲ್ಲಿ ಕಳ್ಳನನ್ನು ಕುರಿತ ಚರ್ಚೆ ಪ್ರಾರಂಭವಾಯಿತು. ಎಲ್ಲರ ಮುಖಗಳ ಮೇಲೂ ವಿಚಿತ್ರವಾದ ಭಯ ಕಾಣತೊಡಗಿತು.

"ನೋಡಿ, ನೀವು ಆ ಕಳ್ಳ ಚಲಿಸುತ್ತಿರುವ ರೈಲಿನಿಂದ ಧುಮುಕಿ ಓಡಿಹೋಗದಂತೆ ಹುಷಾರಾಗಿರಬೇಕು. ಅವನ ಕಾಲುಗಳಿಗೂ ಕೈಗಳಿಗೂ ಕೋಳ ಹಾಕಿ ಬಂಧಿಸಬಹುದಲ್ವಾ....." ಒಬ್ಬ ಪ್ರಯಾಣಿಕ ಸಲಹೆ ಕೊಟ್ಟ.

ಆ ಖೈದಿಯನ್ನು ತಮ್ಮೊಂದಿಗೆ ಕರೆದೊಯ್ಯಲು ಯಾವ ವಿಧವಾದ ಜಾಗ್ರತೆಗಳನ್ನು ತೆಗೆದುಕೊಳ್ಳಲಿದ್ದಾರೆಂಬುದನ್ನು ವಿವರವಾಗಿ ಹೇಳಿದರವರು.

ನಾವು ಇಳಿಯುವ ಸ್ಟೇಷನ್ ಬಂದಿತ್ತು. ಸಹ ಪ್ರಯಾಣಿಕರಿಗೆ ವಿದಾಯ ಹೇಳಿದೆವು. ಅಜಂತಾ, ಎಲ್ಲೋರಾ ಗುಹೆಗಳಲ್ಲಿ ಆ ಹುಡುಗಿಯೊಂದಿಗೆ ವಿಹರಿಸುತ್ತಿರುವಂತೆ ಕನಸು ಕಂಡ ಆ ದೊಡ್ಡ ಮನುಷ್ಯ ನನ್ನ ಕಡೆ ಇನ್ನೂ 'ಗುರ್' ಎಂದು ನೋಡುತ್ತಲೇ ಇದ್ದ.

ಆ ಹುಡುಗಿಯ ಭಾವನವರು ಸ್ಟೇಷನ್ನಿನಲ್ಲಿ ಕಾದಿದ್ದರು. ಅವರಿಗೆ ಆ ಹುಡುಗಿಯನ್ನು ಒಪ್ಪಿಸಿದ ನಂತರ ನನ್ನ ಎದೆಯ ಮೇಲಿನ ಭಾರ ಕಡಿಮೆಯಾದಂತೆನಿಸಿತು. ಬಹಳ ದೊಡ್ಡದಾದ ಕರ್ತವ್ಯವನ್ನು ನಿರ್ವಹಿಸಿದ ತೃಪ್ತಿಯುಂಟಾಗಿತ್ತು ನನಗೆ.

ಟಾಂಗಾದಲ್ಲಿ ಕುಳಿತೆ. ನಾನೂ ಸಹ ಒಂದು ಹೊಣೆಗಾರಿಕೆಯನ್ನು ನಿರ್ವಹಿಸುವಲ್ಲಿ ಯಶಸ್ವಿಯಾಗಿ ವಿಶ್ವಾಸವನ್ನು ಉಳಿಸಿಕೊಂಡಿದ್ದೆ. ಒಬ್ಬ 'ಖೈದಿ'ಯನ್ನು ಕರೆತಂದು ಜಾಗರೂಕತೆಯಿಂದ ಒಪ್ಪಿಸಬೇಕಾದ ಸ್ಥಳದಲ್ಲಿ ಒಪ್ಪಿಸದಂತೆನಿಸಿತ್ತು ನನಗೆ. ಖೈದಿ ಕಳ್ಳನೋ ಡಕಾಯಿತನೋ ಆಗಿದ್ದಲ್ಲಿ ಅವನು ಖೈದಿಯಾಗಲು ಕಾರಣವೊಂದಿರುತ್ತಿತ್ತು. ಆದರೆ ನಾನು ಕರೆತಂದ ಖೈದಿಯ ಹಿಂದೆ ಎಂತಹ ಕಾರಣವಿದ್ದೀತು? ಎಷ್ಟು ಹುಡುಕಿದರೂ ಅಪರಾಧದ ಸುಳಿವೂ ಕಾಣಿಸಲಿಲ್ಲ ನನಗೆ..... ಆಕೆ ಕೇವಲ ಒಬ್ಬ ಸ್ತ್ರೀಯಾಗಿದ್ದಳು..... ಅಷ್ಟೆ! ಅದೇ ಆಕೆಯ ಅಪರಾಧ ಹೌದೇ?.....



# ಸಹೋದರರು

ಮೂಲ : ಶ್ರೀ ಪಿ.ಎಸ್. ನಾರಾಯಣ

**ಬಾ**ಗಿಲ ಬಳಿ ನಿಂತಿದ್ದ ರಾಜಶೇಖರ ರೈಲಿನ ವೇಗ ಹೆಚ್ಚಾದ ನಂತರ ಹಿಂತಿರುಗಿ ಬಂದು ತನ್ನ ಸೂಟ್‌ಕೇಸಿನ ಪಕ್ಕದಲ್ಲಿ ಕುಳಿತ. ಫಸ್ಟ್‌ಕ್ಲಾಸ್ ಕಂಪಾರ್ಟ್‌ಮೆಂಟಿನಲ್ಲಿ ಒಬ್ಬಂಟಿಗನಾಗಿ ಪ್ರಯಾಣ ಮಾಡುವುದು ಅವನಿಗೆ ಬೇಸರವನ್ನುಂಟು ಮಾಡಿತ್ತು.

ಬೆಚ್ಚಗಿನ ಉಡುಪನ್ನು ಧರಿಸಿದ್ದರೂ ಚಳಿ ಅವನನ್ನು ತಟ್ಟಿ ತಾನೂ ಇದ್ದೇನೆಂದು ಎಚ್ಚರಿಸುವಂತಿತ್ತು. ಆಮೇಲೆ ಆತ ಸಿಗರೇಟ್ ಹಚ್ಚಿ ಸೇದತೊಡಗಿದ್ದ.

ಆಗಲೇ ರಾಜೇಶ್ವರಿಯ ನೆನಪಾಯಿತವನಿಗೆ. ಏನು ಮಾಡುತ್ತಿದ್ದಾಳೋ!

ತಾನೆಲ್ಲಿ 'ಅವರ' ಮರುಳು ಮಾತಿಗೆ ಸೋತುಹೋಗುತ್ತೇನೋ ಎಂಬ ಕಳವಳದಿಂದ ಬಹುಶಃ ರಾಜೇಶ್ವರಿಗೆ ನಿದ್ದೆ ಹತ್ತಿರಲಾರದು.

'ಅವರು' ಎಂದುಕೊಂಡ ತಕ್ಷಣ ಸ್ವರ್ಗಸ್ಥನಾದ ತಂದೆಯ ನೆನಪಾಯಿತು. ಸಾಯಂಕಾಲ ಐದು ಗಂಟೆಯ ಸಮಯದಲ್ಲಿ 'ಅವರಿಂ'ದ ಬಂದ ಟೆಲಿಗ್ರಾಂ ನೆನಪಾಯಿತು.

'ಅಪ್ಪ ತೀರಿಹೋದರು. ತಕ್ಷಣ ಹೊರಟು ಬಾ ರಾಬರ್ಟ್.'

ರಾಬರ್ಟ್! ತನ್ನನ್ನು ಅಣ್ಣ ಎಂದು ಕರೆಯುತ್ತಾನೆ!

ತನಗಾವಾಗಲಾದರೂ ಹಾಗನಿಸುತ್ತಿತ್ತೆ? ಏನೋ! ಛೇ!..... ಆ ಕಲ್ಪನೆಯೇ ಮನಸ್ಸಿಗೆ ಜುಗುಪ್ಸೆ ಹುಟ್ಟಿಸುತ್ತಿತ್ತು – ರಾಬರ್ಟ್ ತನಗೆ ತಮ್ಮನೆ?

ಶಶಿಕಲಾ! ರಾಬರ್ಟ್ ತಂಗಿ – ಹೌದು, ಅಪ್ಪ ತನ್ನ ತಾಯಿಯ ಜ್ಞಾಪಕಾರ್ಥವಾಗಿ ಆ ಹೆಸರಿಟ್ಟುದಾಗಿ..... ಜೀವಿತದಲ್ಲಿ ಅಪರೂಪಕ್ಕೆ ಕಾಣಸಿಕ್ಕಿದ ಸಂದರ್ಭಗಳಲ್ಲಿ ಒಂದು ಸಲ ಹೇಳಿದ್ದಂತೆ ನೆನಪು.

ಆಕೆ! ತನ್ನ ತಂದೆಗೆ..... ಉಹುಂ..... ಈಗೇಕೆ ಅವೆಲ್ಲಾ.....

ಪೆಟ್ಟಿಗೆಯಿಂದ ರಗ್ಗು ತೆಗೆದ. ಕಂಪಾರ್ಟ್‌ಮೆಂಟ್ ಬಾಗಿಲು ಅಗುಳಿ ಹಾಕಿ, ಸೂಟ್‌ಕೇಸ್ ಒಂದು ಪಕ್ಕಕ್ಕಿಟ್ಟು ಸೀಟಿನ ಮೇಲೆ ಮಲಗಿ ರಗ್ಗು ಹೊದ್ದುಕೊಂಡ.

ನಾಳೆ ಬೆಳಿಗ್ಗೆ ತಾನಲ್ಲಿಗೆ ಹೋಗುತ್ತಾನೆ. ತನ್ನನ್ನು ನೋಡಿ ಅವರು – ಇದಕ್ಕೆ ಮುಂಚೆ ಒಂದೆರಡು ಸಲ ನೋಡಿದ್ದರಾದ್ದರಿಂದ ಗುರ್ತು ಹಿಡಿಯ ಬಹುದು.

ಕುಳಿತುಕೊಳ್ಳಲು ಹೇಳುತ್ತಾರೆ.

ಕುಳಿತುಕೊಳ್ಳುತ್ತಾನೆ.

ಅನಂತರ? ಹೇಗೆ ಮಾತನಾಡಿಸಬೇಕು? ಆಂ..... ಒಂದು ನಿಮಿಷ ಸುಮ್ಮನಿದ್ದು ಅವರಿಗೆ..... ಉಹುಂ..... 'ತಂದೆಯವರಿಗೆ ಏನಾಗಿತ್ತು?' ಎಂದು ಕೇಳುವುದು.

ಆ ಪ್ರಶ್ನೆಗೆ ಬಹುಶಃ ರಾಬರ್ಟ್, ಶಶಿಕಲಾ ಸಹ ಅಳುತ್ತಾ ಕಣ್ಣೀರು ಹರಿಸುತ್ತಾರೇನೋ!

ತನಗೆ ಅಳು ಬರುತ್ತೋ ಇಲ್ಲವೋ?

ಆದರೆ ರಾಜೇಶ್ವರಿಯ ಭಯ ಬೇರೆ – ಅವರೊಂದಿಗೆ ತಾನೂ ಎಲ್ಲಿ ಕಣ್ಣೀರು ಹರಿಸುತ್ತೇನೋ ಎಂದು. ಅದೊಂದೇ ಅಲ್ಲ, ಆ ಸನ್ನಿವೇಶದಲ್ಲಿ ಭಾವೋದ್ವೇಗಕ್ಕೊಳಗಾಗಿ ಏನೇನು ವಾಗ್ದಾನ ಮಾಡುತ್ತೇನೋ ಎಂದು.

ಇನ್ನೂರು ಮೈಲಿ ದೂರದ ಪ್ರಯಾಣ ಮುಗಿದಾಗ ಮರುದಿನ ಬೆಳಗಾಗಿತ್ತು.

ದೂರದಿಂದಲೇ ಮನೆಯನ್ನು ಗುರ್ತಿಸಿದ. ಪುಟ್ಟ ಹೆಂಚಿನ ಮನೆ ಅದು. ಅಲ್ಲಲ್ಲಿ ಹಂಚು ಬಿದ್ದುಹೋಗಿತ್ತು. ಗೋಡೆಯ ಸುಣ್ಣ ಹಕ್ಕಿ ಹೋಗಿ ಅಸಹ್ಯವಾಗಿ

ಕಾಣುತ್ತಿತ್ತು. ಪಕ್ಕದಲ್ಲಿದ್ದ ಬೇವಿನ ಮರ ಮತ್ತಷ್ಟು ದೊಡ್ಡದಾಗಿದೆಯೆನಿಸುತ್ತಿತ್ತು. ನಿಧಾನವಾಗಿ ಪರಿಶೀಲಿಸಿ ನೋಡಿದರೆ ಆ ಮನೆ ಅವಸಾನ ದೆಸೆಯನ್ನು ಸಮೀಪಿಸುತ್ತಿದೆಯೆಂದು ಭಾಸವಾಗುತ್ತಿತ್ತು.

ಮನೆಯ ಮುಂದಿನ ಮೆಟ್ಟಿಲಿನ ಮೇಲೆ ಕಾಲಿಟ್ಟ. ಎಡಗೈಯಲ್ಲಿ ಹ್ಯಾಂಡ್‌ಬ್ಯಾಗ್ ಇತ್ತು – ರಾತ್ರಿಯೆಲ್ಲಾ ಫಸ್ಟ್‌ಕ್ಲಾಸ್ ಕಂಪಾರ್ಟ್‌ಮೆಂಟಿನಲ್ಲಿ ಹಾಯಾಗಿ ನಿದ್ದೆ ಮಾಡಿದ್ದರೂ ಏನೋ ಒಂದು ವಿಧವಾದ ಬಳಲಿಕೆ ಎನಿಸುತ್ತಿತ್ತು.

'ರಾಬರ್ಟ್!' ಅಗುಳಿಯನ್ನು ಬಾಗಿಲ ಮೇಲೆ ಬಡಿಯುತ್ತಾ ಕೂಗಿದ. ಆ ಕಾರಣವಾಗಿಯೇ ಅವನ ಕಂಠ ನಡುಗಿತು.

ಬಾಗಿಲು ತೆಗೆದಿದ್ದು ಶಶಿಕಲಾ.

ಶಶಿಕಲಾ ಅವನ ಕಡೆ ನೋಡಿದಳು. ಒಂದು ಕ್ಷಣ ಅವಳ ಕಣ್ಣು ಪರಿಚಯಕ್ಕಾಗಿ ಹುಡುಕಾಡಿತು.

ಹತ್ತು ವರ್ಷದ ಹಿಂದೆ – ಅಂದರೆ ಶಶಿಕಲೆಗೆ ಹತ್ತು ವರ್ಷವಾಗಿದ್ದಾಗ ನೋಡಿದ್ದು. ಬಹುಶಃ ಗುರ್ತು ಹಿಡಿಯಲಿಲ್ಲವೇನೋ ಎಂದುಕೊಂಡ.

ಶಶಿಕಲಾ ತನ್ನ ತಂದೆಯನ್ನು ಹೋಲುತ್ತಾಳೆ.

'ರಾಬರ್ಟ್ ಇಲ್ಲವೇ?'

ಮರುಕ್ಷಣವೇ 'ತಮ್ಮ ಇಲ್ಲವೇ' ಎನ್ನಬೇಕಾಗಿತ್ತು, ಗುರ್ತು ಹಿಡಿಯುವುದು ಸುಲಭವಾಗುತ್ತಿತ್ತೇನೋ ಎನ್ನಿಸಿತು.

ಶಶಿಕಲಾ ಮರುಕ್ಷಣದಲ್ಲಿಯೇ ಅರ್ಥ ಮಾಡಿಕೊಂಡಳು. ತಟ್ಟನೆ ಹಿಂತಿರುಗಿ 'ಒಳಕ್ಕೆ ಬಾ ಅಣ್ಣಾ' ಎಂದಳು. ಮರುಕ್ಷಣ ಏನೆನ್ನಿಸಿತೋ ಏನೋ 'ಒಳಕ್ಕೆ ಬನ್ನಿ' ಎಂದಂದು ಬೇಗ ಬೇಗ ಒಳಕ್ಕೆ ಹೊರಟು ಹೋದಳು.

ಒಂದು ಕೈ ಮುರಿದ ಕುರ್ಚಿಯನ್ನು ತಂದು ವರಾಂಡದಲ್ಲಿ ಹಾಕಿದಳು. ತಂಬಿಗೆಯಲ್ಲಿ ನೀರು ತಂದು 'ಕಾಲು ತೊಳೆದುಕೊಳ್ಳಿ' ಎಂದಳು.

'ರಾಬರ್ಟ್ ಇಲ್ಲವೇ?' ಸವೆದು ಹೋದ ಗ್ರಾಮಫೋನ್ ಪ್ಲೇಟಿನಂತೆ ವಿಕೃತವಾಗಿತ್ತು ತನ್ನ ಪ್ರಶ್ನೆ.

'ಬರ್ತಾನೆ..... ಈಗಲೇ ಬರ್ತಾನೆ..... ಎಲ್ಲೋ ಹೊರಗೆ ಹೋಗಿದ್ದಾನೆ.....' ಅವಳ ವಾಕ್ಯ ಪೂರ್ತಿಯಾಗುವ ಮೊದಲೇ ರಾಬರ್ಟ್ ಒಳಕ್ಕೆ ಬಂದ. ಬಂದವನೇ ಸಂತೋಷದಿಂದ 'ನಮಸ್ಕಾರ ಅಣ್ಣಾ' ಎಂದ.

ರಾಜಶೇಖರ ಎದ್ದು ನಿಂತು ತಡವರಿಸುತ್ತಾ 'ನಮಸ್ತೇ' ಎಂದ.

'ಈಗಲೇನಾ ಬಂದಿದ್ದು?'

'ಹುಂ'

ಅನಂತರ ನಿಶ್ಯಬ್ದ ಆ ವಾತಾವರಣವನ್ನು ಆವರಿಸಿತು. ಆ ನಿಶ್ಶಬ್ದ ಅತಿ ಭಯಂಕರವಾಗಿದೆಯೆನಿಸಿತು – ರಾಜಶೇಖರನಿಗೆ. ಕೆಲವು ಕ್ಷಣಗಳಲ್ಲಿಯೇ ಬ್ರಹ್ಮಾಂಡ ಸಿಡಿಯುವುದೇನೋ ಎನಿಸತೊಡಗಿತ್ತು.

ರಾಬರ್ಟ್ ತಲೆ ತಗ್ಗಿಸಿ ನಿಂತಿದ್ದ.

ರಾಜಶೇಖರ ತಲೆಯೆತ್ತಿ ಅವನ ಕಡೆ ನೋಡಿದ.

ರಾಬರ್ಟ್‌ನ ಕಣ್ಣಿನಿಂದ ನೀರು ಧಾರಾ ಪ್ರವಾಹವಾಗಿ ಹರಿಯತೊಡಗಿತ್ತು. ಕಪ್ಪನೆಯ ಅವನ ಮುಖ ಮತ್ತಷ್ಟು ಕಪ್ಪಿಟ್ಟಿತ್ತು – ಸರ್ವಸ್ವವನ್ನೂ ಹೋಗಲಾಡಿಸಿ ಕೊಂಡವನಂತೆ ಕುಗ್ಗಿ ಹೋಗಿದ್ದ ಅವನು.

ರಾಜಶೇಖರನ ಹೃದಯ ಕರುಣೆಯಿಂದ ತುಂಬಿಬಂತು.

'ಅಪ್ಪ.....' ಅವನ ಕಂಠ ಗದ್ಗದವಾಗಿತ್ತು. 'ಎಲ್ಲಾ ಹಠಾತ್ತಾಗಿ ನಡೆದು ಹೋಯಿತು. ಹಾರ್ಟ್ ಎಟಾಕ್. ಅದು ಬಂದ ಮೇಲೆ ಎರಡೇ ಗಂಟೆ ಜೀವ ಇದ್ದಿದ್ದು..... ಕೊನೆಯ ಗಳಿಗೆಯಲ್ಲಿ ಒಂದೆರಡು ಸಲ ನಿಮ್ಮನ್ನು ನೆನಸಿಕೊಂಡರು..... ತಮ್ಮನ್ನು ಕ್ಷಮಿಸುವಂತೆ ಕೇಳಲು ಹೇಳಿದರು.'

ರಾಜಶೇಖರನ ಕಣ್ಣುಗಳೂ ತೇವಗೊಳ್ಳಲಾರಂಭಿಸಿದ್ದುವು. ಅವ್ಯಕ್ತವಾದ ವ್ಯಥೆ ಅವನ ಹೃದಯವನ್ನು ಕಲಕತೊಡಗಿತ್ತು.

ತನ್ನ ತಂದೆ ತೀರಿ ಹೋದರು ಎಂಬ ನಗ್ನ ಸತ್ಯವನ್ನು ಆಗ ತಾನೇ ತಿಳಿದುಕೊಂಡಂತೆ ಆತ ವಿಲವಿಲನೆ ಒದ್ದಾಡಿದ.

ಕುರ್ಚಿಯಲ್ಲಿ ಕುಸಿದು ಕುಳಿತು ಎರಡೂ ಕೈಗಳಿಂದ ಮುಖ ಮುಚ್ಚಿಕೊಂಡ.

ಒಳಗಿನಿಂದ ಸಣ್ಣಗಿನ ಅಳುವಿನ ಧ್ವನಿ ಕೇಳಿಸುತ್ತಿತ್ತು.

ಬಾಗಿಲ ಪಕ್ಕದಲ್ಲಿ ನಿಂತಿದ್ದ ಶಶಿಕಲಾ ಸಹ ಅಳುತ್ತಿರುವಂತಿತ್ತು.

ಅಡಗಿಸಲು ಪ್ರಯತ್ನಿಸಿದಷ್ಟೂ ರಾಜಶೇಖರನ ದುಃಖ ವಿಜೃಂಭಿಸಿ ಅವನ ಮೇಲೆ ವಿಜಯ ಸಾಧಿಸಿತು.

'ಛೇ, ನಮ್ಮ ಕೈಲೇನಿದೆ? ಎಲ್ಲಾ ಆ ಭಗವಂತನ ಇಚ್ಛೆ. ಅವನ ಬಳಿಗೆ ಹೋದವರೆಲ್ಲಾ ಅದೃಷ್ಟವಂತರೇ. ಹೋದವರ ಅಗಲಿಕೆ ಸಹಿಸುತ್ತಾ ಬದುಕಿರ ಬೇಕಾದವರದೇ ದುರದೃಷ್ಟ.' ರಾಬರ್ಟ್‌ನ ತುಟಿ ದುಃಖಾವೇಗದಿಂದ ಕಂಪಿಸಿತು.

ಮತ್ತೆ ನಿಶ್ಯಬ್ದ ಆ ಪ್ರದೇಶವನ್ನು ಆವರಿಸಿತು.

ಒಂದು ಕ್ಷಣವಲ್ಲ – ಹತ್ತು ನಿಮಿಷ.

ಎಲ್ಲೋ..... ಯಾವುದೋ ಶಬ್ದ..... ಆ ಮನೆಯೇ ನೀರವವಾಗಿ ರೋದಿಸುತ್ತಿದ್ದಂತಿತ್ತು.

ದುಃಖದಿಂದ ಸ್ವಲ್ಪ ಚೇತರಿಸಿಕೊಂಡ ನಂತರ ರಾಬರ್ಟ್ 'ಅಮ್ಮಾ ಶಶಿ..... ಅಣ್ಣನಿಗೆ ಕಾಫಿ ಕೊಡು' ಎಂದ.

ರಾಜಶೇಖರ ತಟ್ಟನೆ 'ಬೇಡ..... ಕುಡಿದೇ ಬಂದೆ' ಎಂದ. ಕಾರಣ ವಿಲ್ಲದೆಯೇ ಸುಳ್ಳು ಅವನ ಬಾಯಿಂದ ಹೊರಬಿದ್ದಿತ್ತು.

'ಪರವಾಗಿಲ್ಲ..... ಆಂ..... ಮುಂಚೆ..... ಮುಖ ತೊಳೆದಾಯಿತೇನು? .....ಶಶಿ ..... ಎಲ್ಲವನ್ನೂ ನೋಡು.....'

ರಾಜಶೇಖರ ಸ್ನಾನ ಮಾಡಿದಾಗ ಗಂಟೆ ಒಂಭತ್ತಾಗಿತ್ತು. ಸ್ನಾನಕ್ಕೆ ಮುಂಚೆಯೇ 'ನೀನೇನೂ ತೊಂದರೆ ತೆಗೆದುಕೊಳ್ಳಬೇಡ ರಾಬರ್ಟ್. ಹೋಟೆಲಿಗೆ ಹೋಗೋಣಾಂತಿದೀನಿ ನಾನು' ಎಂದ.

ರಾಬರ್ಟ್‌ಗೆ ಇದು ಬಲವಾದ ಪೆಟ್ಟೆಂದು ಅವನ ಮುಖ ನೋಡಿದರೇನೇ ತಿಳಿಯುವಂತಿತ್ತು. ರಾಬರ್ಟ್ ವ್ಯಥೆಯಿಂದ ನೊಂದ ದನಿಯಲ್ಲಿ 'ಅಣ್ಣಾ' ಎಂದ. ಅವನ ಕಣ್ಣು ಹನಿಗೂಡಿತ್ತು.

'ಈ ದಿನ ಅಪ್ಪ ಇದ್ದರೂ ಇಲ್ಲದಿದ್ದರೂ ಈ ಮನೆಯಲ್ಲಿ ನನಗೆಷ್ಟು ಅಧಿಕಾರವಿದೆಯೋ ನಿನಗೂ ಅಷ್ಟೇ ಅಧಿಕಾರವಿದೆಯಣ್ಣಾ. ಈ ಮನೆಗೆ ಹಿರಿಯ ನೀನು. ನೀನೇ ಹೀಗೆಂದರೆ.....' ದುಃಖ ಉಕ್ಕಿ ಬಂದಿತ್ತು ಅವನಿಗೆ. ಅವನ ಕಂಠ ಬಿಗಿದು ಮುಂದಕ್ಕೆ ಮಾತು ಹೊರಡಲಿಲ್ಲ.

ರಾಜಶೇಖರ ತನ್ನದು ತಪ್ಪಾಯಿತೆಂದುಕೊಂಡ. ಅವನನ್ನು ನೋಯಿಸಿದ್ದಕ್ಕಾಗಿ ಪಶ್ಚಾತ್ತಾಪವುಂಟಾಯಿತು.

'ಇಲ್ಲ..... ಇಲ್ಲ..... ಇಲ್ಲೇ ಇರ್ತೀನಿ ರಾಬರ್ಟ್..... ಇಲ್ಲೇ ಇರ್ತೀನಿ' ಎಂದು ಗೊಣಗಿದ ಕಣ್ಣೊರೆಸಿಕೊಳ್ಳುತ್ತಾ.

ರಾಜೇಶ್ವರಿಯ ನೆನಪಾಯಿತು. ಆಕೆ ನಗುತ್ತಿದ್ದಂತೆನಿಸಿತು. 'ಅವರು ನಿಮ್ಮನ್ನು ಬಲೆಯಲ್ಲಿ ಹಾಕಿಕೊಳ್ಳೋದು ನಿಜ. .....ಅವರ ತಂದೆಗೆ ನೀವು ಮಗಾಂತಲ್ಲ..... ನಿಮ್ಮ ಶ್ರೀಮಂತಿಕೆ ನೋಡಿ ಅಷ್ಟೆ' ಎನ್ನುತ್ತಿದ್ದಂತೆ ಅನಿಸಿತು.

'ಇಲ್ಲ. ರಾಜೇಶ್ವರಿ..... ನಿಷ್ಕಪಟವಾಗಿ ಮಾತನಾಡುತ್ತಿರುವ ರಾಬರ್ಟ್‌ನನ್ನು ನಾನು ಶಂಕಿಸಲಾರೆ' ಹೃದಯದಲ್ಲಿಯೇ ಜವಾಬನ್ನೂ ಸ್ಥಿರಪಡಿಸಿಕೊಂಡ.

ಒಂಬತ್ತೂವರೆಗೆಲ್ಲಾ ಬಿಸಿಲು ರಾಕ್ಷಸ ಮನುಷ್ಯನ ಕಡೆ ನೋಡುವಂತೆ ಆ ಪ್ರದೇಶವನ್ನು ನೋಡುತ್ತಿತ್ತು.

ರಾಬರ್ಟ್, ರಾಜಶೇಖರ, ಶಶಿಕಲಾ ಗ್ರೇವ್‌ಯಾರ್ಡ್‌ಗೆ ಹೊರಟರು.

ಅಷ್ಟು ಎತ್ತರವಲ್ಲದ ಕಾಂಪೌಂಡಿನೊಳಗೆ ಸಂತೆಯಲ್ಲಿನ ಮನುಷ್ಯರಂತೆ ಸಮಾಧಿಗಳು ಒಂದರ ಪಕ್ಕದಲ್ಲೊಂದು ಕಿಕ್ಕಿರಿದಿದ್ದವು.

ಎಲ್ಲರೂ – ನೂತನವಾಗಿ ನಿರ್ಮಿಸಿದ, ಮತ್ತೊಂದು ಪ್ರಪಂಚದಲ್ಲಿ ಚಿರವಿಶ್ರಾಂತಿ ಪಡೆಯುತ್ತಿದ್ದ – ಆತನ ಸಮಾಧಿಯ ಬಳಿ ನಿಂತರು.

ರಾಬರ್ಟ್ ಮೊಣಕಾಲೂರಿ ಕುಳಿತು ಮುಂದಕ್ಕೆ ಬಾಗಿ ಏನೋ ಪ್ರಾರ್ಥಿಸತೊಡಗಿದ. ಶಶಿಕಲಾ ಒಂದು ಹೂವನ್ನು – ನಂದಿವರ್ಧನವಿರಬೇಕು – ರಾಬರ್ಟ್ ಕೈಗೆ ಕೊಟ್ಟಳು.

ಶಾಶ್ವತ ನಿದ್ರೆಯಲ್ಲಿ ಮುಳುಗಿದ್ದ ತನ್ನ ತಂದೆಯನ್ನು ಬಚ್ಚಿಟ್ಟುಕೊಂಡ ಆ ಸಮಾಧಿಯ ಮೇಲೆ 'ಪ್ರಭುವಿನಲ್ಲಿ ಐಕ್ಯವಾದನು' ಎಂದು ಕಡೆದಿದ್ದ ಅಕ್ಷರಗಳನ್ನು ನೋಡುತ್ತಾ ಕೆಲವು ಕ್ಷಣಗಳನ್ನು ಕಳೆದ ರಾಜಶೇಖರ.

ಶಶಿಕಲಾ ರಾಜಶೇಖರನ ಕೈಗೊಂದು ಹೂವನ್ನು ಕೊಟ್ಟಳು. ರಾಜಶೇಖರ ಮೊಣಕಾಲೂರಿ ಕುಳಿತು ಆ ಹೂವನ್ನು ಸಮಾಧಿಯ ಮೇಲಿಡುತ್ತಾ 'ನನಗೆ ಈ ಜನ್ಮವನ್ನು ಪ್ರಸಾದಿಸಿದ ನಿಮಗೆ ನನ್ನ ಹೃದಯದಲ್ಲಿ ಸರಿಯಾದ ಸ್ಥಾನವನ್ನು ಕೊಡಲಿಲ್ಲವೇನೊ ಎನಿಸುತ್ತದೆ. ಏನಾದರಾಗಲಿ..... ಅದೆಲ್ಲಾ ಈಗೇಕೆ? ನನ್ನನ್ನು ಮಾತ್ರ ಹೃದಯಪೂರ್ವಕವಾಗಿ ಕ್ಷಮಿಸುತ್ತೀರೆಂದೇ ಆಶಿಸುತ್ತೇನೆ' ಎಂದ.

ಮೂವರೂ ಮನೆಗೆ ಬರುವ ವೇಳೆಗೆ ಗಂಟೆ ಹನ್ನೊಂದಾಗಿತ್ತು. ಬಿಸಿಲು ಎಲ್ಲರನ್ನೂ ಜಯಿಸಿ ಪ್ರಪಂಚದ ಮೇಲೆ ಸರ್ವಾಧಿಪತ್ಯವನ್ನು ವಹಿಸಿದಂತೆ ವಿಜೃಂಭಿಸುತ್ತಿತ್ತು.

ಮಧ್ಯಾಹ್ನ ಮೂರು ಗಂಟೆಯ ಸಮಯದಲ್ಲಿ – ಮತ್ತೆ ಆ ಮನೆಯನ್ನು ನಿಶ್ಶಬ್ದ ಆಳುತ್ತಿರುವ ಸಮಯದಲ್ಲಿ – ರಾಬರ್ಟ್ ಮಾತನಾಡತೊಡಗಿದ.

ರಾಜಶೇಖರ ಒಳಗೊಳಗೇ ಭಯಪಡತೊಡಗಿದ.

ಎಷ್ಟೋ ವರ್ಷಗಳ ಹಿಂದೆ – ತನ್ನ ತಾಯಿ ತನಗೆ ಜನ್ಮಕೊಟ್ಟು ಮೃತಳಾದ ನಂತರ ಮತ್ತೆ ಎರಡು ವರ್ಷಗಳಲ್ಲೇ ತನ್ನ ತಂದೆ ತನ್ನನ್ನೂ ತನ್ನ ಆಸ್ತಿಯನ್ನೂ ತಾತನ ವಶಕ್ಕೊಪ್ಪಿಸಿ ಮನೆಬಿಟ್ಟು ಹೊರಟು ಹೋಗಿದ್ದರು. ಆನಂತರ ಐದು ವರ್ಷಗಳಿಗೆ ಅವರ ಸಮಾಚಾರ ತಿಳಿಯಿತು. ಆಗ್ಗೆ ಎರಡು ವರ್ಷಕ್ಕೆ ಹಿಂದೆಯೇ ಅವರು ಒಬ್ಬ ಕ್ರಿಶ್ಚಿಯನ್ ಯುವತಿಯನ್ನು ವಿವಾಹವಾದರೆಂದೂ ಅವರಿಗೊಬ್ಬ ಮಗ ಹುಟ್ಟಿದಾನೆಂದೂ –

ರಾಜೇಶ್ವರಿಯ ಭಯ ಅದೇ! ತಮ್ಮ ಆಸ್ತಿಯ ಮೇಲೆ ತಮಗೂ ಹಕ್ಕಿದೆಯೆಂದು ಅವರೆಲ್ಲಿ ಕೇಳುತ್ತಾರೋ ಎಂದು – ಅವರ ಮಾತಿಗೆ ತಾನೆಲ್ಲಿ

ತಲೆಬಾಗುತ್ತಾನೋ ಎಂದು. ಆದರೆ ರಾಜೇಶ್ವರಿ ಭಯಪಡಬೇಕಾದ ಅವಶ್ಯಕತೆ ಎಳ್ಳಷ್ಟೂ ಇರಲಿಲ್ಲ. ಆ ಆಸ್ತಿಯೆಲ್ಲ ತನ್ನ ಅಜ್ಜನ ಸ್ವಯಾರ್ಜಿತ. ತನ್ನ ಹೆಸರಿಗೆ ಬರೆದುಕೊಟ್ಟಾಗಿತ್ತು. ರಾಬರ್ಟ್‌ಗೆ ಅದರಲ್ಲಿ ಭಾಗ ಕೇಳುವ ಹಕ್ಕು ಸ್ವಲ್ಪವೂ ಇರಲಿಲ್ಲ. ಆದರೂ ರಾಜೇಶ್ವರಿ ಭಯಪಡದೆ ಇರಲಾರದಾಗಿದ್ದಳು.

ರಾಬರ್ಟ್ ಮಾತನ್ನು ಮುಂದುವರಿಸದಂತೆ ತಡೆದು ರಾಜಶೇಖರ ಕೇಳಿದ, 'ಮತ್ತೆ ಎಷ್ಟು ಗಂಟೆಗೆ ರೈಲಿದೆ ನನಗೆ?'

'ಅದೇನು? ಆಗಲೇ ಹೊರಡಬೇಕೆ? ಉಹುಂ..... ನಾಲ್ಕು ದಿನವಾದರೂ ಇಲ್ಲಿದ್ದೇ ಇರಬೇಕು' ಎಂದು ರಾಬರ್ಟ್ ಪ್ರೀತಿಯಿಂದ ಬಲವಂತಪಡಿಸಿದ.

ರಾಜಶೇಖರ ಭಾರವಾಗಿ ನಕ್ಕ. 'ಇಲ್ಲ ರಾಬರ್ಟ್, ನಾಳೆ ಹೆಡ್ಡಾಫೀಸಿನಿಂದ ಯಾರೋ ಬರುತ್ತಾರೆ. ಆಗ ನಾನಿಲ್ಲದೆ ಇದ್ದರೆ ಚೆನ್ನಾಗಿರೊಲ್ಲ. ಟೆಲಿಗ್ರಾಂ ನೋಡಿ ಹಿಂದೆ ಮುಂದೆ ನೋಡದೆ ಹೊರಟು ಬಂದೆ. ಅಲ್ಲಿ ಏನು ಅರೇಂಜ್‌ಮೆಂಟ್ಸ್ ಮಾಡಿದರೋ ಏನು ಕತೇನೋ..... ಎಲ್ಲಾ ನಾನೇ ನೋಡಿಕೊಳ್ಳಬೇಕು ಹೋಗಿ.....' ಎಂದ. ಮತ್ತೆ ನಿಟ್ಟುಸಿರು ಬಿಟ್ಟು 'ಎಷ್ಟು ಸಂಪಾದಿಸಿದರೇನು ಪ್ರಯೋಜನ? ಒಂದು ನಿಮಿಷ ವಿಶ್ರಾಂತಿಯಿರೊಲ್ಲ... ನಯಾಪೈಸಾ ಮಿಗೊಲ್ಲ.' ತನ್ನ ಕಂಠ ತನಗೇ ಕರ್ಕಶವಾಗಿ ಕೇಳಿಸಿತು. ಕುಂಬಳಕಾಯಿ ಕಳ್ಳ ಭುಜಮುಟ್ಟಿ ನೋಡಿಕೊಂಡಂತಾಯಿತು. ತಾನು ಹಾಗೇಕೆ ಅಂದೆನೋ ಎಂದು ಮನಸ್ಸಿನಲ್ಲೇ ನಿಂದಿಸಿಕೊಂಡ.

ಶಶಿಕಲಾ ಎರಡು ಕಪ್ಪುಗಳಲ್ಲಿ ಕಾಫಿ ತಂದು ಕೈ ಮುರಿದ ಕುರ್ಚಿಯನ್ನು ಎರಡು ಮಂಚಗಳ ಮಧ್ಯಕ್ಕೆಳೆದು ಅದರ ಮೇಲಿಟ್ಟಳು.

ಕಾಫಿ ಕುಡಿಯುತ್ತಾ ರಾಬರ್ಟ್ ತಲೆ ತಗ್ಗಿಸಿ ಹೇಳಿದ, 'ಅಪ್ಪ ಇದ್ದಿದ್ದರೆ ಈ ಕಷ್ಟಗಳೆಲ್ಲಾ ನನಗೆ ತಿಳಿಯುತ್ತಿರಲಿಲ್ಲ. ಅವರೇ ಹೇಗೋ ನೋಡಿ ಕೊಳ್ಳುತ್ತಿದ್ದರು..... ಶಶಿಕಲಾ ಬೆಳೆದು ನಿಂತಿದಾಳೆ..... ಕೆಲವು ತಿಂಗಳಲ್ಲೆ ಮದುವೆಯಾಗಬೇಕಾಗಿತ್ತು. ಆದರೆ ಅಷ್ಟರಲ್ಲಿ ಹಠಾತ್ತಾಗಿ ಈ ದುರ್ಘಟನೆ ಸಂಭವಿಸಿತು..... ಏನಾದರೂ ಸರಿ..... ಬರೋ ವರ್ಷ ಮದುವೆ ಮಾಡಿಬಿಡೋಣ ಎಂದಿದ್ದೇನೆ..... ಅದಕ್ಕೇ..... ನಿನ್ನೊಂದಿಗೆ ಮಾತನಾಡೋಣಾಂತ.....' ಉಗುಳು ನುಂಗುತ್ತಾ ಹೇಳಿದ ರಾಬರ್ಟ್.

ರಾಜಶೇಖರನ ಕಣ್ಣ ಮುಂದೆ ರಾಜೇಶ್ವರಿ ಪ್ರತ್ಯಕ್ಷಳಾದಳು. 'ಮುಖ್ಯವಾದ ಘಟ್ಟ ಈಗಲೀಗ ಪ್ರಾರಂಭವಾಗುತ್ತಿದೆ. ಹುಷಾರಾಗಿ ಮಾತನಾಡಿ' ಎಂದು ಎಚ್ಚರಿಸಿದಂತಾಯಿತು.

ರಾಜಶೇಖರ ಕೆಮ್ಮುತ್ತಿದ್ದಂತೆ ನಟಿಸಿದ.

ರಾಬರ್ಟ್ ಮತ್ತೆ ತಾನೇ ಮಾತನಾಡಲಾರಂಭಿಸಿದ, 'ಇನ್ನು ನಿಧಾನ ಮಾಡುವಂತಿಲ್ಲ..... ಈಗಾಗಲೇ ಶಶಿಗೆ ಇಪ್ಪತ್ತು ತುಂಬಿತು.'

'ಅಲ್ಲವೇ ಮತ್ತೆ? ನಿಧಾನ ಮಾಡಲಾದೀತೆ?' ಎಂದ, ಮಾತಿಗೆ ಸಿಕ್ಕದಂತೆ ಎಚ್ಚರ ತೆಗೆದುಕೊಳ್ಳುತ್ತಾ ರಾಜಶೇಖರ.

ರಾಬರ್ಟ್ ತಲೆ ತಗ್ಗಿಸಿದ.

'ಅದಕ್ಕೇ ಮತ್ತೆ.....' ಅವನ ಕಂಠದಿಂದ ಮಾತು ಬಹಳ ಕಷ್ಟದಿಂದ ಹೊರಬರುತ್ತಿದ್ದಂತಿತ್ತು. 'ನಿಮ್ಮ ಸಹಾಯ ಬೇಕಾಗಿದೆ ಅಣ್ಣಾ..... ಹೀಗೆ ಕೇಳಲು ನನಗೆ ನಾಚಿಕೆಯಾಗುತ್ತಿದೆ' ಎಂದ.

ಮೊದಲ ಬಾರಿಗೆ ರಾಜಶೇಖರನಿಗೆ ರಾಜೇಶ್ವರಿಯ ಭಯ ನಿಜವೆನಿಸಿತು. ಮುಜುಗರ ಪಟ್ಟುಕೊಳ್ಳುತ್ತಿದ್ದಂತೆ ಕುರ್ಚಿಯಲ್ಲಿ ಮಿಸುಕಾಡಿದ.

ರಾಬರ್ಟ್‌ನ ಕಂಠ ಬಿಗಿದು ನಿಂತಿತು – ತನ್ನ ಮೇಲಿನ, ತನ್ನ ಪರಿಸ್ಥಿತಿಯ ಮೇಲಿನ ಅಸಹ್ಯದಿಂದ –

'ಅಣ್ಣಾ, ಈ ದಿನ ನಾನು ಇಂತಹ ಪರಿಸ್ಥಿತಿಯಲ್ಲಿ ಸಿಲುಕುತ್ತೇನೆಂದು ಎಂದೂ ಆಲೋಚಿಸಿರಲಿಲ್ಲ. ಅಪ್ಪ ಈ ಬಾಳಿನಲ್ಲಿ ನನ್ನ ಕಷ್ಟ ಸುಖಗಳಿಗೆ ಆಸರೆಯಾಗಿರುತ್ತಾರೆಂದೇ ನಂಬಿದ್ದೆ..... ಆದರೆ ಪ್ರಭು ನನಗೆ ಕರುಣಿಸಲಿಲ್ಲ' ಅವನ ಕಣ್ಣಿನಿಂದ ನೀರು ಚಿಮ್ಮಿತು.

ಆ ಪರಿಸ್ಥಿತಿಯಲ್ಲಿ ಮತ್ತೂ ಮೌನವಾಗಿರುವುದು ರಾಜಶೇಖರನಿಗೆ ಸಹ್ಯವಾಗಲಿಲ್ಲ. 'ನೀನೇನೂ ಹೆದರಬೇಡ ರಾಬರ್ಟ್ ಎಲ್ಲಕ್ಕೂ ದೇವರಿದ್ದಾನೆ. ಹೇಗಾಗಬೇಕೆಂದಿದ್ದರೆ ಹಾಗಾಗುತ್ತದೆ. ಸುಮ್ಮನೆ ಅದಕ್ಕಾಗಿ ಮನಸ್ಸು ಹಾಳು ಮಾಡಿಕೊಳ್ಳಬೇಡ' ಎಂದ ಸಮಾಧಾನ ಪಡಿಸುವ ಧೋರಣೆಯಲ್ಲಿ.

'ನಿಜ, ಆದರೆ ನಮ್ಮ ಪ್ರಯತ್ನ ನಾವು ಮಾಡಬೇಕಲ್ಲ.'

'ಹೌದು..... ಹೌದು.....' ಎಂದ ರಾಜಶೇಖರ ವಿಧಿಯಿಲ್ಲದೆ. ಆದರೆ ಮನಸ್ಸಿನಲ್ಲಿ ಕಳವಳ ಪ್ರಾರಂಭವಾಗಿತ್ತು.

'ನಿಜ, ರಾಜೇಶ್ವರಿಯ ಮಾತೇ ನಿಜ' ಎಂದೆನ್ನಿಸಿತು.

ರಾಬರ್ಟ್ ಇನ್ನು ನಿಧಾನ ಮಾಡಬಾರದೆಂಬಂತೆ ತಲೆಯೆತ್ತಿ ರಾಜಶೇಖರನ ಮುಖ ನೋಡುತ್ತಾ, 'ಎಷ್ಟು ಕಡಿಮೆಯೆಂದುಕೊಂಡರೂ ಶಶಿಯ ಮದುವೆಗೆ ಎರಡು ಸಾವಿರವಾದರೂ ಬೇಕಾಗುತ್ತೆ..... ಆದ್ದರಿಂದ.....' ಮುಂದಕ್ಕೆ ಮಾತು ಹೊರಡಲಿಲ್ಲ.

ರಾಜಶೇಖರ ಎವೆಮುಚ್ಚದೆ, ಉಸಿರು ಬಿಗಿಹಿಡಿದು ರಾಬರ್ಟ್‌ನ ಮುಖ ನೋಡುತ್ತಿದ್ದ.

'.....ಮತ್ತೆ .....ಅದಕ್ಕೇ ಈ ಮನೆ ಮಾರೋಣವೆಂದುಕೊಳ್ಳುತ್ತಿದ್ದೇನೆ. ಇದು ಅಪ್ಪನ ಸ್ವಂತ ಆಸ್ತಿ..... ಬಹುಶಃ ಆರು ಸಾವಿರ ಇರಬಹುದು. ಇಬ್ಬರೂ ಮೂರು ಸಾವಿರದಂತೆ ತೆಗೆದುಕೊಳ್ಳೋಣ. ನನ್ನದರಲ್ಲಿ ಎರಡು ಸಾವಿರ ಮದುವೆಗೆ ಖರ್ಚು ಮಾಡಿ ಮಿಕ್ಕಿದ್ದರಲ್ಲಿ ನಮ್ಮ ಸ್ಕೂಲಿಗೆ ಹತ್ತಿರವಾಗಿ ಒಂದು ಗುಡಿಸಲು ಹಾಕಿಕೊಳ್ಳೋಣವೆಂದಿದ್ದೇನೆ.'

ರಾಜಶೇಖರ ಬೆಚ್ಚಿಬಿದ್ದ. ಹಿಂದಿನಿಂದ ಯಾರೋ ಸುತ್ತಿಗೆಯಿಂದ ತಲೆಯ ಮೇಲೆ ಹೊಡೆದಂತಾಯಿತು – ರಾಬರ್ಟ್ ಹೇಳುತ್ತಿರುವುದೇನು?

ತಂದೆಯ ಸ್ವಯಾರ್ಜಿತವಾದ ಈ ಹಂಚಿನ ಮನೆಯಲ್ಲಿ ಆತನ ಹಿರಿಯ ಮಗನಾದ ನನಗೆ ಅರ್ಧಭಾಗ ಕೊಡುತ್ತೇನೆ ಎನ್ನುತ್ತಿದ್ದಾನೆ.

ರಾಜಶೇಖರನಿಗೆ ಉಸಿರು ಕಟ್ಟಿದಂತೆ, ಬವಳಿ ಬಂದಂತೆ ಅನಿಸ ತೊಡಗಿತು.

ಒಂದು ಸಲ ತನ್ನ ಸಂಕುಚಿತ ಹೃದಯ, ರಾಜೇಶ್ವರಿಯ ಮನಸ್ಸು ಊಹೆ – ಎಲ್ಲವನ್ನೂ ನೆನಪಿಸಿಕೊಂಡು ನಾಚಿಕೆಯಿಂದ ತಲೆ ತಗ್ಗಿಸಿದ.

ಆ ಕ್ಷಣದಲ್ಲಿಯೇ ಅವ್ಯಕ್ತ ಹಸ್ತವೊಂದು ಅವನ ಮುಂದಿದ್ದ ಮಂಜಿನ ತೆರೆಯನ್ನು ಸರಿಸಿ, ಅವನ ಹೃದಯದ ಕಣ್ಣನ್ನು ತೆರೆಸಿದಂತಾಯಿತು. ಕ್ಷೋಭೆಯಿಂದ ಅವನ ಮನಸ್ಸು ವಿದೀರ್ಣವಾಗತೊಡಗಿತು.

ಛಿ! ಛಿ! ತಾನವರನ್ನು ಎಷ್ಟು ತುಚ್ಛವಾಗಿ ಎಣಿಸಿಕೊಂಡಿದ್ದ!

ಒಂದು ಕ್ಷಣದ ಹಿಂದೆ ತಾನವರನ್ನು ಕುರಿತು ಕಲ್ಪಿಸಿಕೊಂಡ ಊಹೆ ಅವನ ಕಣ್ಣ ಮುಂದೆ ನಿಂತು ಮುಖ ಬಿಳಿಚಿಕೊಂಡಿತು. ಎಲ್ಲಿಗಾದರೂ ಯಾರಿಗೂ ಕಾಣದ ಪ್ರದೇಶಕ್ಕೆ ಓಡಿಹೋಗಿ ಬಚ್ಚಿಟ್ಟುಕೊಳ್ಳಬೇಕೆನಿಸಿತು. ಎಷ್ಟು ಬೇಗ ಸಾಧ್ಯವಾದರೆ ಅಷ್ಟು ಬೇಗ ಆ ಪ್ರದೇಶವನ್ನು – ತನ್ನ ಶರೀರವನ್ನು ಛಿದ್ರಗೊಳಿಸುತ್ತಿದ್ದ ಆ ಪ್ರದೇಶವನ್ನು ಬಿಟ್ಟು ಓಡಿ ಹೋಗಬೇಕೆನಿಸುತ್ತಿತ್ತು.

'ರಾಜೇಶ್ವರಿ..... ಈ ದಿನ ಮೊದಲ ಬಾರಿಗೆ ಬದುಕಿನಲ್ಲಿ ಮಮತೆ ಯೆಂದರೇನು? ಪ್ರೀತಿಯೆಂದರೇನು? ಎಂಬುದನ್ನು ತಿಳಿದುಕೊಂಡೆ ರಾಜೇಶ್ವರಿ' ಅವನ ಹೃದಯ ಆಕ್ರೋಶಿಸುತ್ತಿತ್ತು. ಗಟ್ಟಿಯಾಗಿ ಅಳಬೇಕೆನಿಸಿತು ಅವನಿಗೆ.

'ಏನಣ್ಣಾ, ಮಾತನಾಡುವುದಿಲ್ಲವೇಕೆ? ಈ ಮನೆ ಮಾರಲು ಒಪ್ಪಿಗೆಯೇ ನಿನಗೆ? ಏನಂತಿ? ಪರಿಸ್ಥಿತಿ ಹಾಗಿದೆ. ಅದಕ್ಕಿಂತ ಬೇರೇನೂ ಮಾಡುವ ಸ್ಥಿತಿಯಲ್ಲಿಲ್ಲ ನಾನು.'

ರಾಬರ್ಟ್‌ನ ಮಾತುಗಳು ಮುಳ್ಳಿನ ಚಾಟಿಯ ಏಟಿನಂತೆ ತಗುಲಲು ರಾಜಶೇಖರ ಬಾಯಿಬಿಟ್ಟ.

'ಬೇಡ ತಮ್ಮಾ! ತಂಗಿಯ ಮದುವೆಗೆ ಮನೆ ಏಕೆ ಮಾರಬೇಕು? ಬೇಡ..... ತಂಗಿಯ ಮದುವೆಯ ವಿಷಯದಲ್ಲಿ ನಿನಗೆಷ್ಟು ಬಾಧ್ಯತೆಯಿದೆಯೋ ನಿಮ್ಮ ಹಿರಿಯಣ್ಣನಾಗಿ ನನಗೂ ಅದಕ್ಕಿಂತ ಹೆಚ್ಚಿನ ಬಾಧ್ಯತೆಯಿದೆ. ಅಪ್ಪನ ನಂತರ ನಾನು ನೋಡಿಕೊಳ್ಳಬೇಕಾದ ವಿಷಯ ಅದು. ನೀನೇನೂ ಯೋಚಿಸಬೇಡ. ಶಶಿಯ ಮದುವೆ ವಿಜೃಂಭಣೆಯಿಂದ ನೆರವೇರಿಸುವ ಬಾಧ್ಯತೆ ನನ್ನದು.'

ಬದುಕಿನಲ್ಲಿ – ನಲವತ್ತು ವರ್ಷಗಳ ದೀರ್ಘ ಕಾಲದಲ್ಲಿ – ಮೊದಲನೆಯ ಸಲ ಮತ್ತೊಬ್ಬ ಮಾನವನೊಂದಿಗೆ – ಅದರಲ್ಲೂ ಇಷ್ಟು ದಿನವೂ ಅಲ್ಲವೆಂದು ಕೊಂಡಿದ್ದ ತಮ್ಮನೊಂದಿಗೆ ಬಿಚ್ಚು ಮನಸ್ಸಿನಿಂದ ಮಾತನಾಡಿದಂತೆನಿಸಿತು.

ಹಾಗೆ ಮಾತನಾಡುತ್ತಿರುವಾಗ – ಉಹುಂ – ಆಗಲೇ ಇಲ್ಲ – ಮತ್ತೆ ಮನೆಗೆ ಹಿಂತಿರುಗುವವರೆಗೂ ಸಹ ಅವನಿಗೆ ರಾಜೇಶ್ವರಿಯ ನೆನಪೇ ಬರಲಿಲ್ಲ.



# ಎಲ್ಲರ ಮನೆ ದೋಸೆಯೂ.....

ಮೂಲ : ಶ್ರೀಮತಿ ಸುಜಾತದೇವಿ

"ಉಹೂಂ..... ಇನ್ನು ನನ್ನಿಂದಾಗದು. ಸಹಿಸಿಕೊಳ್ಳಲಾರೆ ನಾನು. ಈ ಮನೆಯಲ್ಲಿ ಒಂದು ಕ್ಷಣ ಸಹ ಇರಬೇಕೆನಿಸುತ್ತಿಲ್ಲ..... ಆದರೆ..... ಆದರೆ..... ಹೋಗುವುದಾದರೂ ಎಲ್ಲಿಗೆ?" ಲಕ್ಷ್ಮಿಯ ಕಂಠದಲ್ಲಿ ಆವೇಶ, ಮುಖದಲ್ಲಿ ನಿರಾಶೆ, ದುಃಖ ಮನೆ ಮಾಡಿತ್ತು.

"ನಿನ್ನ ಕಷ್ಟ ನನಗರ್ಥವಾಗುತ್ತೆ. ಹಾಗೆಂದು ಸತ್ತು ಹೋಗುವ ಆಲೋಚನೆ ಇದೆ ನೋಡು, ಅದು ಬರೀ ಮೂರ್ಖತನ ಅಷ್ಟೆ. ಅದನ್ನು ನಾನೊಪ್ಪಲ್ಲ. ನೀನು ಬರೀ ಆತನಿಗೋಸ್ಕಾರಾನೇ ಬದುಕ್ತಾ ಇದೀಯೇನು?" ಖಡಾಖಂಡಿತವಾಗಿ ಹೇಳಿದಳು ಲಲಿತ.

"ನನಗೇನೂ ಸಾಯಬೇಕೆಂಬಾಸೆಯಿಲ್ಲ. ಬದುಕು ಬೇಡವಾಗಿಯೂ ಇಲ್ಲ. ಆದರೆ ಈ ಬದುಕು..... ನರಕವಾಗಿದೆ. ಆತನಿಗೋಸ್ಕರವೇ ಅಲ್ಲವಾದರೂ ಈ ಬದುಕು ಬೆಸೆದುಕೊಂಡಿರುವುದು ಆತನೊಂದಿಗೇ ಅಲ್ಲವೇ? ಜೀವಮಾನ ವಿಡೀ ಬಾಳ್ವೆ ನಡೆಸಬೇಕಾದ್ದು ಆತನೊಂದಿಗೇ ಅಲ್ಲವೇನು?"

"ಹೊಸದಾಗಿ ಏನಾಯಿತೀಗ?"

"ಹೊಸದೇನು, ಹಳೆಯದೇ ಪುರಾಣ. ನಾನು ಹೆಚ್ಚು ಓದು ಬರಹ ಬಲ್ಲವಳಲ್ಲ ಅಂತ ಮೊದಲಿಗೇ ಗೊತ್ತಿತ್ತಲ್ಲಾ. ಅದರೂ ಈಗ ಸದಾ ಅವರು ನೋಡು, ಲಕ್ಷಣವಾಗಿ ಕೈತುಂಬಾ ಸಂಪಾದಿಸ್ತಾರೆ. ಇವರು ನೋಡು ಎಷ್ಟು ಇಂಪಾಗಿ ಹಾಡ್ತಿದಾರೆ, ಇನ್ನೊಬ್ಬರನ್ನ ನೋಡು ಎಷ್ಟು ಸೋಷಿಯಲ್ ಆಗಿ

ಓಡಾಡ್ತಿದಾರೆ. ನನ್ನ ಕರ್ಮ, ನನ್ನ ಕರ್ಮ ನಿನ್ನ ಕಟ್ಟಿಕೊಂಡು ಏಗಬೇಕಾಗಿ ನಾನು ಅಂತ ಸದಾ ಚುಚ್ಚುಮಾತು. ಕೇಳಿ ಕೇಳೀ ಜೀವನವಿಡೀ ಬೇಸರವಾ ಬಿಟ್ಟಿದೆ."

"ಹಾಗಂದರೆ ಹೇಗಮ್ಮ? ಮಕ್ಕಳ ಗತಿ ಏನೂಂತ ಆಲೋಚಿಸಬೇಡವೇ?"

"ಹೂಂ..... ಅದೂ ನೋಡು, ಮಕ್ಕಳ ವಿಷಯದಲ್ಲೂ ಅವರೇನೂ ಆಸಕ್ತಿ ವಹಿಸೋಲ್ಲ. ಅವರ ಸ್ಕೂಲಿಗೆ ಹೋಗಿ ಮಾತನಾಡಬೇಕಾದರೂ ಫೀಜು ಕಟ್ಟಬೇಕಾದರೂ ಎಲ್ಲಾ ಹೊಣೇನೂ ನನ್ನದೇ. ಮನೆಗೆ ಸಾಮಾನು ತರೋದು, ಕರೆಂಟ್ ಬಿಲ್ ಕಟ್ಟೋದು ಎಲ್ಲಾ ನಾನೇ ಮಾಡ್ತೀನಿ. ಆದರೂ ನಾನು ಯಾತಕ್ಕೂ ಕೆಲಸಕ್ಕೆ ಬಾರದವಳೂಂತ ಹಂಗಿಸ್ತಾರೆ. ಬಲವಂತವಾ ಅವರ ಕುತ್ತಿಗೆಗೆ ಕಟ್ಟಿದರಂತೆ. ನನ್ನಿಂದ ಅವರಿಗಾಗಿರೋ ಲೋಪ ಇಷ್ಟು ಅಂತ ಹೇಳೋಕಿಲ್ಲವಂತೆ..... ಮನೇಲಿದ್ದಷ್ಟು ಹೊತ್ತೂ ಇದೇ ಗೊಣಗಾಟ ಒಂದು ಒಳ್ಳೆ ಮಾತಿಲ್ಲ..... ಕಥೆಯಿಲ್ಲ....." ಲಕ್ಷ್ಮಿಯ ಕಂಠ ಗದ್ಗದಿತವಾಯಿತು

"ಹೋಗಲಿ ಬಿಡೇ, ಇವತ್ತಲ್ಲ ನಾಳೆ ತಿಳ್ಕೋತಾರೆ."

"ಏನು ತಿಳ್ಕೋಳ್ಳೋದೋ..... ಮೊನ್ನೆ ಅವರ ಸ್ನೇಹಿತರೊಬ್ಬರು ಹೆಂಡತೀನೂ ಕರಕೊಂಡು ನಮ್ಮನೆಗೆ ಬಂದಿದ್ದರು. ಅವರು ಮೂರು ಜ ಕುಳಿತು ಮಾತನಾಡಿಕೋತಾ ಇದ್ದರು. ಅವರ ಮಕ್ಕಳಿಬ್ಬರೂ, ನಮ್ಮ ಮಕ್ಕಳೂ ಸೇರಿದರೆ ಇನ್ನು ಗಲಾಟೆ ವಿಷಯ ಕೇಳಬೇಕಾ, ಅವರನ್ನ ಸುಧಾರಿಸೋದರಲ್ಲಿ ಸಾಕಾಯ್ತು ನನಗೆ. ಜತೆಗೆ ಅವರಿಗಿಷ್ಟು ಕಾಫಿ ಫಲಹಾರ ಕೊಡಬೇಡವೇ ಅದೊಂದು ಕಷ್ಟದ ಮಾತೂಂತ ಅಲ್ಲ. ಆ ಗಲಾಟೆಯಲ್ಲಿ ಆಕೆ ಏನು ಕೇಳಿದರೋ ಏನೋ ನನಗೆ ಕೇಳಿಸಲಿಲ್ಲ. ನಾನು ಕಾಫಿ ತೆಗೆದುಕೊಂಡು ಹೋಗುವಷ್ಟರಲ್ಲಿ "ನಮ್ಮಾಕೆಗೆ ಇಂಥಾದ್ದೆಲ್ಲಾ ಬೇಕಾಗೊಲ್ಲ ಬಿಡಿ" ಅಂತಿದಾರೆ ಇವರು ಮುಖ ಸಪ್ಪಗೆ ಮಾಡಿಕೊಂಡು.

"ಸರಿ, ಅವರು ಹೊರಟು ಹೋದ ಮೇಲೆ, ಇವರು ಶುರು. 'ಸದಾ ಅಡಿಗೆ ಮನೇಲಿ ಬಿದ್ದು ಸಾಯಬೇಕಾ, ಮಹಾ ನೀನೇ ಮಾಡ್ತಿರೋ ಹಾಗೆ ಆಕೇನ ನೋಡು ಎಷ್ಟು ಚುರುಕಾಗಿದಾರೆ. ಎಷ್ಟು ಬಡಕೊಂಡರೂ ಏನ

ಪ್ರಯೋಜನ..... ಥೂ ಆನೆ ಚರ್ಮ ಎಲ್ಲೋ..... ಹಾಳಾದೋಳು ಸಿಕ್ಕಿದ್ಲು ನಂಗೆ' ಇದು ವರಸೆ, ಏನೂ ಮಾಡೂಂತಿ?"

"ಕೇಳಬೇಕಾಗಿತ್ತು. ನಿಮ್ಮ ಜತೆ ನಾನೂ ಕೂತುಕೊಂಡರೆ, ಮನೆಗೆ ಬಂದವರಿಗೆ ಮರ್ಯಾದೆ ಯಾರು ಮಾಡ್ತಾರೇಂತ?" ಎಂದಳು ಲಲಿತ.

"ಅಯ್ಯೋ ಸರಿ ಬಿಡು. ಅದೇನು ಹೇಳ್ತೀ, ಹಾಗೆ ಕೇಳಿದರೆ ಅದೊಂದು ದೊಡ್ಡ ರಾಮಾಯಣ. ಅವರದೇನೋ ರಸಹೃದಯವಂತೆ. ಆ ರಸಿಕತೆಗೆ ಸ್ಪಂದಿಸುವುದನ್ನೇ ಅರಿಯದ ಮೂಕಪಶುವಂತೆ ನಾನು..... ಹೀಗೇ ದಿನಾ ಇವರದ್ದು ಇದ್ದದ್ದೇ, ಸಾಕಾಗಿದೆ ನನಗೆ....."

ಒಂದಲ್ಲ, ಎರಡಲ್ಲ ತನ್ನ ಬಗ್ಗೆ ಗಂಡನ ಅಸಂತೃಪ್ತಿಯನ್ನು ವಿವರವಾಗಿ ಹೇಳಿಕೊಂಡು ಕಣ್ಣೀರಿಟ್ಟಳು ಲಕ್ಷ್ಮಿ.

ಆ ವಿಧವಾದ ಚುಚ್ಚುಮಾತುಗಳ ಅನುಭವ ತನಗೂ ಇದ್ದದ್ದೇ ಆದರೂ ಹೊರಗಿನವರೆದುರಿಗೂ ಕೀಳಾಗಿ ಮಾತನಾಡಿದರೆ ಕಷ್ಟ. ಪಾಪ ಎನಿಸಿತು. ಏನೋ ತನಗೆ ತೋಚಿದಂತೆ ನಾಲ್ಕು ಸಮಾಧಾನದ ಮಾತುಗಳನ್ನು ಹೇಳಿ, ಹಾಗಲ್ಲ ಹೀಗೆ ಮಾಡಿ ನೋಡು, ಹೇಗೂ ಸಾವರಿಸಿಕೋ ಅಂತ ಹೇಳಿ ಕಳುಹಿಸಿ, ಅಡಿಗೆ ಮನೆ ಸೇರಿ ಅಡಿಗೆಗಿಡಲು ಅಕ್ಕಿ ತೊಳೆದು ಸ್ಟವ್ ಮೇಲಿಟ್ಟು, ತರಕಾರಿ ಹೆಚ್ಚಲು ಕುಳಿತಳು. ಅಷ್ಟರಲ್ಲಿ ಬಾಗಿಲು ತಟ್ಟಿದ ಶಬ್ದ ಕೇಳಿ ಎದ್ದು ಹೋಗಿ ಬಾಗಿಲು ತೆಗೆದಳು.

ಲಲಿತಳ ಕೊಲೀಗ್ ಶಂಕರ್‌ರಾವ್ ಬಂದಿದ್ದರು.

ಆತನ ತಂಗಿಯ ಮದುವೆಯಂತೆ. ಲಲಿತ ವಿವರಗಳನ್ನು ಕೇಳದಿದ್ದರೂ ತಾವೇ ವರದಕ್ಷಿಣೆಯ ವಿಷಯ ಅದೂ ಇದೂ ಮಾತನಾಡುತ್ತಾ ಕುಳಿತರು. ಅಷ್ಟರಲ್ಲಿ ಮಧು ಮನೆಗೆ ಬಂದ.

ಅವರಿಬ್ಬರೂ ಮಾತನಾಡುತ್ತಿದ್ದಂತೆ ಲಲಿತ ಟೀ ಮಾಡಿ ತಂದಳು.

ಮದುವೆಗೆ ತಪ್ಪದೆ ಬರಬೇಕೆಂದು ಹೇಳಿ ಶಂಕರ್‌ರಾವ್ ಹೊರಟು ಹೋದರು.

"ಅಡಿಗೆ ಆಯಿತೇನು?" ಮಧು ಕೇಳಿದ.

"ಪಲ್ಯ ಮಾಡಬೇಕಿನ್ನೂ"

"ಓಹೋ, ಹರಟೆ ಹೊಡೀತಾ ಕುಳಿತರೆ ಟೈಂ ಎಲ್ಲಿ ಗೊತ್ತಾಗುತ್ತೆ! ಆಫೀಸಿನಲ್ಲಿ ಅಷ್ಟು ಹೊತ್ತಿದ್ದು ಬಂದರೂ ಹರಟೆ ಹೊಡೆದಿದ್ದು ಸಾಕಾಗಲಿಲ್ಲವೇನೋ?" ವ್ಯಂಗ್ಯವಾಗಿ ನುಡಿದ ಮಧು.

"ನಾನು ಆಫೀಸಿಗೆ ಹೋಗೋದು ಹರಟೆ ಹೊಡೆಯಲಿಕ್ಕಾ?" ತುಸು ಬೇಸರದಿಂದಲೇ ಕೇಳಿದಳು ಲಲಿತ.

"ಅಲ್ಲ, ನನ್ನ ಉದ್ಧಾರ ಮಾಡಲಿಕ್ಕೆ."

"ಯಾಕಷ್ಟು ಸಿಡಕ್ತೀರ, ಪಲ್ಯ ಎಷ್ಟು ಹೊತ್ತು ಹಿಡಿಯುತ್ತೆ, ಈಗ ಮಾಡಿಬಿಡ್ತೀನಿ. ಅಷ್ಟರಲ್ಲಿ ಏನು ಕೊಳ್ಳೆ ಹೋಗಿದ್ದು?"

"ಮಾತಿಗೆ ಮಾತು, ಎದುರು ವಾದಿಸೋದು ಅಂದ್ರೆ ಸಿದ್ಧವಾಗಿರ್ತೀಯ. ಹೆಂಗಸರಿಗಿರಬೇಕಾದ ಲಕ್ಷಣ ಒಂದಾದರೂ ಇದ್ದರೆ ತಾನೆ? ಆ ಪಕ್ಕದ ಮನೆ ಲಕ್ಷ್ಮೀನ ನೋಡು, ಎಷ್ಟು ವಿನಯವಾದ ಮಾತುಕತೆ, ಕೆಲಸ ಬೊಗಸೆ ಎಲ್ಲಾ ಏನು ಅಚ್ಚುಕಟ್ಟು. ಅದೂ ಹೆಣ್ಣಿಗಿರಬೇಕಾದ ಲಕ್ಷಣ. ನೀನೂ ಇದೀಯ, ಒಳ್ಳೆ ಗಂಡುಬೀರಿ ಹಾಗೆ ಬೆಳೆಸಿ ನನಗೆ ಕಟ್ಟಿ ಕೈ ತೊಳೆದುಕೊಂಡರು. ಛಿ..... ಛೀ....." ಎನ್ನುತ್ತಾ ಮುಖ ತೊಳೆಯಲು ಬಾತ್‌ರೂಮಿಗೆ ಹೋದ ಮಧು.

"ಅಬ್ಬಾ, ಸದಾ ಯಾವುದೋ ಒಂದಕ್ಕೆ ರಾಮಾಯಣ ಇದ್ದದ್ದೇ. ನೌಕರಿ ಮಾಡಿ ಹಣ ಸಂಪಾದಿಸೋದೇನೋ ಚೆನ್ನಾಗಿರತ್ತೆ. ಪಕ್ಕದವರ ಜತೆ ಮಾತಾಡಿದರೇನೇ ಪಾತಿವ್ರತ್ಯ ಹಾಳಾದಂತೆ ಆಡ್ತಾರೆ....." ರೋಷದಿಂದ ಗೊಣಗಿಕೊಂಡಳು ಲಲಿತ.

"ರಾಮೂ ಮಗೂಗೆ ಹುಟ್ಟಿದ ಹಬ್ಬಾನಂತೆ, ಫೋನ್ ಮಾಡಿ ಕರೆದ ಇಬ್ಬರನ್ನೂ. ಬರ್ತೀವೀಂತ ಹೇಳಿದೆ..... ಗಂಡನ ಜೊತೆ ಹೊರಡೋದಿಕ್ಕೆ ತಾವು ತಯಾರಿಲ್ಲವಲ್ಲಾ..... ನಾನು ಹೋಗ್ತೀದಿನಿ" ಅಂದ ಮಧು.

"ಹಾಗೇನು, ನಂಗೆ ಗೊತ್ತಿರಲಿಲ್ಲ. ನಡೀರಿ ನಾನೂ ಬರ್ತೀನಿ. ಅನ್ನ ಆಗಿದೆ, ಇವತ್ತಿಗೆ ಪಲ್ಯ ಮಾಡದಿದ್ದರಾಯ್ತು. ಬೆಳಿಗ್ಗಿನ ಅಡಿಗೆ ಇದೆ. ಉಪ್ಪಿನ ಕಾಯಿ, ಪಚ್ಚಡಿ ಇರುತ್ತಲ್ಲಾ, ಒಂದು ಹೊತ್ತಿಗೆ ಹೇಗೋ ಸಾವರಿಸಿ ಕೊಂಡರಾಯಿತು....." ಲಲಿತಳ ಮಾತು ಪೂರ್ತಿಯಾಗುವ ಮೊದಲೇ,

"ಬೆಳಗಿನಿಂದ ಮನೆಯಿಂದ ಹೊರಗೇ ಇದ್ದರೂ ಸರಿ, ತಿರುಗೋದೆಂದರೆ ಸೈ ಅಂತೀಯಾ. ಎಲ್ಲೀದಲ್ಲಿ ಬಿಟ್ಟು ಓಡಿಬರ್ತೀಯ. ಮನೆಗೆ ಬಂದ ಮೇಲೆ ಬರೀ ಉಪ್ಪಿನಕಾಯಿ ಅನ್ನ ತಟ್ಟೇಲಿ ಬಡೀತೀಯ. ಹೆಣ್ಣಿನ ಲಕ್ಷಣ ಒಂದಾದರೂ..... ಥೂ....." ತಿರಸ್ಕಾರದಿಂದ ಅವಳ ಕಡೆ ನೋಡಿ ಬಿರುಸಾಗಿ ಹೊರ ನಡೆದ.

"ಛೀ! ಏನು ಮನುಷ್ಯರೋ....." ಅಂದುಕೊಂಡಳು ಲಲಿತ. ಅವಳ ಮನಸ್ಸೆಲ್ಲಾ ಹಿಂಡಿದಂತಾಗಿತ್ತು. ಒಂದು ಸಲ ಹೀಗೇ ಎಲ್ಲಿಗೋ ಬರ್ತೀಯಾ ಅಂದಾಗ 'ಈವತ್ತು ಆಫೀಸಿನಲ್ಲಿ ಕೆಲಸ ಜಾಸ್ತಿ ಇತ್ತು. ಸುಸ್ತಾಗಿದೆ, ಅಡಿಗೇನೂ ಆಗಿಲ್ಲ, ಬರಲಾರೆ.....' ಅಂದಿದ್ದಕ್ಕೆ ಎಷ್ಟು ಪುರಾಣ ಓದಿದ್ದರು. ಅದನ್ನು ನೆನಪಿನಲ್ಲಿಟ್ಟುಕೊಂಡೇ ಈ ದಿನ 'ಬರ್ತೀನಿ' ಅಂದರೆ ಅದಕ್ಕೂ ರೇಗಾಟ.

"ಛಿ, ಛಿ..... ಈ ಹಾಳು ಸಂಸಾರ ಸಾಕಿನ್ನು. ನಾಳೆ ಭಾನುವಾರ ಅಣ್ಣನ ಬಳಿ ಹೋಗಿ, ಹೇಗಾದರೂ ಸರಿ ಅಲ್ಲಿಗೇ ಟ್ರಾನ್ಸ್‌ಫರ್ ಮಾಡಿಸಿಕೋಬೇಕು. ಸುಖವೂ ಇಲ್ಲ..... ಶಾಂತಿಯೂ ಇಲ್ಲ. ಯಾಕೆ ಬೇಕು ಈ ಸಂಸಾರ....." ಲಲಿತಳ ಮನಸು ವಿರಕ್ತಿಯಿಂದ ಕುದಿದು ಹೋಯಿತು.

ಹಠಾತ್ತಾಗಿ ಬಂದ ಲಲಿತಳನ್ನು ನೋಡಿ ಮನೆಯಲ್ಲಿ ಎಲ್ಲರೂ ತುಂಬಾ ಸಂತೋಷಪಟ್ಟರು.

"ಏನಮ್ಮಾ ಲಲಿತಾ, ಕೆನ್ನೆಗೆ ಬಣ್ಣ ಬಂದಿದೆ. ಜಾಜಿಯ ಮೊಗ್ಗಿನಂತೆ ಸೊಂಪಾಗಿ ಕಾಣುತ್ತಿ, ನಿದ್ದೆಗೆಟ್ಟಂತೆ ಕಾಣುತ್ತೀ, ಅಲ್ಲವೇ? ಏನು ವಿಶೇಷ?" ಅತ್ತಿಗೆ ಮೆಲುದನಿಯಲ್ಲಿ ಸರಸವಾಡಿದಳು.

"ಏನೇ ಲಲಿತಾ, ಹೀಗೆ ಬಿಳಿಚಿಕೊಂಡಿದೀಯಾ..... ಆ ಕೈ ನೋಡು ಕಡ್ಡಿ ಹಾಗಾಗಿದೆ....." ತಾಯಿ ಮಗಳ ಕಡೆ ನಿಧಾನಿಸಿ ನೋಡುತ್ತಾ ಕೇಳಿದರು.

"ಸದಾ ಅರಳು ಹುರಿದ ಹಾಗೆ ಪಟಪಟಾಂತಿರೋಳು ತಾನೂ ನಕ್ಕು ಎಲ್ಲರನ್ನೂ ನಗಿಸೋಳು. ಏನೋ ಹಿರಿತನ ಬಂದವಳಂತೆ ಕಾಣ್ತಿದಾಳೆ" ಅತ್ತೆ ಮೆಚ್ಚುಗೆಯ ಮಾತಾಡಿದರೆ!

"ಉತ್ಸಾಹದ ಬುಗ್ಗೆಯಂತಿದ್ದವಳು ಏನೋ ಮನಸ್ಸಿಗೆ ಚಿಂತೆ ಹಚ್ಚಿ ಕೊಂಡವಳಂತೆ ಕಾಣ್ತಿದಾಳಲ್ಲಾ" ಅಣ್ಣ ಕಾಮೆಂಟ್ ಮಾಡಿದ.

ಎಲ್ಲಕ್ಕೂ ಲಲಿತಳ ಕಿರುನಗೆಯೇ ಉತ್ತರವಾಗಿತ್ತು.

ಆ ರಾತ್ರಿ ಲಲಿತನ್ನ ನೋಡಿ ಹೋಗಲು ಆ ಊರಿನಲ್ಲಿಯೇ ಇದ್ದ ಅವರತ್ತೆಯ ಮಗಳು ಸರಳ ಬಂದಳು. ಬೆಳಗ್ಗೆ ಏಳುಸುತ್ತಿನ ಮಲ್ಲಿಗೆಯಂತೆ ದುಂಡಾಗಿ ಮುದ್ದಾಗಿ ಕಾಣುತ್ತಿದ್ದಳು ಸರಳ.

ಎಲ್ಲರೂ ಊಟಕ್ಕೆ ಕುಳಿತರು.

ಲಲಿತಳಿಗಿಷ್ಟವಾದ ಸಕ್ಕರೆ ಪೊಂಗಲ್ ಮಾಡಿದ್ದರು ತಾಯಿ.

"ನಂಗೆ ಬೇಡ ಅತ್ತೆ" ಎಂದು ಬಟ್ಟಲನ್ನು ಪಕ್ಕಕ್ಕೆ ಸರಿಸಿದಳು ಸರಳ.

ಲಲಿತ ಆಶ್ಚರ್ಯದಿಂದ ಅವಳ ಕಡೆ ನೋಡಿದಳು.

"ಏನೇ ಇದು ನಿನ್ನ ವರಸೆ, ಹೀಗೇನೇನು ಊಟ ಮಾಡೋದು? ಸ್ವೀಟ್ ಬೇಡಾಂತಿ, ತುಪ್ಪ ಬೇಡಾಂತಿ, ಮೊಸರು ಬೇಡಾಂತಿ..... ಸಾರಿನಲ್ಲಿ ನಾಲ್ಕಗಳು ತಿಂದು ಮಜ್ಜಿಗೆ ಕುಡಿದರೆ ಹೊಟ್ಟೆ ತುಂಬುತ್ತೇನೇ ಸರಳಾ?" ಊಟ ಮುಗಿಸಿದ ಮೇಲೆ ಕೇಳಿದರು ಲಲಿತಳ ತಾಯಿ.

"ಮನೆಗೆ ಹೋಗಿ ಮತ್ತೆ ಪಟ್ಟಾಗಿ ಹೊಡೀತಾಳೇನೋ ಬಿಡು" ಲಲಿತ ಹಾಸ್ಯ ಮಾಡಿದಳು.

"ಸರಿ ಸರಿ, ಹೀಗೆ ತಿಂದರೂ ದಪ್ಪಾ ಆಗ್ತಿದೀನಿ, ಇನ್ನು ಮಾಮೂಲಾಗಿ ತಿಂದರೆ ಬಾಗಿಲು ಹಿಡಿಸೊಲ್ಲ ಅಷ್ಟೆ" ಲಲಿತಳ ಅತ್ತಿಗೆ ರಾಧಳ ಕಡೆ ಮೆಚ್ಚುಗೆಯಿಂದ ನೋಡುತ್ತಾ ಹೇಳಿದಳು ಸರಳ.

ಸರಳಳ ಕಣ್ಣಿನಲ್ಲಿ ಕಂಡೂ ಕಾಣದಂತಿದ್ದ ಭೀತಿಯ ಛಾಯೆ ಲಲಿತಳನ್ನು ಆಲೋಚಿಸುವಂತೆ ಮಾಡಿತು.

ಸರಳಳನ್ನು ಕಳುಹಿಸಲು ಗೇಟಿನವರೆಗೂ ಬಂದವಳು "ನಿಮ್ಮವರಿಗೆ ಸಣ್ಣಗಿರಬೇಕೂಂತ ಇಷ್ಟಾನೇನೆ? ಹೀಗೆ ತಿಂಡಿಬಿಟ್ಟು ಕೂತರೆ ಸುಸ್ತಾಗಿ ಕಾಯಿಲೆ ಬೀಳ್ತೀಯ ಅಷ್ಟೆ..... ಹುಷಾರು" ಎಂದಳು ಲಲಿತ ಹಾಸ್ಯವಾಗಿ.

"ಹೂಂ..... ಅವರಿಗೆ ಬಿದರುಕೋಲಿನ ಹಾಗೆ, ಗಾಳಿ ಬೀಸಿದರೆ ಬಿದ್ದುಹೋಗೋ ಥರ ಇರೋರು ಅಂದ್ರೆ ಮೋಜು. ನನ್ನನ್ನ ಜತೇಲಿ ಕರಕೊಂಡು ಎಲ್ಲಾದ್ರೂ ಹೋಗೋದೂಂದ್ರೆ ನಾಚಿಕೆನಂತೆ. ಇನ್ನೂ ದಪ್ಪಾ ಆದರೆ ಮಾತ್ರ....." ಸರಳನ ಕಂಠ ನಡುಗಿತು.

"ಇನ್ನು ಬರ್ತೀನಮ್ಮ" ಎಂದು ಸರಸರನೆ ಹೊರಟು ಹೋದಳು.

"ಪುಷ್ಟಿಯಾಗಿ ಚೆನ್ನಾಗಿ ಕಾಣ್ತಾಳೆ ಸರಳ, ಅಲ್ಲವೇ?" ಗೇಟನ ಬಳಿ ಬಂದ ಲಲಿತಳ ಅತ್ತಿಗೆ ನಡೆದು ಹೋಗುತ್ತಿದ್ದ ಸರಳಳನ್ನು ನೋಡುತ್ತಾ ಹೇಳಿದಳು.

"ಓಹೋ, ನಿನಗೆ ಹಾಗನ್ನಿಸುತ್ತಿದೆಯೇನು? ಅವಳೇನೋ ನಿನ್ನ ಹಾಗೆ ಬಳಕುವ ಬಳ್ಳಿಯಂತಾಗಬೇಕೂಂತ ಕನಸು ಕಾಣ್ತಿದಾಳೆ" ಎಂದಳು ಲಲಿತ.

"ಹುಂ, ಅದೆಲ್ಲಾ ಸುಳ್ಳು. ದಿನ ಬೆಳಗಾದರೆ ಸ್ವೀಟ್ ತಿಂತಾ ಇದ್ದೀನಿ. ಇಷ್ಟವಿಲ್ಲದಿದ್ದರೂ ಸಾರಿಕ್ಕೂಡಾ ತುಪ್ಪ ಹಾಕ್ಕೋತಾ ಇದೀನಿ. ನಾನು ದಪ್ಪ ಆಗಿದೀನೇನು?" ಚಿಂತೆಯಿಂದ ಕೇಳಿದಳು ರಾಧ.

"ಅದ್ಯಾಕೆ ಹಾಗೆ ಮಾಡುತ್ತಿ?" ಆಶ್ಚರ್ಯದಿಂದ ಕೇಳಿದಳು ಲಲಿತ.

"ಮೈಯಲ್ಲಿ ಒಂದಿಷ್ಟೂ ಮಾಂಸ ಇಲ್ಲದೆ ಬರೀ ಕ್ಷಯರೋಗಿಯ ಹಾಗೆ, ಮೂಳೆ ಚಕ್ಕಳ ಬಿಟ್ಟುಕೊಂಡಿದೀಯಾಂತ ದಿನ ರಾತ್ರಿ ನಿಮ್ಮಣ್ಣನ ಗೋಣಗಾಟ. ಅಷ್ಟಕ್ಕೇ ಮುಗಿಯಿತೇ ಉಹುಂ, ಸ್ವಲ್ಪ ದಪ್ಪಕ್ಕೆ ಪುಷ್ಟಿಯಾಗಿರೋ ಹೆಂಗಸರನ್ನ ನೋಡಿದರೆ ಸಾಕು 'ಆಹಾ, ಓಹೋ' ಅನ್ನೋದು. ನಂಗಂತೂ

ಉರಿದು ಹೋಗುತ್ತೆ ನೋಡು....." ಅತ್ತಿಗೆಯ ಕಂಠದಲ್ಲಿನ ರೋಷ ಕಂಡು ಲಲಿತಳಿಗೆ ದಿಕ್ಕು ತೋಚದಂತಾಯಿತು.

ಊಟ ಮಾಡುತ್ತಿದ್ದ ತಂದೆಗೆದುರಾಗಿ ಕುಳಿತು ಮಾತನಾಡುತ್ತಿದ್ದಳು ಲಲಿತ.

"ಸ್ವಲ್ಪ ಸಕ್ಕರೆ ಪೊಂಗಲ್ ಹಾಕ್ಕೋಪ್ಪಾ" ಎಂದಳು.

"ಉಹುಂ..... ಅದು ಬೇಡ. ಆ ಕೇಸರಿ ಬಾತು ಇನ್ನು ಸ್ವಲ್ಪ ಹಾಕು..... ಚೆನ್ನಾಗಿದೆ" ಎಂದರಾತ.

"ಹಾಕಮ್ಮಾ ಹಾಕು, ಅದು ಪಕ್ಕದ ಮನೆ ಕಮಲಮ್ಮನವರು ಕೊಟ್ಟಿದ್ದಲ್ಲವೇ, ಚೆನ್ನಾಗಿರದೆ ಏನು ಮಾಡತ್ತೆ. ಬಟ್ಟಲು ಪೂರಾ ಬಗ್ಗಿಸಿಬಿಡು..... ಮೊದಲಿಂದಾ ಹೀಗೇನೇ, ಎಷ್ಟು ಮಾಡಿದರೂ ಸಾರ್ಥಕವಿಲ್ಲ. ಬೇರೆಯವರು ಮಾಡಿದ್ದೂಂದ್ರೇನೇ ಮೆಚ್ಚುಗೆ."

ತಾಯಿಯ ಮಾತುಗಳನ್ನು ಪೂರ್ತಿಯಾಗಿ ಕೇಳದೇನೇ ಅಲ್ಲಿಂದ ಎದ್ದು ಹೊರಬಂದಳು ಲಲಿತ.

ಬೆಳಿಗ್ಗೆ ಏಳುತ್ತಿದ್ದಂತೆಯೇ ಊರಿಗೆ ಹೊರಡಲು ಸಿದ್ಧಳಾಗುತ್ತಿದ್ದ ಮಗಳನ್ನು "ಅಣ್ಣನ ಹತ್ತಿರ ಏನೋ ಮಾತಾಡಬೇಕು ಅಂದೆಯಲ್ಲೇ" ಎಂದರು ತಾಯಿ.

"ಏನಿಲ್ಲ ಬಿಡು, ಆಫೀಸ್ ಟೈಮ್‌ಗೆ ಸೇರಬೇಕು, ಹೊರಡ್ತೀನಿ" ಎಂದು ನಿಟ್ಟುಸಿರು ಬಿಟ್ಟಳು ಲಲಿತ.



# ಸೋತ ನಂತರ

ಮೂಲ : ಶ್ರೀಮತಿ ಶೀಲಾ ವೀರ್‍ರಾಜು

"ನೆನಪಿನಾಗ ಇರ್ತದೇನು ಮತ್ತೆ....." ಬಾಗಿಲವರೆಗೂ ಬಂದ ಭಾನುಮತಿ ಮೆಲುದನಿಯಲ್ಲಿ ಕೇಳಿದಾಗ "ಹೂಂ" ಎಂಬಂತೆ ತಲೆ ಆಡಿಸಿ ಬಾಗಿಲನ್ನು ತೆರೆದುಕೊಂಡು ಹೊರಟುಹೋದ ಆತ. ಅಲ್ಲಿಯೇ ಬಾಗಿಲಿಗೊರಗಿ ನಿಂತು, ಅವನ ಹೆಜ್ಜೆಯ ಸದ್ದನ್ನೇ ಆಲಿಸುತ್ತಿದ್ದ ಭಾನುಮತಿಗೆ, ಹಾಲಿನಲ್ಲಿ ಆ ಹೆಜ್ಜೆಯ ಸಪ್ಪಳ ಒಂದು ಕ್ಷಣ ನಿಂತು ಕ್ರಮವಾಗಿ ಕೇಳದಂತಾಯಿತು.

ಆತ ಹೊರಟು ಹೋದರೂ ರೂಮಿನ ತುಂಬೆಲ್ಲಾ ತುಂಬಿಕೊಂಡಿದ್ದ ಸಿಗರೇಟ್ ವಾಸನೆಗೆ, ಭಾನುಮತಿ ಫ್ಯಾನ್ ಹಾಕಿದಾಗ ಸಿಗರೇಟಿನ ನುಸಿಯೆಲ್ಲಾ ಗಪ್ಪನೆ ಹಾರಿ, ಧೂಳಿನಂತೆ ಬಂದು ಭಾನುಮತಿಯು ಕಣ್ಣನ್ನು ಉಜ್ಜಿಕೊಂಡಾಗ ಕೈ ಬೆರಳುಗಳಿಗೆ ನಿದ್ದೆಯ ಅಮಲು ಮೆತ್ತಿಟ್ಟಿನಂತೆ ತಾಗಿದಂತೆನಿಸಿ, ಆಕಳಿಸಿ ಮೈ ಮುರಿದುಕೊಂಡಳು. ದೇಹದ ನರನರಗಳಲ್ಲೂ ವ್ಯಾಪಿಸಿದ ಆಯಾಸ, ಸುಸ್ತು, ಜಲಪಾತದಂತೆ ಮನಸ್ಸಿನೊಳಗೆ ಧುಮುಕಿತು.

ಭಾನುಮತಿ ಎರಡು ಆಪಲ್ ಹಣ್ಣುಗಳನ್ನು ತಿಂದು ನೀರು ಕುಡಿದು ನಲುಗಿದ ಹಾಸಿಗೆಯನ್ನು ಸರಿಪಡಿಸಿ ಅದರ ಮೇಲೆ ಮೈ ಚೆಲ್ಲಿದಳು. ಕಳೆದ ಎರಡು ತಿಂಗಳಿಂದ ಬಾರಿಬಾರಿಗೂ ನೆನಪಾಗುತ್ತಿದ್ದರೂ ಪುರುಸೊತ್ತಾಗಿ ಅದನ್ನು ಕುರಿತು ಆಲೋಚಿಸುವಷ್ಟು ತಾಳ್ಮೆಯಾಗಲೀ ಸ್ಥೈರ್ಯವಾಗಲೀ ಇಲ್ಲದಾಗಿತ್ತು. ಭಯ, ಕೋಪ, ನಿಸ್ಸಹಾಯಕತೆ, ಸುಟ್ಟುಹೋದ ಬೆಳಕಿನ ದಾರಿ, ಸಿಕ್ಕುಸಿಕ್ಕಾದ ಕತ್ತಲೆಯ ಗಜಿಬಿಜಿ, ಅಂತಹ ದಾರಿಯಲ್ಲಿ ಬೆದರುತ್ತಾ,

ಹೆದರುತ್ತಾ ಕಾಲೆಳೆಯುತ್ತಾ ದಾರಿತಪ್ಪಿ, ಜ್ಞಾನತಪ್ಪಿ ಎಲ್ಲಿಯೋ ಒಂದು ಕಡೆ ಕೆಳಗೆ ಬೀಳಲೇಬೇಕಾದ ಪರಿಸ್ಥಿತಿ ಅವಳದು.

ಬಾಗಿಲನ್ನು ತಳ್ಳಿಕೊಂಡು ಒಳಗೆ ಬಂದ ರತ್ನಾಬಾಯಿ ಕೈಯಲ್ಲಿದ್ದ ಹಾಲಿನ ಗ್ಲಾಸನ್ನು ಮೇಜಿನ ಮೇಲಿಡುತ್ತಾ "ಚಳೀ ನಡುಕಾ ಬರೂ ಹಾಂಗದ, ಫ್ಯಾನ್ ಹಾಕ್ಕೊಂಡೀಯಲ್ಲಾ..... ಬಂದ್ ಮಾಡು. ಇಲ್ಲಂದ್ರ ಬೆಳಕು ಹರಿಯೊಷ್ಟ ರಾಗ ನೆಗಡೀ ಬರ್ತದಾ ಖರೆ" ಎಂದಾಗ ಭಾನುಮತಿ ಮಾತನಾಡಲಿಲ್ಲ. ಮತ್ತೊಂದು ಪಕ್ಕಕ್ಕೆ ತಿರುಗಿ ಮಲಗಿಕೊಂಡಳು.

"ಯಾಕ ಹುಡ್ಗೀ, ಸಿಟ್ಟಾಗೀಯೇನು? ಇದೋ ಹಾಲು, ಮೇಜಿನ ಮ್ಯಾಗಿಟ್ಟೀನಿ. ಗರಮ್ ಇರೋ ಹಾಂಗ ಕುಡಿದುಬಿಡು ಮತ್ತ. ಮೈನಾಗಿನ ಸುಸ್ತು ಎಲ್ಲಾ ಓಡಿಹೋಗ್ತದಾ....."

ಫ್ಯಾನ್ ಆರಿಸಿ, ಬೆಡ್‌ಶೀಟ್ ಹೊದಿಸಿ ಬಾಗಿಲನ್ನು ಮುಂದಕ್ಕೆ ಮಾಡಿಕೊಂಡು ಹೊರಟುಹೋದಳು ರತ್ನಾಬಾಯಿ.

ಭಾನುಮತಿಗೆ ಬರಿ ಹಣ್ಣಿನಿಂದ ಹಸಿವು ತೀರಿರಲಿಲ್ಲ. ಎದ್ದು ಹಾಲು ಕುಡಿದು, ಮುಸುಕಿಟ್ಟು ಮುದುಡಿ ಮಲಗಿದಳು. ಬಿಸಿಹಾಲು ಕುಡಿದಿದ್ದರಿಂದಲೋ ಏನೋ ನಿದ್ದೆ ಹಾರಿಹೋಗಿತ್ತು. ಕಣ್ರೆಪ್ಪೆಗಳ ಹಿಂದೆ ನೆನಪಿನ ನೆರಳು, ಮನಸಿನ ಮೊರೆಗಳ ಹಿಂದೆ ಆಲೋಚನೆಗಳ ಪ್ರವಾಹ ಹರಿಯುತ್ತಿತ್ತು.

ಈತನಾದರೂ ಕಾಗದ ಬರೀತಾನೋ ಇಲ್ಲವೋ! ತನ್ನ ಬಗ್ಗೆ ಕರುಣೆ, ಸಹಾನುಭೂತಿಯಿಂದ ಮಾತನಾಡಿದ್ದ, ನಂಬಬಹುದೆಂದೇ ಅನ್ನಿಸಿತ್ತು. ಹಾಗೆ ಮಾತನಾಡುತ್ತ ಆಡುತ್ತಲೇ ತನಗೆ ಬೇಕಾದುದನ್ನು ತೆಗೆದುಕೊಳ್ಳದೆ ಬಿಡಲೂ ಇಲ್ಲ. ಇದೇನೂ ಮೊದಲ ಸಲವಲ್ಲ, ಕೆಲವರು ಕೇಳಿ ಸುಮ್ಮನಾಗುತ್ತಿದ್ದರು. ಶ್ರದ್ಧೆಯಿಂದ ಕೇಳಿ ಸಹಾಯ ಮಾಡುತ್ತೇನೆಂದವರೂ ಇಲ್ಲದಿರಲಿಲ್ಲ. ಆದರೇನಂತೆ? ಇದುವರೆವಿಗೂ ಯಾವುದೂ ಫಲಿಸಿರಲಿಲ್ಲ, ಬಂದವರಿಗೆ ಶರೀರ ಕೊಟ್ಟು ನಿರಾಶೆಯಿಂದಲೇ ಸಹಾಯಕ್ಕಾಗಿ ಅವರನ್ನು ಬೇಡಿಕೊಳ್ಳುವುದು ತಪ್ಪಿರಲಿಲ್ಲ. ನಿರಾಶೆಯಲ್ಲಿಯೇ ಆಶಾಕಿರಣಕ್ಕಾಗಿ ಎದುರು ನೋಡುವುದೂ ತಪ್ಪಿರಲಿಲ್ಲ.

ಪೂರ್ತಿಯಾಗಿ ಆಲೋಚನೆಗಳ ಪ್ರವಾಹದಲ್ಲಿ ಮುಳುಗುವ ಮುನ್ನವೇ ನಿದ್ರಾದೇವಿ ಅವಳನ್ನು ಕರುಣಿಸಿದ್ದಳು. ನಿಶ್ಶಕ್ತಿಯಿಂದ ಮುಟ್ಟಿದರೆ ಮುರಿದು ಹೋಗುವುದೇನೋ ಎಂಬಂತಿದ್ದ ಎಲ್ಲಾ ಕೀಲುಗಳ ಸಂದುಗಳಿಂದ ಹರಿಯುತ್ತಾ ಬಂದು ಆಲೋಚನಾ ದ್ವಾರಗಳನ್ನು, ಕಣ್ರೆಪ್ಪೆಗಳನ್ನೂ ಗಂಟುಹಾಕಿ ಬಿಗಿದಿದ್ದಳು ನಿದ್ರಾದೇವಿ. ಬಹಳ ರಾತ್ರಿಗಳಂತೆ ಈ ರಾತ್ರಿ ಸಹ ಆಕೆಗೆ ಕನಸುಗಳಿಲ್ಲದ ಗಾಢನಿದ್ರೆಯಲ್ಲಿಯೇ ಮಿಕ್ಕ ಅರ್ಧ ರಾತ್ರಿ ಕಳೆದು ಹೋಗಿತ್ತು.

ಬೆಳಿಗ್ಗೆ ಬಿಸಿಲು ಮೇಲೇರಿದರೂ ಎಚ್ಚರವಾಗಲಿಲ್ಲ. ಮೈಯಲ್ಲಿನ ಕೀಲುಗಳೆಲ್ಲಾ ವಶತಪ್ಪಿದಂತೆ, ಮುರಿದು ಹೋಗುವುದೇನೋ ಎಂಬಂತೆ ಅನಿಸುತ್ತಿತ್ತು. ಏಳಲಾಗದೆ ಮಂಚದ ಮೇಲೆ ಹಾಗೇ ಬಿದ್ದುಕೊಂಡಿದ್ದಳು.

ರತ್ನಾಬಾಯಿ ಬಾಗಿಲು ತೆರೆದು ಒಳಬಂದು ಮತ್ತೆ ಬಾಗಿಲು ಮುಂದೆ ಮಾಡುತ್ತಿರುವಾಗ ಆ ಸದ್ದಿಗೆ ಕಣ್ಣು ತೆರೆದಿದ್ದಳು ಭಾನುಮತಿ.

"ಮಲಕೋ ಕಣ್ಣಮುಚಗೊಂಡು, ಏಳಬ್ಯಾಡ, ಸುಮ್ಮನಾ ಬಂದೀನಿ" ಎಂದಂದು ಹೊರಟುಹೋದಳು.

ಯಾರಮೇಲೂ ಇಲ್ಲದ ಇಷ್ಟು ಅಭಿಮಾನ ತನ್ನ ಮೇಲೆ ಮಾತ್ರ ಏಕೆ ತೋರುತ್ತಾಳೆಂಬುದನ್ನು ಅರ್ಥ ಮಾಡಿಕೊಳ್ಳಲಾರದಷ್ಟು ಮೂರ್ಖಳೇನಲ್ಲ. ಭಾನುಮತಿ ಕರೆದ ಕೂಡಲೇ ಓಡಿಬಂದು ಕಣ್ಣ ಸನ್ನೆಯಲ್ಲಿಯೇ ತನಗೆ ಬೇಕಾದುದನ್ನೆಲ್ಲಾ ಸಿದ್ಧಪಡಿಸಿ ತನ್ನನ್ನು ಮಹಾರಾಣಿಯಂತೆ ನೋಡುವ ಈ ಅಭಿಮಾನ ಶಾಶ್ವತವೆಂದು ನಂಬುವಷ್ಟು ತಿಳಿಗೇಡಿಯೂ ಅಲ್ಲ. ಆದ್ದರಿಂದಲೇ ಆ ಮುದುಕಿ ಸಿಹಿಯಾಗಿ ಮಾತನಾಡಿದಾಗಲೆಲ್ಲಾ ಅವಳ ಮೇಲೆ ಬಿದ್ದು, ಕತ್ತುಹಿಸುಕಿ ಕಣ್ಣುಗುಡ್ಡೆ ಹೊರಕ್ಕೆ ಬರುವಂತೆ ಮಾಡಬೇಕೆನಿಸುತ್ತಿತ್ತು. ಆದರೆ ಅದು ಸಾಧ್ಯವಿಲ್ಲದ ಕೆಲಸ, ಈ ವಯಸ್ಸಿನಲ್ಲಿಯೂ ಗುಂಡುಕಲ್ಲಿನಂತಿತ್ತು ಮುದುಕಿ.

ಮತ್ತೂ ಅರ್ಧ ಗಂಟೆ ಮಂಚದ ಮೇಲೆ ಉರುಳಾಡುತ್ತಿದ್ದು ಆ ನಂತರ ಮೆಲ್ಲನೆ ಎದ್ದಳು. ಬಾತ್‌ರೂಮಿಗೆ ಹೋಗುತ್ತಿದ್ದಾಗ ರಾಧಿಕ ಹಾಸ್ಯವಾಗಿ

ಚಟಾಕಿ ಹಾರಿಸಿದರೂ ಭಾನುಮತಿ ಕಿವಿಯ ಮೇಲೆ ಹಾಕಿಕೊಳ್ಳಲಿಲ್ಲ. ಮಾಮೂಲಾಗಿ ತಲೆಎತ್ತಿ ನೋಡಿ ಕಿರುನಗೆ ಬೀರಿ ಹೊರಟು ಹೋದಳು. ಇಲ್ಲಿ ಯಾರನ್ನೂ ನಂಬುವಂತಿಲ್ಲ. ಒಮ್ಮೊಮ್ಮೆ ತನ್ನ ನೆರಳೇ ತನ್ನನ್ನು ಭಯ ಪಡುವಂತೆ ಮಾಡುತ್ತಿತ್ತು. ಅದರಿಂದಾಗಿಯೇ ಯಾರನ್ನೂ ಹತ್ತಿರ ಸೇರಿಸಲೇ ಭಯ. ತನ್ನ ಕಡೆ ನೋಡಿ ನಕ್ಕರೆ ತಾನೂ ನಗುವುದು, ಮಾತನಾಡಿಸಿದರೆ ಎಷ್ಟೋ ಅಷ್ಟು ಮಾತನಾಡುವುದು ಅಷ್ಟೇ. ತಾನಾಗಿ ಯಾರನ್ನೂ ಮಾತನಾಡಿಸುವುದಕ್ಕೆ ಹೋಗುತ್ತಿರಲಿಲ್ಲ.

ಕಾಲಕೃತ್ಯಗಳನ್ನು ಮುಗಿಸಿ ತನ್ನ ಮೈಯಿಂದ ಹೊರಸೂಸುತ್ತಿದ್ದ ಮೈಸೂರು ಸ್ಯಾಂಡಲ್ ಸಾಬೂನಿನ ಸುವಾಸನೆಯನ್ನು ಹೀರುತ್ತಾ ಕೋಣೆಯೊಳಗೆ ಬಂದಾಗ ಕೆಲಸದವಳು ಕಸ ಗುಡಿಸುತ್ತಿದ್ದುದು ಕಾಣಿಸಿತು. ಮಂಚದ ಕೆಳಗೆ..... ನೆಲದ ಮೇಲೆ..... ಸಿಕ್ಕಾಬಟ್ಟೆ ಬಿದ್ದಿದ್ದ ಸಿಗರೇಟ್ ಚೂರುಗಳನ್ನು ಗುಡಿಸಿ ಮೊರದೊಳಕ್ಕೆ ಎತ್ತುತ್ತಿದ್ದಳು.

ರಾತ್ರಿ ಇಷ್ಟು ಸಿಗರೇಟುಗಳನ್ನು ಸುಟ್ಟು ಭಸ್ಮ ಮಾಡಿದನೇ ಆತ ಎಂದು ಆಶ್ಚರ್ಯವಾಯಿತು ಭಾನುಮತಿಗೆ. ಇಂತಹ ಮನುಷ್ಯನೊಂದಿಗೆ ರಾತ್ರಿಯನ್ನೆಲ್ಲಾ ತಾನು ಹೇಗೆ ಕಳೆದೆ ಎಂದು ಮತ್ತಷ್ಟು ಆಶ್ಚರ್ಯವಾಯಿತು. ತನಗೆ ಮೊದಲಿನಿಂದಲೂ ಇಷ್ಟವಿಲ್ಲದ ಅನೇಕ ವಿಷಯಗಳು ಈಗ ಕ್ರಮವಾಗಿ ತಾನಾಗಿಯೇ ಅಭ್ಯಾಸವಾಗುತ್ತಿವೆ ಎಂದು ನೆನೆಸಿಕೊಂಡಾಗ ಮೈಯೆಲ್ಲಾ ನಡುಗಿದಂತೆನಿಸಿ ಮುಖ ಹಿಂಡಿದಳು. ಈಗಾಗಲೇ ತನ್ನಲ್ಲಿ ಸಾಕಷ್ಟು ಬದಲಾವಣೆ ಬಂದಿದೆ. ಇನ್ನು ಕೆಲದಿನಗಳು ಇದೇ ರೀತಿ ಕಳೆದರೆ ತನ್ನನ್ನು ತಾನೇ ಗುರ್ತು ಹಿಡಿಯದೆ ಹೋಗಬಹುದು.

ಕೆಲಸದವಳು ಹೊರಟು ಹೋದ ಮೇಲೆ ಬಾಗಿಲನ್ನು ಮುಂದಕ್ಕೆ ಹಾಕಿ ಬಂದು ಕಿಟಕಿಯ ಬಳಿ ಕುಳಿತಳು. ಆ ಕಿಟಕಿಯಿಂದ ಹೊರಕ್ಕೆ ನೋಡಿದರೆ ಏನೂ ಕಾಣದು, ಆಚೆ ಮಹಡಿ ಮನೆಯ ಗೋಡೆಯ ಹೊರತು. ಆ ಗೋಡೆಗೆ ಕಿಟಕಿ ಇದ್ದರೂ ಅದು ಯಾವಾಗಲೂ ಮುಚ್ಚಿಯೇ ಇರುತ್ತಿತ್ತು. ಆದ್ದರಿಂದ ಕಿಟಕಿಯಿಂದ ಕಾಣುವ ದೃಶ್ಯ ಸದಾ ಒಂದೇ. ಪ್ರಾಣವಿಲ್ಲದ, ಚಲನರಹಿತವಾದ,

ಯಾವ ವಿಧವಾದ ಬದಲಾವಣೆಯೂ ಇಲ್ಲದ ಆ ಗೋಡೆ ಅರ್ಥರಹಿತವಾಗಿ ಕಾಣುತ್ತಾ ಮನಸ್ಸಿಗೆ ಮತ್ತಷ್ಟು ಜಿಗುಪ್ಸೆಯನ್ನುಂಟು ಮಾಡುತ್ತಿತ್ತು. ಆದರೂ ಭಾನುಮತಿಗೆ ಆ ಕಿಟಕಿಯಿಂದ ಹೊರ ನೋಡುವುದರ ಹೊರತು ಬೇರೊಂದು ಕಾಲಕ್ಷೇಪವಿರಲಿಲ್ಲ. ಏನೂ ತೋಚದೆ ಇದ್ದಾಗಲೆಲ್ಲಾ ಅದೇ ಕಿಟಕಿಯೊಳಗಿನಿಂದ, ಆಸಕ್ತಿರಹಿತವಾದ ಆ ಗೋಡೆಯನ್ನೇ ನೋಡುತ್ತಾ ಕೂರುತ್ತಿದ್ದಳು.

ಹಾಗೆ ಕುಳಿತಾಗ ಅಲ್ಲಿ ನೋಡಲು ಏನೂ ಇಲ್ಲವಾದ್ದರಿಂದಲೇ ಏನೋ, ಆಲೋಚನೆಗಳ ಮಹಾಪೂರ ಅವಳ ಮನಸ್ಸನ್ನಾಕ್ರಮಿಸುತ್ತಿತ್ತು. ಆ ಸ್ಥಳಕ್ಕೂ ಆಲೋಚನೆಗಳಿಗೂ ಇರುವ ನಂಟನ್ನು ಅವಳೂ ತಪ್ಪಿಸಿಕೊಳ್ಳಲಾರದಾಗಿದ್ದಳು.

ಸಿಗರೇಟಿನ ಕುರಿತು ಆಲೋಚನೆಯೊಂದಿಗೆ ತನ್ನ ಚಿಕ್ಕಂದಿನ ಘಟನೆಯೊಂದು ರೆಕ್ಕೆ ಬಿಚ್ಚಿ ಮುಂದೆ ನಿಂತಿತು. ಆಗ ಯಾರ ಕೈಯಲ್ಲಿ ಸಿಗರೇಟ್ ನೋಡಿದರೂ ಬಿಳೀ ಕಂಬಳಿ ಹುಳದಂತೆ ಕಾಣುತ್ತಿತ್ತು ಅವಳಿಗೆ. ಸಿಗರೇಟ್ಟನ್ನು ಕಂಡರಾಗದು. ಅಸಹ್ಯದಿಂದ ವಾಕರಿಕೆ ಬರುತ್ತಿತ್ತು. ತಲೆನೋವು ಬರುತ್ತಿತ್ತು ಮೊನ್ನೆ ಮೊನ್ನೆಯವರೆಗೂ ಕೂಡ..... ಹೈಸ್ಕೂಲಿನಲ್ಲಿ ಓದುತ್ತಿದ್ದಾಗಿನ ವಿಷಯ. ಪ್ರೈವೇಟ್ ಕ್ಲಾಸ್ ಇದೆಯೆಂಬ ಕಾರಣದಿಂದ ಬೆಳಿಗ್ಗೇನೇ ಸ್ಕೂಲಿಗೆ ಬಂದಿದ್ದಳು. ಇನ್ನೂ ಯಾರೂ ಬಂದಿರಲಿಲ್ಲ. ವಾಚ್‌ಮನ್ ಸ್ಕೂಲಿನ ಬಾಗಿಲು ತೆರೆದು ಕ್ಲೀನ್ ಮಾಡುತ್ತಿದ್ದ. ಭಾನುಮತಿ ಸ್ವಲ್ಪ ಹೊತ್ತು ರಿಂಗ್ ಟೆನ್ನಿಸ್ ಕೋರ್ಟಿನಲ್ಲಿ ನಿಂತು ಬಿಸಿಲು ಕಾಸಿಕೊಳ್ಳೋಣವೆಂದು ಅಲ್ಲಿಗೆ ಕಾಲಿಟ್ಟಾಗ ಅಲ್ಲಿ ರಾಜಾರಾಂ, ಸುಬ್ಬೂ ಕುಳಿತು ಗುಟ್ಟಾಗಿ ಸಿಗರೇಟ್ ಸೇದುವುದು ಕಾಣಿಸಿತು. ಅವಳನ್ನು ನೋಡಿ ರಾಜಾರಾಂ ಪೆಚ್ಚಾದ. ಹೆದರಿಕೆಯಿಂದ ಅವನಿಗೆ ಪ್ರಾಣವೇ ಹೋದಂತಾಯಿತು.

"ಗುಟ್ಟಿನ್ನಾಗ ಸಿಗರೇಟ್ ಹಚ್ಚಿಕುಂತಿಯೇನು, ನಿಮ್ಮಪ್ಪಾಗ ಹೇಳ್ತಿನಿ ನೋಡು ಮತ್ತ" ಎಂದಿದ್ದಳು ಭಾನುಮತಿ.

ಅವರಿಬ್ಬರ ಮನೆಗಳೂ ಒಂದೇ ಬೀದಿಯಲ್ಲಿ ಹತ್ತಿರ ಹತ್ತಿರ ಇದ್ದುವು. ರಾಜಾರಾಂ ಮನೆಯವರಿಗೂ, ಭಾನುಮತಿ ಮನೆಯವರಿಗೂ ಚೆನ್ನಾಗಿ ಪರಿಚಯವಿತ್ತು.

"ದಮ್ಮಯ್ಯ ಮನ್ಯಾಗ ಹೇಳಬೇಡ" ಎಂದು ರಾಜಾರಾಂ ಬೇಡಿಕೊಂಡಾಗ ಸುಮ್ಮನಾಗಿದ್ದರೂ ಅಂದಿನಿಂದ ಅವನೇನಾದರು ಗಲಾಟೆ ಮಾಡಿದಾಗ "ನೀ ಸಿಗರೇಟ್ ಹಚ್ತೀಯಂತೆ ಮನ್ಯಾಗ ಹೇಳಂತಿಯೇನು?" ಎಂದು ಛೇಡಿಸುತ್ತಿದ್ದಳು. ಅವನು ದಮ್ಮಯ್ಯ ಗುಡ್ಡೆ ಹಾಕುತ್ತಿದ್ದ ಬರಬರುತ್ತಾ "ಹೇಳಿದರೆ ಹೇಳಲ್ಲಾ, ಏನು ಮಹಾ" ಎಂದು ಎದುರು ಬೀಳುತ್ತಿದ್ದ. ಆನಂತರ ಅವಳ ಮಾತಿಗೆ ಉತ್ತರವಾಗಿ ಅವಳೆದುರಿಗೇ ಸಿಗರೇಟ್ ಸೇದುತ್ತಿದ್ದ. ಅವಳಿಗೆ ಕೋಪ ಬಂದು ಅವನೊಂದಿಗೆ ಮಾತನಾಡುವುದನ್ನೇ ಬಿಟ್ಟಿದ್ದಳು. ಅವಳ ಕೋಪಕ್ಕೆ ಹೆದರಿ ಅವಳ ಮುಂದೆ ಸಿಗರೇಟ್ ಸೇದುವುದನ್ನು ಬಿಟ್ಟಿದ್ದ ರಾಜಾರಾಂ.

ಮುಂದೆ ಅವಳ ಓದು ಫೈನಲ್‌ಗೇ ನಿಂತುಹೋಗಿ ತಾನು ಮಾತ್ರ ಬೇರೆ ಊರಿಗೆ ಹೋಗಿ ಕಾಲೇಜಿನಲ್ಲಿ ಓದು ಮುಂದುವರಿಸಿದಾಗ ಸಹ ಊರಿಗೆ ಬಂದಾಗ ಅವಳೆದುರಿಗೆ ಸಿಗರೇಟ್ ಸೇದಲು ಬಿಡುತ್ತಿರಲಿಲ್ಲ. ಕೊನೆಗೆ ಅವನು ಕೆಲಸಕ್ಕೆ ಸೇರಿದ ಮೇಲೂ ಊರಿಗೆ ಬಂದಾಗ ತನಗೆ ಸಿಗರೇಟ್ ತುಂಬಾ ಅಭ್ಯಾಸವಾಗಿದ್ದಾಗ್ಯೂ ಅವಳೆದುರಿಗೆ ಮಾತ್ರ ಸಿಗರೇಟ್ ಸೇದುತ್ತಿರಲಿಲ್ಲ. ಊರಿಗೆ ಬಂದಾಗಲೆಲ್ಲಾ ಅವಳನ್ನು ಕಾಣದೆ ಹೋಗುತ್ತಿರಲಿಲ್ಲ ಅವನು. ಯಾವುದೋ ನೆಪದಿಂದ ಅವರ ಮನೆಗೆ ಹೋಗಿ ಅವಳನ್ನು ಮಾತನಾಡಿಸಿ ಬರುತ್ತಿದ್ದ.

ರಾಜಾರಾಮನನ್ನು ಕುರಿತು ಆಲೋಚಿಸುತ್ತಿದ್ದಂತೆ ಅವಳ ಕಣ್ಣಲ್ಲಿ ನೀರು ತುಂಬಿಕೊಂಡಿತು. ಅಂತಹ ಮಾಧುರ್ಯಭರಿತ ಸ್ನೇಹ ತನಗಿಲ್ಲವಾಯಿತು. ಎಷ್ಟೋ ಸಾಹಸಕ್ಕೆ ಕೈಹಾಕಿ ತಾನು ಮಾಡಿದ ಕೆಲಸ ಕೊನೆಗೆ ಇಂತಹ ದುಷ್ಫಲಿತವನ್ನು ಕೊಡಬಹುದೆಂದು ಕನಸಿನಲ್ಲಿಯೂ ಊಹಿಸಿರಲಿಲ್ಲ ತಾನು. ಈಗ ಮಾಡಿರುವುದೇನು? ಏನೂ ಮಾಡಲಾರದ ನಿಸ್ಸಹಾಯಕ ಸ್ಥಿತಿಯಲ್ಲಿ ಸಿಲುಕಿ ಹೀಗಾಗಿ ಹೋಯಿತಲ್ಲಾ ತನ್ನ ಬದುಕು!

ರಾಧಿಕಾ, ಅರಗಿಣಿ ಗಲಗಲನೆ ಮಾತನಾಡಿಕೊಳ್ಳುತ್ತಾ ಅವಳಿರುವಲ್ಲಿಗೆ ಬಂದರು. ಅವಳ ಗಲ್ಲದ ಮೇಲೆ ಇಳಿದಿದ್ದ ಕಣ್ಣೀರನ್ನು ನೋಡಿ,

"ಇನ್ನೂ ಅಳ್ತಿದೀಯೇನೇ? ಮರ್ತ್‌ಬಿಟ್ಟೆ ಅಂತಿದ್ಯಲ್ಲ. ಏನೂ ಉಪಯೋಗಿಲ್ಲ ಬಿಡು, ಕಣ್ಣಿನಾಗ ನೀರು ಸುರ್ಸಿ ವೇಸ್ಟ್..... ನಮ್ಹಾಂಗ ನಗ್‌ನಗ್ತಾ

ಇದ್ದಿ ಅಂದ್ರ ಎಂದಿಗಾದ್ರೂ ಸುಖಪಡ್ತಿ. ಬಾ, ಕೇರಮ್ ಆಡೋಣಂತೆ" ಎಂದು ಅವಳನ್ನು ಬಲವಂತವಾಗಿ ಎಬ್ಬಿಸಿ ಕಿವಿಯಲ್ಲಿ ಏನೋ ಹೇಳಿ ಅವಳ ಮುಖದಲ್ಲಿ ನಗೆಸೂಸುವಂತೆ ಮಾಡಿ ಎಳದೊಯ್ದರು.

ಹೌದು, ಅದೂ ನಿಜ. ಈಗೀಗ ತಾನು ಅಳುವುದನ್ನೇ ಮರೆತು ಬಿಟ್ಟಿದ್ದಾಳೆ. ಮೊದಲೆಲ್ಲಾ ಸದಾ ಕಣ್ಣೀರು ಹರಿಸುತ್ತಲೇ ಇದ್ದಳು. ಈಗ ರಾಜಾರಾಂನ ನೆನಪು ಕಣ್ಣೀರು ತರಿಸಿತ್ತೇ ವಿನಃ ಇಲ್ಲವಾದರೆ ಬರುತ್ತಿರಲಿಲ್ಲ. ಎಂತಹ ಬದುಕು ಯಾವ ರೀತಿಯ ತಿರುವನ್ನು ಕಂಡಿತ್ತು! ಆಲೋಚಿಸಲೂ ಭಯಪಡುವ ಬದುಕನ್ನು ಬದುಕಬೇಕಾಯಿತಲ್ಲ, ಅಯ್ಯೋ ದೇವರೇ.....

ಆದ್ದರಿಂದಲೇ ಭಾನುಮತಿ ಆಲೋಚಿಸುವುದನ್ನೇ ಬಿಡಬೇಕೆಂದು ಕೊಂಡಿದ್ದಳು. ಆ ದಿನದಿಂದ ಕಿಟಕಿಯ ಬಳಿ ಕುಳಿತುಕೊಳ್ಳುವುದನ್ನೇ ಕಡಿಮೆ ಮಾಡಿದ್ದಳು. ಸದಾ ಮಲಗಿ ನಿದ್ರಿಸುವುದನ್ನು ಅಭ್ಯಾಸ ಮಾಡಿಕೊಂಡಿದ್ದಳು. ನಿದ್ದೆ ಬಾರದೆ ಏನೂ ತೋಚದಾದಾಗ ಕನ್ನಡಿಯ ಮುಂದೆ ಕುಳಿತು ಅಲಂಕಾರ ಮಾಡಿಕೊಳ್ಳುತ್ತ ಕಾಲ ಕಳೆಯುತ್ತಿದ್ದಳು.

ಒಂದು ವಾರ ಕಳೆದಿತ್ತು. ಪ್ರತಿದಿನ ಯಾವುದೋ ಒಂದು ವಿಧದಲ್ಲಿ ಅದ್ಭುತವಾದ ಘಟನೆಯೇನಾದರೂ ನಡೆದು ತನಗೆ ವಿಮುಕ್ತ ದೊರೆಯುತ್ತದೆ ಯೆಂದು ಅಮಿತವಾದ ಆಶೆಯಿಂದ ನಿರೀಕ್ಷಿಸುತ್ತಿದ್ದಳು ಭಾನುಮತಿ. ಆದರೆ ಯಾವೊಂದು ಪ್ರತ್ಯೇಕತೆಯೂ ಇಲ್ಲದೆ ದಿನಗಳು ಉರುಳುತ್ತಿದ್ದವು. ಅದೇ ಬದುಕು! ಅದೇ ಆಶೆ, ನಿರಾಶೆ!!

ತನ್ನ ಮನೆಗೆ ಕಾಗದ ಬರೆಯಿರೆಂದು ಮತ್ತೊಂದು ಸಲ ಇನ್ಯಾರನ್ನೋ ಕೇಳಬೇಕೆನಿಸಿದರೂ ಕೇಳಲಿಲ್ಲ. ಈಗಾಗಲೇ ಐದಾರು ಜನರಿಗೆ ಹೇಳಿದ್ದಳು. ಅವರು ಖಂಡಿತ ಬರೆಯುತ್ತೇವೆಂದು ಹೇಳಿ ಅಡ್ರೆಸ್ ಸಹ ತೆಗೆದುಕೊಂಡಿದ್ದರು. ನಂಬದಿರಲು ಸಾಧ್ಯವೇ ಇಲ್ಲದ ರೀತಿಯಲ್ಲಿ ಹೇಳಿದ್ದರು. ಅವರನ್ನು ನಂಬಿ ಎಷ್ಟೋ ಗಾಳಿ ಗೋಪುರ ಕಟ್ಟಿದ್ದಳು. ತಮ್ಮ ಮನೆಯಿಂದ ಯಾವ ಕ್ಷಣದಲ್ಲಾದರೂ ಯಾರಾದರು ಬಂದೇ ಬರುವರೆಂದು ನಿರೀಕ್ಷಿಸುತ್ತಿದ್ದಳು. ಆದರೆ ಅವಳ ಆಶೆ ನಿರಾಶೆಯೇ ಆಗಿತ್ತು. ಹೀಗಾಗಿ ಮತ್ತೆ ಯಾರಿಗೂ ಹೇಳಬೇಕೆನಿಸಿರಲಿಲ್ಲ.

ಆದರೆ ಮತ್ತೂ ಮೂರು ದಿನ ಕಳೆದ ನಂತರ ಅಕಸ್ಮಾತಾಗಿ ಒಂದು ರಾತ್ರಿಯ ವೇಳೆಯಲ್ಲಿ ಬಾಗಿಲನ್ನು ದಬದಬನೆ ಬಡಿದ ಸದ್ದಾಯಿತು, ಆಗತಾನೇ ನಿದ್ದೆ ಹಿಡಿಯುತ್ತಿತ್ತು ಅವಳಿಗೆ. ಆ ಶಬ್ದಕ್ಕೆ ಗಾಬರಿ ಪಟ್ಟು ಮೇಲೆದ್ದು ಬಾಗಿಲು ತೆಗೆದಳು.

ಅವಳಿಗೆದುರಾಗಿ ಒಬ್ಬ ಪೋಲೀಸ್ ನಿಂತಿದ್ದ.

ಭಾನುಮತಿಗೆ ಆಶ್ಚರ್ಯವಾಯಿತು. ಅನಂತರ ಒಂದು ವಿಧವಾದ ಧೈರ್ಯ ಮನಸ್ಸನ್ನು ಆವರಿಸಿತು. ಪಂಜರದಿಂದ ಹೊರಬಿದ್ದ ಪಕ್ಷಿ ಪಟಪಟನೆ ರೆಕ್ಕೆಗಳನ್ನು ಬಡಿದುಕೊಂಡಂತೆ ಸಂತೋಷದಿಂದ ಅವಳ ಹೃದಯ ಹಗುರಾಯಿತು.

"ನಾ ಇಲ್ಲಿನವಳಲ್ಲರೀ, ಮೋಸ ಮಾಡಿ ತಂದಾರ ನನಗ" ಎಂದಳು ಸಾವರಿಸಿಕೊಂಡು.

"ಹೀಂಗಾದ್ರೆ ನಿಮ್ಹೆಸರು ಭಾನುಮತಿ ಅಂತರೇನು?"

"ಹೌದ್ರಿಯಪ್ಪಾ, ನನ್ನ ಹೆಸರು ಭಾನುಮತಿ, ರೈಲ್ನಾಗಿಂದಿಳಿದು ಬಂಧುಗಳು ಬರ್ತಾರಂತ ಕಾಯ್ತಿದ್ದಿನ್ರಿ. ಒಬ್ಬಾತ ಬಂದು ನಮ್ಮನೀಗೆ ಕರೆದೊಯ್ತೀನಂತ ನಂಬ್ಸಿ ಇಲ್ಲಿ ತಂದು ಹಾಕಿದನ್ರಿ. ತಪ್ಪಿಸಿಕೊಂಡು ಹೋಗೂಣಂದ್ರ....."

"ಆತು, ಅದಲ್ಲಾ ತಿಳಿದದ ನನಗೆ. ಇನ್ನ ನೀ ಏನ ಹೆದರಾ ಕೆಲಸಿಲ್ಲ ಒಳಗೆ ಯಾರಾ ಅದರೇನು?" ಎಂದು ಕೋಣೆಯೊಳಗೆ ಬಗ್ಗಿ ನೋಡಿದ ಪೋಲೀಸ್.

"ಯಾರೂ ಇಲ್ರೀ, ಹೊರಟ್ಹೋಗಿ ಭಾಳ ಸಮಯಾತ್ರಿ....."

ಅವಳನ್ನು ಹಾಲಿನೊಳಕ್ಕೆ ಕರೆತಂದ ಪೋಲೀಸ್, ಅಲ್ಲಿ ಎಸ್.ಪಿ. ಮತ್ತಿಬ್ಬರು ಪೋಲೀಸರೂ ಇದ್ದರು. ಅವರನ್ನ ನೋಡಿ ಭಾನುಮತಿಗೆ ಅಳು ಉಕ್ಕಿಬಂತು. ತಡೆಯಲಾರದೆ ಗಟ್ಟಿಯಾಗಿ ಅತ್ತುಬಿಟ್ಟಳು. ಎಸ್.ಪಿ. ಎಷ್ಟು ಸಮಾಧಾನ ಹೇಳಿದರೂ ಅವಳ ಅಳು ನಿಲ್ಲಲಿಲ್ಲ. ಮುದುಕ ಹೆಡ್‌ಕಾನ್‌ಸ್ಟೇಬಲ್ ನಿಧಾನವಾಗಿ ಅವಳಿಗೆ ಧೈರ್ಯ ಹೇಳಿ ಸುಮ್ಮನಾಗಿಸಿದ.

"ನೀ ಇನ್ನೇನ ಹೆದರಾ ಕೆಲಸಿಲ್ಲ, ಮುಂಜಾನೆ ನಿಮ್ಮ ತಂದಿ ಬರ್‍ತಾರ ನಿನ್ನ ಕರ್‍ಕಂಡ ಹೋಗ್ಲಿಕ್ಕ. ಮೂರು ದಿನ ಆತು ಅವರು ಕಂಪ್ಲೇಂಟ್ ಕೊಟ್ಟು, ಆಗ್ಲಿಂದ ಹುಡುಕಿಕ್ಹತ್ತಿದೀವಿ ನೋಡು. ಮೊನ್ನೆ ಚಟ್ಟಂತ ರೈಡ್ ಮಾಡಿದ್ರೂ ನಿನ್ ಪತ್ತಿ ಸಿಗ್ಲಿಲ್ಲ. ಸಿಕ್ಕಿದ ಮಂದೀಗೆ ನಿನ್ ಫೋಟೋ ತೋರಿಸಿದ್ರ ಆಗ ಗೊತ್ತಾತು ನೋಡು ನೀ ಇಲ್ಲಿದ್ದೀ ಅಂತ. ಅನಕಾ ನೀ ತುಂಬಾ ಅದೃಷ್ಟ ಮಾಡಿದ್ದಿ ಕಣವ್ವಾ. ನಿನ್ನ ಪತ್ತಿ ಇಷ್ಟ ಲಗೂನ ಹತ್ತದಂತೆ ನಾವೆಣಿಸಿರ್‍ಲಿಲ್ಲಾ ನೋಡು."

ರತ್ನಾಬಾಯಿಯನ್ನು ನೌಕರರನ್ನೂ ಅರೆಸ್ಟ್ ಮಾಡಿ ವ್ಯಾನ್ ಹತ್ತಿಸಿದರು. ಭಾನುಮತಿಯನ್ನು ತಮ್ಮೊಂದಿಗೆ ಕರೆದೊಯ್ದರು. ಆ ದಿನ ರಾತ್ರಿ ಕಂಟ್ರೋಲ್ ರೂಮಿನಲ್ಲಿರಿಸಿ ಮರುದಿನ ಅವರ ತಂದೆಗೆ ಒಪ್ಪಿಸುತ್ತೇವೆಂದರು.

ಆ ದಿನ ರಾತ್ರಿ ಕಂಟ್ರೋಲ್ ರೂಮಿನಲ್ಲಿ ಅವಳ ಕಣ್ಣ ರೆಪ್ಪೆ ಮುಚ್ಚಲಿಲ್ಲ. ಈ ಘಟನೆ ಅವಳನ್ನು ಒಂದು ವಿಧವಾದ ದಿಗ್ಭ್ರಾಂತಿಯಲ್ಲಿ ತಳ್ಳಿತ್ತು. ಇಷ್ಟು ದಿನ ಅವಳಿಗಿದ್ದ ಆಲೋಚನೆ ಒಂದೇ..... ಆ ಪಾಪಕೂಪದಿಂದ ಹೊರಬರುವುದು ಹೇಗೆಂದು. ಆದರೆ ತೀರಾ ಹೊರಬಂದ ಮೇಲೆ ನಾಲ್ಕು ಜನಕ್ಕೆ ತನ್ನ ಮುಖ ತೋರಿಸುವುದು ಹೇಗೆ? ಇನ್ನು ನನ್ನ ಪರಿಸ್ಥಿತಿ ಏನು? ಹೊರಜಗತ್ತಿನಲ್ಲಿ ತನ್ನ ಸ್ಥಾನ ಏನು ಎಂಬ ಆಲೋಚನೆಗಳು ಅವಳ ತಲೆಯ ತುಂಬಾ ತುಂಬಿಕೊಂಡು ಹುಳು ಕೊರೆದಂತೆ ಕೊರೆಯಲಾರಂಭಿಸಿದವು. ಬರಲಿರುವ ಮುಂಜಾನೆಗೆ ಮುಖ ತೋರಿಸಲು ನಾಚಿಕೆಯೆನಿಸತೊಡಗಿತ್ತು. ಏನೂ ನಡೆಯದಂತೆ, ಏನೂ ನಡೆಯಲೇ ಇಲ್ಲವೆಂಬಂತೆ ಸಹಜವಾಗಿ ಎಲ್ಲರೊಂದಿಗೆ ಬೆರೆಯಲು ಸಾಧ್ಯವೇ? ರಾಜಾರಾಮನ ಮುಂದೆ ತಲೆಯೆತ್ತಿ ನಿಲ್ಲುವುದು ಹೇಗೆ? ಕಿರುನಗೆಯೊಂದಿಗೆ ಮಾತನಾಡಿಸುವುದು ಹೇಗೆ?

ರಾತ್ರಿಯೆಲ್ಲಾ ರಾಜಾರಾಮನನ್ನು ಕುರಿತು ಆಲೋಚನೆಗಳು ಅವಳನ್ನು ಸುತ್ತುವರಿದು ಹಿಂಸಿಸಿದುವು. ಅವನಿಗೆ ಈ ವಿಷಯಗಳೊಂದೂ ತಿಳಿದಿರಲಾರದು. ಮತ್ತೊಂದು ಸಲ ಬೋರೆಂದು ಅತ್ತುಬಿಟ್ಟಳು. ತಂದೆ ಅವಳನ್ನು ಸಮಾಧಾನ ಪಡಿಸಿದರು. ರಾಜಾರಾಮ ಒಂದೆರಡು ಮಾಮೂಲು ಮಾತಲ್ಲದೆ ಹೆಚ್ಚಾಗಿ

ಮಾತನಾಡಲಿಲ್ಲ. ಭಾನುಮತಿ ತಲೆಯೆತ್ತಿ ಅವನ ಕಡೆ ನೋಡಲಾರದೆ ಹೋದಳು. ಅವಳೇ ಅಲ್ಲ, ಅವನೂ ಸಹ ಅವಳ ಕಡೆ ತಲೆಯೆತ್ತಿ ನೋಡಲಾರದೆ ಹೋದ.

ಮಾತಿನ ಮಧ್ಯೆ ತಂದೆ ಹೇಳಿದರು.

ಅವಳು ಬರೆಸಿದ ಕಾಗದ ಸೇರಿದ ಕೂಡಲೇ ಆತ ಹೊರಟು ಬಂದಿದ್ದರು. ನಾಲ್ಕು ದಿನ ತಾವೇ ಅವಳ ಇರುವಿಕೆಯನ್ನು ಕಂಡು ಹಿಡಿಯಲು ಪ್ರಯತ್ನಿಸಿ ವಿಫಲರಾಗಿ ಕಡೆಗೆ ರಾಜಾರಾಮನನ್ನು ಹುಡುಕಿಕೊಂಡು ಹೋಗಿದ್ದರು. ಅವನ ಸಲಹೆಯ ಮೇರೆಗೆ ಪೋಲೀಸ್ ಕಂಪ್ಲೇಂಟ್ ಕೊಟ್ಟಿದ್ದು ಕೂಡಾ. ಮೊದಲು ಹೋಟೆಲಲ್ಲಿ ಉಳಿದುಕೊಂಡಿದ್ದರೂ ಎರಡು ದಿನದ ಹಿಂದೆಯೇ ರಾಜಾರಾಮನ ಬಲವಂತದಿಂದಾಗಿ ಹೋಟೆಲ್ ರೂಮನ್ನು ಖಾಲಿಮಾಡಿ ರಾಜಾರಾಮನ ರೂಮಿಗೆ ನಿವಾಸ ಬದಲಿಸಿದ್ದರು.

ತಂದೆ ಆ ವಿಷಯಗಳನ್ನೆಲ್ಲಾ ಹೇಳುತ್ತಾ "ನನ್ನ ಸಲುವಾಗಿ ಭಾಳ ಶ್ರಮಾ ತಗೊಂಡಾನಾ ರಾಜಾರಾಮು. ಎರಡು ದಿನ ಸೂಟಿ ಹಾಕಬೇಕಾತು ನನ್ನ ಕೂಡಾ ತಿರುಗಲಿಕ್ಕೆ ಅಂತ. ಆತನ ಋಣ ನಮ್ಮ ಮೇಲೆ ಭಾಳಾ ಆಗೇತಿ ನೋಡು....." ಎಂದರು.

ನಿಸ್ಪೃಹತೆಯಿಂದ ನಕ್ಕಳು ಭಾನುಮತಿ. ಆತನ ಮೇಲೆ ಈಗ ಏರ್ಪಟ್ಟ ಅಭಿಮಾನದಲ್ಲಿ ಹತ್ತರಲ್ಲಿ ಒಂದು ಪಾಲಾದರೂ ಇದಕ್ಕೆ ಮುಂಚೆ ಇದ್ದಿದ್ದರೆ ತನ್ನ ಬದುಕು ಹೀಗಾಗುತ್ತಲೇ ಇರಲಿಲ್ಲ ಎನ್ನಿಸಿತವಳಿಗೆ. ತಾನೆಷ್ಟು ಬೇಡಿ ಕೊಂಡರೂ ಕೇಳದೆ ತನ್ನ ಮಾತೇ ನಡೆಯಬೇಕೆಂದು ತನ್ನ ತಂದೆ ಹಠ ಹಿಡಿದುಕೊಂಡಿದ್ದರಿಂದಲ್ಲವೇ ತಾನು ಮನೆ ಬಿಟ್ಟು ಹೊರಟು ಬಂದಿದ್ದು?

ಆ ದಿನ ತನ್ನ ಮಾತಿಗೆ ಸ್ವಲ್ಪವೂ ಬೆಲೆ ಕೊಡದ ತನ್ನ ತಂದೆ ಈ ದಿನ ಹೀಗೆ ಮಾತನಾಡುವುದನ್ನು ಕೇಳಿ ನಿಸ್ಪೃಹತೆಯಲ್ಲದೆ ಬೇರೆ ಭಾವನೆಯುಂಟಾಗಲು ಹೇಗೆ ಸಾಧ್ಯ? ಏನು ಮಾಡಲೂ ಸಾಧ್ಯವಾಗದ ಈ ನಿಸ್ಸಹಾಯ ಪರಿಸ್ಥಿತಿಯಲ್ಲಿ ತನ್ನ ಮೇಲೆ ತನಗೆ ಮರುಕವಲ್ಲದೇ ಮತ್ತೇನು ಅನಿಸಲು ಸಾಧ್ಯ?

ಮಗಳನ್ನು ಕರೆದುಕೊಂಡು ಆ ದಿನವೇ ಹೊರಟು ಹೋಗೋಣವೆಂದು ಕೊಂಡರು ತಂದೆ. ತಾನೇ ಒಂದು ದಿನ ಇದ್ದು ಹೋಗೋಣವೆಂದು ಹೇಳಿದ್ದಳು ಭಾನುಮತಿ. ಅದೂ ಅಲ್ಲದೆ ಆ ದಿನಕ್ಕೆ ರಿಸರ್ವೇಷನ್ ಸಹ ಸಿಕ್ಕಲಿಲ್ಲ. ಮರುದಿನಕ್ಕೆ ಟಿಕೆಟ್ ಕೊಂಡಿದ್ದರು.

ರಾಜಾರಾಮನ ಕೋಣೆ ತುಂಬಾ ಚಿಕ್ಕದೇನಲ್ಲ. ಆದರೂ ಮೂರು ಜನ ಮಲಗಲು ಅನುಕೂಲವಾಗಿರಲಿಲ್ಲ. ಮೇಲೆ ಬಿಸಿಲು ಮಚ್ಚು ಇತ್ತಾಗಲೀ ಚಳಿಗಾಲವಾದ್ದರಿಂದ ಅಲ್ಲಿ ಮಲಗುವುದು ಸಾಧ್ಯವಿರಲಿಲ್ಲ. ಅಲ್ಲಿದ್ದ ನಾಲ್ಕು ಪೋರ್ಷನ್‌ಗಳವರಿಗೆ ಓಡಾಡಲು ಸಣ್ಣ ಹಾದಿಯಂತಹ ವರಾಂಡ ಇತ್ತು. ರಾತ್ರಿ ಹತ್ತು ಗಂಟೆ ದಾಟಿದರೆ ಅಲ್ಲಿ ಓಡಾಟವಿರುತ್ತಿರಲಿಲ್ಲ. ತನ್ನ ಹಾಸಿಗೆ ಅಲ್ಲಿ ಹಾಕಿಕೊಳ್ಳೋಣ ಅಂದುಕೊಂಡ ರಾಜಾರಾಂ.

ಹೋಟೆಲಿನಿಂದ ಕ್ಯಾರಿಯರ್ ತಂದು ಊಟಮಾಡಿ ಮುಗಿಸುವ ವೇಳೆಗೆ ಗಂಟೆ ಒಂಭತ್ತಾಗಿತ್ತು. ಇನ್ನೊಂದು ಗಂಟೆಯವರೆಗೂ ಮಲಗುವಂತಿರಲಿಲ್ಲ. ಆದ್ದರಿಂದ ಸ್ವಲ್ಪ ಹೊತ್ತು ತಿರುಗಾಡಿ ಬರೋಣವೆಂದು ಮೇಲೆ ಹೋದ ರಾಜಾರಾಮ. ಭಾನುಮತಿ, ಅವಳ ತಂದೆ ಮಲಗಿದರು. ಆತನಿಗೆ ಬೇಗನೆ ನಿದ್ರೆ ಬಂದಿತು. ಅವಳಿಗೆ ಮಾತ್ರ ನಿದ್ದೆ ಹಿಡಿಯಲಿಲ್ಲ. ತಂದೆ ಗೊರಕೆ ಹೊಡೆಯುವವರೆಗೂ ಸುಮ್ಮನಿದ್ದು ನಂತರ ಎದ್ದು ತಾನೂ ಮೆಟ್ಟಿಲು ಹತ್ತಿ ಬಿಸಿಲು ಮಚ್ಚಿಗೆ ಹೋದಳು.

ಗೋಡೆಯಿಂದ ಕೆಳಗೆ ನೋಡುತ್ತಾ ನಿಂತ ರಾಜಾರಾಮ ಅವಳ ಹೆಜ್ಜೆಯ ಸದ್ದನ್ನು ಕೇಳಿ ತಿರುಗಿ ನೋಡಿ ಗುರ್ತು ಹಿಡಿದು "ಯಾಕ ನಿದ್ದಿ ಹತ್ತಿಲ್ಲೇನು?" ಎಂದು ಕೇಳಿದ.

"ನಿದ್ದಿ ಮಾತ ಹಂಗಿರ್ಲಿ, ನಿನ್ನ ಕೂಡಾ ಮಾತಾಡೋದಿತ್ತು, ಹಾಗಂತ ಬಂದೀನಿ."

ಅಲ್ಲಿ ಕತ್ತಲು ಆವರಿಸಿತ್ತು. ಆಕಾಶದ ಬೆಳಕಿನಲ್ಲಿ ಆಕಾರಗಳು ಅಸ್ಪಷ್ಟವಾಗಿ ಕಾಣಿಸುತ್ತಿದ್ದವು. ಅವರಿಬ್ಬರೂ ಮೋಟುಗೋಡೆಯ ಬಳಿ ನಿಂತಿದ್ದರು.

"ಆ ದಿವಸ ನೀ ಸ್ಟೇಷನ್ನಿಗ ಬರಲಿಲ್ಲ ಯಾಕ?"

"ಯಾವ ದಿವಸ?" ಅವಳ ಕಡೆ ತಿರುಗಿ ಕೇಳಿದ ರಾಜಾರಾಂ.

"ಅದೇ ನಾ ಈ ಊರಿಗೆ ಬಂದೀನಲ್ಲ..... ಆ ದಿವಸ."

"ನೀ ಬರ್ತೀ ಅಂತ ನನಗ ಹ್ಯಾಂಗ ತಿಳೀಬೇಕಂತ?"

"ಪತ್ರ ಬರೆದೀನಲ್ಲಾ....."

"ಪತ್ರಾ! ಎಲ್ಲೀ ಪತ್ರ? ನಂಗೇನೂ ಬಂದಿಲ್ಲ. ಮತ್ತ ವಿಳಾಸ ಸರ್‍ಯಾಗ ಬರಿದೀಯೇನು?"

ಒಂದುಕ್ಷಣ ಭಾನುಮತಿಯ ಕಂಠ ಬಿಗಿದು ಬಂದಿತ್ತು. ಆನಂತರ ಕ್ಷೀಣ ಕಂಠದಲ್ಲಿ 'ಇದಕ ಮುಂದಾ ನಾ ಎಷ್ಟು ಪತ್ರ ಬರೆದಿಲ್ಲ ನಿನಗ? ಅವೆಲ್ಲಾ ಸೇರದ, ಇದೊಂದು ಮಾತ್ರ ಸೇರಲಿಲ್ಲ ಅಂತಿಯೇನು?" ಎಂದಳು. ಮತ್ತೂ ಒಂದು ಕ್ಷಣ ನಿಧಾನಿಸಿ "ಎಷ್ಟು ಹಗೂರ ಸುಳ್ಳು ಹೇಳ್ತೀ. ಆ ಪತ್ರ ಸೇರಲಿಲ್ಲ ನಿನಗ? ಖರೆ ಹೇಳು ರಾಜೂ" ಎಂದಳು ಮೃದುವಾಗಿ.

"ಇಲ್ಲ" ಎಂದ ರಾಜಾರಾಮ.

"ಆಹಾ, ಈ ತಪ್ಪು ನಿನ್ನಮ್ಯಾಲ ಬರಬಾರದಂತ ಆರಾಮಾಗಿ ಸುಳ್ಳು ಹೇಳ್ತಿದೀ. ಆ ಪತ್ರ ನನ್ನ ಕಣ್ಣಿಗೆ ಬೀಳದಿದ್ರ ನಿನ್ನ ಮಾತ್ನ ನಂಬ್ತಿದ್ನೋ ಏನೋ. ನೀ ಹೊರಗೆ ಹೊರಟಾಗ ನಿನ್ನ ಅಲಮಾರದಾಗ ಆ ಪತ್ರ ಸಿಕ್ತು." ಭಾನುಮತಿಯ ಕಂಠ ನಡುಗಿತು.

ರಾಜಾರಾಮ ಮೌನವಾಗಿ ಸಿಗರೇಟ್ ಹಚ್ಚಿದ. ದಂ ಎಳೆದಾಗ ಅವನ ಮುಖ ರಕ್ತ ಹೆಚ್ಚಿದಂತೆ ಕೆಂಪಗೆ ಉರಿಯುತ್ತಿತ್ತು.

"ಆ ದಿವಸ ನೀನು ಬೇಕಂತ ಸ್ಟೇಷನ್ನಿಗೆ ಬರಲಿಲ್ಲ ಹೌದಲ್ಲೋ?" ಎಂದಳು.

"ಹೌದು..... ಬೇಕಂತಾ ಬರಲಿಲ್ಲ. ಅದಕ್ಕೇನ ಮಾಡಂತಿ ನನಗ?" ಎಂದ.

ಭಾನುಮತಿ ಅದಕ್ಕೆ ಉತ್ತರ ಹೇಳದೆ "ರಾಜೂ, ಅಪ್ಪಾ ಈ ದಿವಸಾನೆ ಊರಿಗೆ ಹೊರಡೋಣಾಂದ್ರು. ಆದ್ರೆ ನಾಳೆ ಹೋಗೋಣಂತ ನಾನೇ ತಡೆದೀನಿ. ಯಾಕಂತ ತಿಳಿದ? ಹೊರಡಾಕ ಮುಂದ ನಿನ್ನ ಹತ್ರ ಮಾತಾಡೋದಿತ್ತು..... ಅಂದ್ರ ನನ್ನ ಹೊರಡಂತೀಯಾ..... ಇರು ಅಂತೀಯಾ" ಎಂದು ಕೇಳಿದಳು.

"ಇಲ್ಲಿದ್ದು ಮಾಡೋದಾದರ ಏನದ? ಹೊರಡೋದ ಸರಿ."

"ನಿನ್ನ ಹಾಗ ಅಷ್ಟು ಸುಲಭದಾಗ ಮನಸ್ಸು ಬದಲಾಯಿಸಕ್ಕಾಗದು ನನಗ. ನಿನ್ನ ಬೇಡಿಕೊಂಡಾದರೂ ನಿನ್ನ ಬಳೀನೇ ಇರೋಣಾಂತ ಮಾಡಿದೀನಿ....."

"ನನ್ ಹತ್ರ ಇರೋಣಾಂತ ಮಾಡೀಯ ನೀನು? ಅದ್ಹೆಂಗೆ ಆಗ್ತದ? ಇಷ್ಟೆಲ್ಲ ಕತಿ ನಡೆದ ಮ್ಯಾಲ ನಾನಾರ ನಿನ್ನ ಹೆಂಗ ಮದ್ವಿ ಆಗ್ಲಿಕ್ ಸಾಧ್ಯ ಅದ?"

"ನೀ ಹೇಳಿದರಾಗ ಅರ್ಥ ಅದ, ಇಲ್ಲ ಅನ್ಲಿಲ್ಲ ನಾನು. ಆದ್ರ ನನ್ನ ಕಡಿಂದ ತುಸು ಆಲೋಚಿಸಂತ ಬೇಡ್ತಾ ಇದೀನಿ. ನನ್ನ ಮದವೀನ ಬೇರೆ ಯಾರ ಕೂಡಾನೋ ಅಪ್ಪ ನಿಶ್ಚಯ ಮಾಡ್ದಾಗ ನಿನಗ ಪತ್ರ ಬರದರ ನೀ ಏನ ಉತ್ತರ ಕೊಟ್ಟಿ ನೆನಪಿಲ್ಲೇನು ನಿನಗ? ನೀ ಬಾ ಅಂತ ಬರಿದಿ ಅಂತ ಅಲ್ಲೇನು ನಾ ಹೊರಟು ಬಂದದ್ದು? ನಿನ್ನ ನಂಬಿ, ನಿನ್ನ ಪ್ರೀತಿನ ನಂಬಿ ಧೈರ್ಯವಾಗಿ ಮನೆಬಿಟ್ಟು ಹೊರಟು ಬಂದೀನಿ, ನೀ ಬರದಾಂಗ ಆ ದಿನ ಸ್ಟೇಷನ್‌ಗೆ ನೀ ಬಂದಿದ್ರ ಇಷ್ಟೆಲ್ಲ ಆಗತಿತ್ತೇನು.....?"

"ಅಂದ್ರ, ಅದು ನನ್ನ ತಪ್ಪಂತಿಯೇನು?" ರಾಜಾರಾಮ ಬೇಸರದಿಂದ ನುಡಿದ. "ಇದು ನೋಡು ಭಾನೂ, ನಿನ್ನ ಮನಸ್ಗೆ ನೋವಾಗತ್ಯೆತಿ ನಾನು ಹೀಗಂದರ..... ಆದ್ರ ಒಂದು ಮಾತು ಹೇಳಲೇಬೇಕಾಗದ. ಏನಂದ್ರ ಎಂಜಲು ಕೂಳಿಗೆ ಕೈಚಾಚೋ ಮನಿಷಾ ಅಲ್ಲ ನಾನು."

ಭಾನುಮತಿ ಅಳುತ್ತಿದ್ದಳು. ಬಿಕ್ಕಳಿಗೆ ಕೇಳಿ ಬರುತ್ತಿತ್ತು. ರಾಜಾರಾಂ ತನಗೇನು ಸಂಬಂಧವಿಲ್ಲದವನಂತೆ ಗೋಡೆಯ ಮತ್ತೊಂ[illegible] [illegible]ನೆಯಲ್ಲಿ ಹೋಗಿ ನಿಂತು ದೂರದಲ್ಲಿ ಕಾಣುವ ದೀಪಗಳನ್ನು ನೋ[illegible]ದ.

ಹತ್ತು ನಿಮಿಷ ನಿಶ್ಯಬ್ದವಾಗಿ ಅಳುತ್ತಿದ್ದ ಭಾನುಮತಿ ನಂತರ ತನ್ನನ್ನು ತಾನು ಸಂಭಾಳಿಸಿಕೊಂಡು ಕಣ್ಣೊರೆಸಿಕೊಂಡು ರಾಜಾರಾಮನ ಬಳಿಗೆ ಬಂದಳು. ಅವನು ಕೂಡಲೇ ಅಲ್ಲಿಂದ ಸರಸರನೇ ಕೆಳಕ್ಕಿಳಿದು ಹೋದ.

ಕೆಲಕ್ಷಣಗಳ ನಂತರ ಅವಳೂ ಕೆಳಗಿಳಿದು ಬಂದಳು. ಅಷ್ಟು ಹೊತ್ತಿಗಾಗಲೇ ಅವನು ಹಾಸಿಗೆ ತೆಗೆದುಕೊಂಡು ವರಾಂಡದೊಳಕ್ಕೆ ಹೊರಟು ಹೋಗಿದ್ದ.

ಭಾನುಮತಿ ಕೋಣೆಯೊಳಕ್ಕೆ ಹೋಗಿ ಬಾಗಿಲನ್ನು ಹಾಕಿಕೊಂಡಳು. ಒಂದು ಗಂಟೆಯ ನಂತರ ಅದೇ ಬಾಗಿಲನ್ನು ತೆರೆದು ಹೊರಗೆ ಬಂದಳು. ಮತ್ತೆ ಒಳಕ್ಕೆ ಹೋಗಲಿಲ್ಲ.

ಬೆಳಗಾಗ ಅವಳು ಹೊರಟು ಹೋಗಿದ್ದಾಳೆಂಬ ವಿಷಯ ರಾಜಾರಾಮನಿಗೇ ಮೊದಲು ಗೊತ್ತಾದದ್ದು. ಕೈಯಲ್ಲಿದ್ದ ವಾಚ್ ತೆಗೆದು ಒಳಗಿಡೋಣವೆಂದು ಹೋದಾಗ ಖಾಲಿ ಹಾಸಿಗೆ ಕಾಣಿಸಿತು. ತಟ್ಟನೇ ಲೈಟು ಹಾಕಿದ. ಮೇಜಿನ ಮೇಲೆ ಸ್ಪಷ್ಟವಾಗಿ ಕಾಣುವಂತೆ ಕಾಗದವೊಂದಿತ್ತು.

"ಅಪ್ಪಾ, ನಿಮ್ಮ ಜೊತೆ ಊರಿಗೆ ಬರಲಾರೆ. ಸೋತ ನಂತರ ಯಾವ ಮುಖ ಇಟ್ಟುಕೊಂಡು ಬರಲಿ? ನನ್ನನ್ನು ಹುಡುಕಬೇಡ, ನಾನು ಸಾಯುವುದಿಲ್ಲ. ಬದುಕುವುದಕ್ಕೆ ಒಂದು ದಾರಿ ಹುಡುಕಬೇಕಲ್ಲ! ಎಂದಾದರೂ ನನ್ನಿಂದ ಮನಿಯಾರ್ಡರ್ ಬಂದರೆ ವಾಪಸ್ಸು ಕಳುಹಿಸೋಲ್ಲ ತಾನೆ? ಅಮ್ಮನಿಗೆ ನಮಸ್ಕಾರ ತಿಳಿಸು ಭಾನುಮತಿ."

ರಾಜಾರಾಮನ ಮನಸ್ಸಿನ ಮೂಲೆಯಲ್ಲಿ ಚುಚ್ಚಿದಂತೆನಿಸಿತು. ತನಗೇನಾದರೂ ಕಾಗದ ಬರೆದಿದ್ದಾಳೇನೋ ಎಂದು ಹುಡುಕಿದ, ಕಾಣಲಿಲ್ಲ. ಟೇಬಲ್ಲಿನ ಕೆಳಗೆ ಸಿಟ್ಟಿನಿಂದ ಮುದುಡಿ ವುಂಡೆ ಮಾಡಿ ಎಸೆದ ತನ್ನ ಫೋಟೋ ಮಾತ್ರ ಕಾಣಿಸಿತು..... ಅಷ್ಟೆ.....



# ಅರುಂಧತಿ

ಮೂಲ : ಶ್ರೀ ಆನಂದ ರಾಮಂ

"ಇಪ್ಪತ್ತೈದು ಸಾವಿರ ವರದಕ್ಷಿಣೆ ಕೊಡುತ್ತಾರಂತೆ. ಹೆಣ್ಣಿನ ಕಡೆಯವರು ಆತುರ ಮಾಡುತ್ತಿದ್ದಾರೆ. ಮಾಡಿಕೊಳ್ಳುತ್ತೀಯೇನು?"

ನಿಶ್ಚೇಷ್ಟಿತನಾಗಿ ನಿಂತುಬಿಟ್ಟ ಪ್ರಭಾಕರ.

ತನ್ನ ತಾಯಿಯೇ ಮಾತನಾಡುತ್ತಿದ್ದಾರೆ ಎಂಬ ಸತ್ಯವನ್ನು ಒಂದು ಕ್ಷಣ ನಂಬಲಾಗಲಿಲ್ಲ ಅವನಿಗೆ. ತನ್ನನ್ನು ಪರೀಕ್ಷಿಸಲು ಹೇಳುತ್ತಿಲ್ಲವಷ್ಟೆ!

"ನೀನೂ ವರದಕ್ಷಿಣೆ ತಗೋ ಅಂತಲೇ ಹೇಳ್ತೀಯೇನಮ್ಮ?" ಅಭಿಪ್ರಾಯ ಹೊರಗೆಡವದೆ ಪ್ರಶ್ನಿಸಿದ ಪ್ರಭಾಕರ.

"ಆದರ್ಶ, ಆಶಯ ಇದೆಲ್ಲಾ ಬರೀ ಬಾಯಿ ಮಾತಪ್ಪ. ವ್ಯವಹಾರಕ್ಕಿಳಿದಾಗ ಯಾರಿಗಾದರೂ ಬೇಕಾಗುವುದು ಹಣ ಒಂದೇ. ನಿನ್ನ ಅಭಿಪ್ರಾಯ ಹೇಳು."

ಪ್ರಭಾಕರ ನಂಬಲಾರದೆ ತಾಯಿಯ ಮುಖ ನೋಡಿದ. ಆದರೆ ಗಂಭೀರವಾಗಿ, ನಿರ್ವಿಕಾರವಾಗಿದ್ದ ಆ ಮುಖದಲ್ಲಿ ಅವನು ಯಾವ ಭಾವವನ್ನೂ ಅರಿಯಲಾರದಾದ.

"ಹುಡುಗಿ ಯಾರಮ್ಮಾ?"

"ಅದೆಲ್ಲಾ ನಿನಗೇಕೆ?..... ಇಪ್ಪತ್ತೈದು ಸಾವಿರ ರೂಪಾಯಿ ಎಣಿಸಿ ಕೊಳ್ಳುವಾಗ ಮಿಕ್ಕ ವಿವರಗಳನ್ನು ಕೇಳುವ ಅಧಿಕಾರ ನಿನಗಿಲ್ಲ. ಅಷ್ಟು ಹಣ ಬೇಕೋ, ವಿವರ ಬೇಕೋ ಹೇಳು."

ಪ್ರಭಾಕರ ಪೆಚ್ಚಾದ. ಸಂದೇಹದಿಂದ ತಾಯಿಯ ಕಡೆ ನೋಡುತ್ತಾ "ನನ್ನನ್ನು ತಮಾಷೆ ಮಾಡ್ತಿದ್ದೀಯೇನಮ್ಮಾ?" ಎಂದ.

"ಇಲ್ಲಪ್ಪಾ, ನಿಜವಾಗಿಯೇ ಹೇಳುತ್ತಿದ್ದೇನೆ. ನಿನಗೆ ಇಪ್ಪತ್ತೈದು ಸಾವಿರ ಬೇಕಾಗಿದ್ದರೆ ಹೇಳು. ಮುಂದಿನ ವಾರದಲ್ಲಿಯೇ ಮುಹೂರ್ತ ನಿಶ್ಚಯ ಮಾಡಿಕೊಳ್ಳಬಹುದು. ಹಣ ಮೊದಲೇ ನಿನಗೆ ಕೊಡುತ್ತಾರೆ. ಹುಡುಗಿಯನ್ನು ಕುರಿತ ವಿವರಗಳು ಹೇಗೂ ನಂತರ ಗೊತ್ತಾಗೇ ಆಗುತ್ತೆ. ಹುಡುಗಿಯ ವಿವರಗಳೇ ಮುಖ್ಯ ಅನ್ನುವ ಹಾಗಿದ್ದರೆ ಈ ಸಂಬಂಧದ ಯೋಚನೆ ಬಿಡು, ವಿವರ ತಿಳಿದ ಹುಡುಗಿಯನ್ನೇ ಮಾಡಿಕೊಳ್ಳುವಿಯಂತೆ" ಗಂಭೀರವಾಗಿ ಹೇಳಿದಳು ಅರುಂಧತಿ.

"ಏನಮ್ಮಾ ಇದು ಕತೆಗಳಲ್ಲಿ ನಡೆಯುವ ಹಾಗೆ....." ಎಂದು ಹಾಸ್ಯದಲ್ಲಿ ಮಾತು ಮುಗಿಸಲು ಪ್ರಯತ್ನಿಸಿದ ಪ್ರಭಾಕರ. ಆದರೆ ಅರುಂಧತಿ ನಗಲಿಲ್ಲ, ದೀರ್ಘವಾಗಿ ನಿಟ್ಟುಸಿರುಬಿಟ್ಟಳು. "ಹೌದಪ್ಪಾ, ನಮ್ಮಂತಹವರು ಇರುವುದರಿಂದಲೇ ಕತೆಗಳ ಸೃಷ್ಟಿ ಸರಿ. ನಿನ್ನ ಅಭಿಪ್ರಾಯ ಹೇಳು" ಎಂದಳು.

ಇದು ಹಾಸ್ಯದ ಮಾತಲ್ಲವೆಂದು ಖಚಿತಪಡಿಸಿಕೊಂಡ ಪ್ರಭಾಕರ,

"ನಿನ್ನ ಇಷ್ಟದಂತೆಯೇ ಮಾಡಮ್ಮ. ನಿನ್ನ ಮಾತಿಗೆಂದಾದರೂ ಎದುರಾಡಿದ್ದೇನೆಯೇ?"

"ತುಂಬಾ ಸಂತೋಷ ಮಗೂ, ನಿನ್ನಂತಹ ಮಗನನ್ನು ಪಡೆದ ನಾನೇ ಧನ್ಯೆ" ಎಂದ ಅರುಂಧತಿಯ ಕಂಠದಲ್ಲಿ ಅಣುಮಾತ್ರವೂ ಸಂತೋಷ ಧ್ವನಿಸಲಿಲ್ಲ. ಕಣ್ಣಿನಲ್ಲಿ ಚಿಂತೆಯ ನೆರಳು ಮೂಡಿತ್ತು. ಆಶ್ಚರ್ಯದಿಂದ ಅವಾಕ್ಕಾದ ಪ್ರಭಾಕರ.

ಆದರೂ ಅವನ ಮನಸ್ಸು ಆನಂದಾತಿರೇಕದಿಂದ ಬಿರಿಯುವಂತಾಗಿತ್ತು. ಇಪ್ಪತ್ತೈದು ಸಾವಿರ! ಒಂದು ಹುಡುಗಿಯ ಕುತ್ತಿಗೆಗೆ ತಾಳಿ ಬಿಗಿದು, ಅವಳ ಮೇಲೆ ಸರ್ವ ಹಕ್ಕು ಸಂಪಾದಿಸಲು ಇಪ್ಪತ್ತೈದು ಸಾವಿರ.

ಕಾರ್ಯೇಷು ದಾಸಿ – ಭಲಾ, ಭಲಾ!

ಕರುಣೇಷು ಮಂತ್ರಿ – ತಾನು ಮಾಡಬೇಕಾದ ರಾಜಕಾರ್ಯಗಳೇನಿದೆ? ಮಂತ್ರಿ ಬೇಕಾಗೇ ಇಲ್ಲ.

ಶಯನೇಷು ರಂಭಾ – ರಂಭೆಯಾದರೇನು ಆಗದಿದ್ದರೇನು? ಹೇಗಿದ್ದರೂ ಒಂದೇ.

ಹುಡುಗಿ ಎಂತಹವಳಾದರೇನು? ವಿವರ ತಿಳಿದು ತಾನೇನು ಮಾಡ ಬೇಕಾಗಿದೆ? ಮದುವೆಗೂ ತನ್ನ ಜೀವನದ ಆನಂದಕ್ಕೂ ಸಂಬಂಧವೇನು? ಹಿಂದೂ ಸಮಾಜ ಗಂಡಸರಿಗೆ ಅವರ ಆನಂದವೆಲ್ಲಾ ಮದುವೆಯಲ್ಲೇ ಮುಕ್ತಾಯವಾಗಬೇಕೆಂದು ವಿಧಿಸುವುದಿಲ್ಲ. ಮದುವೆ ಲಾಭ ತರುವ ವ್ಯವಹಾರ. ಪ್ರತ್ಯೇಕವಾಗಿ ಹಣ ಸಂಪಾದಿಸಿಕೊಡುವ ಒಳ್ಳೆಯ ಸಂಘಾಚಾರ..... ಇದು ಅವನ ಅಭಿಪ್ರಾಯ. ಆದರೆ ತಾಯಿಯ ವರ್ತನೆಯೇ ಅವನಿಗೆ ಆಶ್ಚರ್ಯಕರವಾಗಿ ಕಾಣಿಸಿತ್ತು.

ಚಿಕ್ಕಂದಿನಿಂದಲೂ ಅರುಂಧತಿಯ ಮಕ್ಕಳು ತಾಯಿಯ ಕಣ್ಣಸ್ನೆಯಲ್ಲೇ ಬೆಳೆದು ಬಂದಿದ್ದರು. ತಂದೆ ಸದಾ ಆಫೀಸು, ತಪ್ಪಿದರೆ ಸ್ನೇಹಿತರೊಂದಿಗೆ ಕಾಲ ಕಳೆಯುತ್ತಿದ್ದುದರಿಂದ ಮಕ್ಕಳ ಪಾಲನೆ – ಪೋಷಣೆ ಅರುಂಧತಿಯದೇ ಆಗಿತ್ತು. ಅರುಂಧತಿ ಸಂತೋಷದಿಂದ ಆ ಹೊಣೆ ಹೊತ್ತಿದ್ದಳು. ಮಕ್ಕಳಿಗೆ ತಾಯಿಯ ಹತ್ತಿರ ಎಷ್ಟು ಸಲಿಗೆ ಇತ್ತೋ ಅಷ್ಟೇ ಗೌರವವೂ ಇತ್ತು. ಶ್ರದ್ಧಾಭಕ್ತಿಗಳಿದ್ದುವು. ಚಿಕ್ಕಂದಿನಲ್ಲೆ ಅವರಿಗೆ ತಾಯಿಯ ಬಳಿ ಹಠ ನಡೆಯದೆಂದು ಗೊತ್ತಾಗಿತ್ತು.

ಚಾಕಲೇಟ್ ಬೇಕೆಂದು ಗಲಾಟೆ ಮಾಡಲು ಧೈರ್ಯವಿತ್ತು. ಅವರಿಗೆ ಆದರೆ ಪಾಠ ಓದದೆ ಹೋಮ್‌ವರ್ಕ್ ಮಾಡದೆ ಆಡಿಕೊಳ್ಳಲು ಹೋಗುತ್ತೇವೆನ್ನುವ ಸಾಹಸ ಇರಲಿಲ್ಲ.

ಕಥೆ ಹೇಳೆಂದು ಪೀಡಿಸಬಲ್ಲರು..... ಆದರೆ ದೊಡ್ಡವರ ಮಾತಿನ ಮಧ್ಯೆ ಬಾಯಿ ಹಾಕುತ್ತಿರಲಿಲ್ಲ. ಏನು ಬೇಕಾದರೂ ನಿರ್ಭಯವಾಗಿ ಕೇಳಬಲ್ಲರು. ಆದರೆ ಸುಳ್ಳಾಡುವ ಸಾಹಸವಿರಲಿಲ್ಲ.

ಮಕ್ಕಳು ತನ್ನ ವ್ಯಕ್ತಿತ್ವದ ನೆರಳಾಗದೆ ಅವರ ಸಹಜ ವ್ಯಕ್ತಿತ್ವಗಳನ್ನು ವಿಕಸಿಸುವಂತೆ ಮಾಡಲು ಅರುಂಧತಿ ಮೊದಲಿನಿಂದಲೂ ಪ್ರಯತ್ನಿಸಿದ್ದಳು.

ಪ್ರಭಾಕರ ಡಾಕ್ಟರರಾಗಬೇಕೆಂಬುದು ಅವಳ ಆಸೆಯಾಗಿತ್ತು. ಆದರೆ ಪ್ರಭಾಕರ 'ನನಗದರಲ್ಲಿ ಆಸಕ್ತಿಯಿಲ್ಲ. ನಾನು ಇಂಜಿನಿಯರಿಂಗ್ ಓದುತ್ತೇನೆ' ಎಂದಾಗ ಅರುಂಧತಿ ಅಡ್ಡಿ ಮಾಡಲಿಲ್ಲ.

ಗಂಡು ಮಕ್ಕಳೊಂದಿಗೆ ಸಮಾನವಾಗಿ ಹೆಣ್ಣು ಮಕ್ಕಳನ್ನೂ ಓದಿಸಬೇಕೆಂಬ ಅಭಿಪ್ರಾಯದಿಂದ ಮಾಲತಿಯನ್ನೂ ಕಾಲೇಜಿಗೆ ಸೇರಿಸಿದ್ದಳು. ಎರಡು ದಿನಕ್ಕೇ ಮಾಲತಿ ಬೇಸರದಿಂದ "ನನಗೆ ಬೇಜಾರಮ್ಮ, ಸಂಗೀತ ಕಲಿಯುತ್ತೀನಿ" ಎಂದಾಗ ಮನೆಗೇ ಸಂಗೀತದ ಮೇಷ್ಟ್ರರನ್ನು ಕರೆಸಿ ಸಂಗೀತ ಹೇಳಿಸ ತೊಡಗಿದಳು.

ಪ್ರಭಾಕರನಿಗೆ ಹೆಣ್ಣು ಕೊಡಲು ಕನ್ಯಾಪಿತೃಗಳು ಎಡತಾಕ ತೊಡಗಿದರು.

"ವರದಕ್ಷಿಣೆಯ ಮಾತೆತ್ತಬೇಡಿ, ನಮ್ಮ ಹುಡುಗನಿಗೆ ಹಣ ಮುಖ್ಯವಲ್ಲ. ಹುಡುಗಿ ಅವನ ಮನಸ್ಸಿಗೆ ಬಂದರೆ ಸಾಕು, ನಾವು ಹುಡುಗಿಯನ್ನು ನೋಡಬೇಕಾದ್ದೆ ಇಲ್ಲ" ಎಂದು ಅವರೊಂದಿಗೆ ಹೇಳುತ್ತಿದ್ದ ತಾಯಿಯನ್ನು ಆಶ್ಚರ್ಯದಿಂದ ನೋಡಿದ ಪ್ರಭಾಕರ. ಇಂಜಿನಿಯರಿಂಗ್ ಕಾಲೇಜಿನಲ್ಲಿ ಸೇರಿದ ಮೇಲೆ ಪ್ರಭಾಕರ ಸ್ವಲ್ಪ ಸ್ವಲ್ಪವಾಗಿ ತಾಯಿಯ ಪ್ರಭಾವ ವಲಯದಿಂದ ದೂರವಾಗ ತೊಡಗಿದ್ದ. ಅವನು ತನ್ನ ಬಾಧ್ಯತೆಯ ಹೊಣೆ ವಹಿಸಬಲ್ಲನೆಂದು ತಿಳಿದ ನಂತರ ಅರುಂಧತಿ ಎಲ್ಲಾ ವಿಷಯಗಳಲ್ಲೂ ಅವನಿಗೆ ಸ್ವಾತಂತ್ರ್ಯ ಕೊಟ್ಟಿದ್ದಳು. ಮೊದಲಿನಿಂದಲೂ ತಾಯಿಯ ಸುಶಿಕ್ಷಣದಲ್ಲಿ ಬೆಳೆದ ಅವನಿಗೆ ಓದಿನಲ್ಲಿ ಹಿಂದುಳಿಯುವ ಅವಕಾಶ ಬರದಿದ್ದರೂ, ಸ್ನೇಹಿತರ ಬಳಗ ಮಾತ್ರ ಹೆಚ್ಚಾಯಿತು. ಅದೇ ತಾನೇ ಯೌವನದಲ್ಲಿ ಅಡಿಯಿಡುತ್ತಿದ್ದ ಅವನಿಗೆ ಹೆಣ್ಣು, ಪ್ರಣಯ, ವಿವಾಹ ಮೊದಲಾದ ವಿಷಯಗಳಲ್ಲಿ ವಿಚಿತ್ರವಾದ ಅಭಿಪ್ರಾಯಗಳು ಬೇರೂರಿದವು. ಆ ವಿಷಯದಲ್ಲಿ ತಾಯಿಯ ಪ್ರಭಾವ ಬೀರುವ ಅವಕಾಶ ಇರಲಿಲ್ಲ.

ಅರುಂಧತಿ ಈ ವಿಷಯ ಕುರಿತು ಮಗಳೊಡನೆ ಮಾತ್ರವೇ ಮಾತನಾಡುತ್ತಿದ್ದಳು. ಮಗನ ಬಳಿ ಇಂತಹ ವಿಷಯಗಳ ಬಗ್ಗೆ ಎಂದೂ ಚರ್ಚಿಸಿರಲಿಲ್ಲ. ತಂದೆಯ ಹಣದಾಹ ಮಗನಿಗೂ ಇತ್ತು. ತನಗಿಂತ ಓದಿನಲ್ಲಿ

ಎಷ್ಟೋ ಹಿಂದುಳಿದಿದ್ದು, ಪಾಸಾಗುವ ಭರವಸೆಯಿಲ್ಲದವರೂ ಕೂಡಾ. ಕೇವಲ ಇಂಜಿನಿಯರಿಂಗ್ ಕೋರ್ಸಿನಲ್ಲಿ ಸೇರಿದ ಕಾರಣದಿಂದಲೇ ಹತ್ತು ಸಾವಿರ ವರದಕ್ಷಿಣೆ ತೆಗೆದುಕೊಂಡು ಮದುವೆ ಆದದ್ದು ಅವನನ್ನು ಆಕರ್ಷಿಸಿತ್ತು. ಇಂಜಿನಿಯರಿಂಗ್ ಡಿಗ್ರಿ ಪಡೆದ ಮೇಲೆ ಅವನಿಗೆ ತನ್ನ ಓದಿನ ಬೆಲೆ ಅರ್ಥವಾಗಿತ್ತು. ಇಪ್ಪತ್ತು ಸಾವಿರ, ಇಲ್ಲವೇ ಹುಡುಗಿ ತುಂಬಾ ರೂಪವತಿ ಯಾಗಿದ್ದ ಪಕ್ಷದಲ್ಲಿ ಕಡಿಮೆಯೆಂದರೂ ಹದಿನೈದು ಸಾವಿರ ವರದಕ್ಷಿಣೆಯನ್ನವನು ನಿರೀಕ್ಷಿಸಿದ್ದ. ತಾಯಿ ವರದಕ್ಷಿಣೆ ಬೇಡವೆನ್ನುತ್ತಿರುವುದನ್ನು ಕೇಳಿ ವಿಲವಿಲನೆ ಒದ್ದಾಡಿದ ಅವನು. ಆದರೆ "ನನಗೆ ವರದಕ್ಷಿಣೆ ಬೇಕು" ಎಂದು ಬಾಯಿ ಬಿಟ್ಟು ಹೇಳುವ ಸಾಹಸ ಮಾತ್ರ ಉಂಟಾಗಲಿಲ್ಲ. ಪಾಪ! ಈ ಕಾರಣ ದಿಂದಾಗಿಯೇ ಎಷ್ಟೋ ಸಲ ಹುಡುಗಿ ಅವನ ಮನಸ್ಸಿಗೆ ಒಪ್ಪಿಗೆಯಾಗಿದ್ದರೂ ಸಹ ಇಷ್ಟವಿಲ್ಲವೆಂದು ಹೇಳಿದ್ದ. ಎಷ್ಟೋ ವಿಷಯಗಳಲ್ಲಿ ತನ್ನನ್ನು ಅರ್ಥ ಮಾಡಿಕೊಳ್ಳಬಲ್ಲ ತಾಯಿ, ಈಗಲೂ ತನ್ನ ಮನಸ್ಸಿನಲ್ಲಿರುವುದನ್ನು ತಿಳಿದು ಕೊಳ್ಳಲಾರಳೇ ಎಂದು ಪ್ರಭಾಕರ, ತನ್ನ ಕೈಯಲ್ಲಿ ಬೆಳೆದ ಮಗನ ಮನಸ್ಸಿನಲ್ಲಿ ಇಂತಹ ಆಲೋಚನೆ ಬರಬಹುದೆಂಬ ಕಲ್ಪನೆಯೇ ಇಲ್ಲದ ತಾಯಿ ನಿರ್ಲಕ್ಷ್ಯದಿಂದ ಇದ್ದ ತಂದೆ.

ಹೀಗಾಗಿ ಪ್ರಭಾಕರನ ಮದುವೆ ಮುಂದು ಮುಂದಕ್ಕೆ ಹೋಗತೊಡಗಿತ್ತು. ವರದಕ್ಷಿಣೆ ಮಾತೆತ್ತದೆ ಮದುವೆ ಸಂಬಂಧ ಕುರಿತು ತಾಯಿ ವಿವರವಾಗಿ ಹೇಳತೊಡಗಿದಾಗ ಪ್ರಭಾಕರ ಬೇಸರದಿಂದ ಎದ್ದು ಹೋಗುತ್ತಿದ್ದ ಮಗನಿಗೆ ಈಗಾಗಲೇ ಮದುವೆಯಾಗುವ ಅಭಿಲಾಷೆ ಇಲ್ಲವೇನೋ ಎಂದುಕೊಂಡಳು ಅರುಂಧತಿ.

ಇಷ್ಟು ದಿನದ ನಂತರ ಮೊದಲ ಬಾರಿಗೆ ತನ್ನಷ್ಟಕ್ಕೆ ತಾನೇ ಇಪ್ಪತ್ತೈದು ಸಾವಿರ ವರದಕ್ಷಿಣೆಯೆಂದು ಹೇಳುತ್ತಿರುವುದನ್ನು ಕೇಳಿ ಆನಂದಾತಿರೇಕದಿಂದ ಮಾತು ಹೊರಡಲಿಲ್ಲ ಅವನಿಗೆ.

"ಇದೋ ಹಣ, ಎಣಿಸಿಕೋ" ಎಂದಳು ಅರುಂಧತಿ.

"ಅದೇನದು? ಮೊದಲೇ ಕೊಟ್ಟರೇನು?"

"ಹುಂ. ನಾನೇ ಕೇಳಿ ತೆಗೆದುಕೊಂಡೆ. ಎಣಿಸಿಕೋ"

"ನೀನು ಎಣಿಸಿದ್ದೀಯಲ್ಲಮ್ಮ!"

"ಹಣದ ವಿಷಯದಲ್ಲಿ ಯಾರನ್ನೂ ನಂಬಬಾರದಪ್ಪ. ಎಣಿಸಿಕೋ."

"ಇದೇನಮ್ಮ ಹೀಗಂತಿ? ನನಗೆ ನಿನ್ನಲ್ಲಿ ನಂಬಿಕೆಯಿಲ್ಲವೇ? ಹಣ ನನ್ನ ಕೈಗೇಕೆ ಕೊಡುತ್ತಿ, ನಿನ್ನಲ್ಲಿಯೇ ಇರಲಿ ಬಿಡು."

ಆರುಂಧತಿ ಮಾತನಾಡದೆ ಹಣ ಅವನ ಮುಂದಿಟ್ಟು ಹೊರಟು ಹೋದಳು. ಪ್ರಭಾಕರನ ಮನಸ್ಸಿಗೆ ಒಂದು ಕ್ಷಣ ನೋವು ಉಂಟಾದರೂ ತಾಯಿ ಅಲ್ಲಿಂದ ಹೊರಟು ಹೋದಳೆಂದು ನಿರ್ಧರಿಸಿಕೊಂಡ ನಂತರ ಹಣ ಕೈಗೆ ತೆಗೆದುಕೊಂಡು ಎಣಿಸಿ ತೃಪ್ತಿಯಿಂದ ಪೆಟ್ಟಿಗೆಯಲ್ಲಿಟ್ಟು ಬೀಗ ಹಾಕಿದ.

ಹೆಣ್ಣಿನವರ ಊರಿಗೆ ಆಡಂಬರದಿಂದ ಹೊರಟಿತ್ತು ಗಂಡಿನ ದಿಬ್ಬಣ. ಮದುವೆಯ ದಿನ ಸಹ ತನ್ನ ತಾಯಿ ಒಡವೆ ಧರಿಸದಿರುವುದನ್ನು ಕಂಡು ಸಹಿಸಲಾರದಾದ ಪ್ರಭಾಕರ.

"ಅಮ್ಮಾ, ಒಡವೆ ಹಾಕಿಕೊಳ್ಳಲಿಲ್ಲ ಏಕಮ್ಮ?" ಎಂದ.

"ಚಿಕ್ಕಂದಿನಲ್ಲೇ ಒಡವೆಗಳೆಂದರೆ ಆಸಕ್ತಿ ಇಲ್ಲ ನನಗೆ. ಇನ್ನು ಈಗೇಕೆ ಬಿಡು" ಬೇಸರದಿಂದ ನುಡಿದಳು ಅರುಂಧತಿ. ತಾಯಿಯ ಮುಖ ನೋಡಿ ಮತ್ತೆ ಮಾತನಾಡಲಾರದಾದ ಪ್ರಭಾಕರ.

ಮುಹೂರ್ತ ಸಮೀಪಿಸಿತು.

ಹಸೆಯ ಮೇಲೆ ಕುಳಿತ ಪಾರ್ವತಿಯನ್ನು ನೋಡಿ ಪ್ರಭಾಕರನ ರಕ್ತ ಹೆಪ್ಪುಗಟ್ಟಿತು.

"ನೀನೇ.....?" ಎಂದ ತೀಕ್ಷ್ಣವಾಗಿ.

ಪಾರ್ವತಿ ತಲೆಯೆತ್ತಿ ಸಜಲ ನೇತ್ರಗಳಿಂದ ಅವನ ಕಡೆ ನೋಡಿ ತಲೆ ತಗ್ಗಿಸಿದಳು.

ಥಟ್ಟನೆ ಮೇಲೇಳಹೋದ ಪ್ರಭಾಕರ.

"ಇಪ್ಪತ್ತೈದು ಸಾವಿರ ನಿನಗೆ ಮುಟ್ಟಿದೆ ಪ್ರಭಾಕರಾ, ಇನ್ನು ಏಳಲಾರೆ ನೀನು." ಯುಕ್ತ ವಯಸ್ಕನಾದ ಮೇಲೆ ಮೊದಲ ಸಲ ಮಗನನ್ನು ಆಜ್ಞಾಪಿಸಿದ್ದಳು ಅರುಂಧತಿ.

ಪ್ರಭಾಕರನ ಮನಸ್ಸು ಪ್ರಳಯಾಗ್ನಿಯಲ್ಲಿ ಬೆಂದು ಹೋಗುತ್ತಿದ್ದರೂ ಅವನ ದೇಹ ಅವನಿಗೆ ತಿಳಿಯದಂತೆಯೇ ತಾಯಿಯ ಆಜ್ಞೆಯನ್ನು ಪಾಲಿಸಿತ್ತು.

ಪುರೋಹಿತರ ಮಂತ್ರಘೋಷಣೆ ಹಾಸ್ಯ ಪ್ರತಿಹಾಸ್ಯ..... ಮದುವೆ ಮನೆ ಸಂಭ್ರಮದಿಂದ ತುಂಬಿ ತುಳುಕುತ್ತಿತ್ತು. ಇದನ್ನೆಲ್ಲಾ ಮೀರಿ ವಧುವಿನ ವಿಷಯ ಅವನ ಮನಸ್ಸನ್ನು ಕದಡಿಬಿಟ್ಟಿತ್ತು.

ಮದುವೆ ಶಾಸ್ತ್ರ ಮುಗಿದು ಬಿಡದಿಯ ಮನೆ ಸೇರಿದ ನಂತರ ಪ್ರಭಾಕರ ಸ್ವಲ್ಪ ಚೇತರಿಸಿಕೊಂಡ. ಅರುಂಧತಿ ಅವನೆದುರಿಗೇ ಕುಳಿತಿದ್ದಳು. ಇನ್ನು ಮಗ ಮಾತಿಗೆ ಪ್ರಾರಂಭಿಸುತ್ತಾನೆಂದವಳಿಗೆ ಗೊತ್ತು. ಎಷ್ಟು ಪ್ರಯತ್ನಿಸಿದರೂ ತಾಯಿಯ ಮುಖ ನೋಡಲಾರದೆ ಎತ್ತಲೋ ನೋಡುತ್ತಾ,

"ಪಾರ್ವತಿಯನ್ನು ಕುರಿತು ನೀನೇನು ಬಲ್ಲೆಯಮ್ಮಾ? ಅವಳನ್ನು ಸೊಸೆಯಾಗಿ ಹೇಗೆ ಸ್ವೀಕರಿಸಿದೆ?" ಎಂದ.

"ನನಗೆಲ್ಲಾ ಗೊತ್ತಪ್ಪ ತಿಳಿದೇ ನಿರ್ಧರಿಸಿದೆ."

"ಉಹುಂ. ನಿನಗೇನೂ ಗೊತ್ತಿರಲಾರದು. ಬರೀ ಅವಳ ಮಾತನ್ನು ನಂಬಿ ನನ್ನನ್ನೂ ಈ ಉಸುಬಿನಲ್ಲಿಳಿಸಿಬಿಟ್ಟೆ."

"ಇದು ಉಸುಬೆಂದು ನಾನು ತಿಳಿದಿಲ್ಲ ಮಗೂ. ಉಸುಬೇ ಆದರೂ ಇಳಿಸಿದ್ದು ನಾನಲ್ಲ."

ಥಟ್ಟನೆ ತಾಯಿಯ ಮುಖ ನೋಡಿದ ಪ್ರಭಾಕರ. ಆ ಮುಖದಲ್ಲಿನ ಕಾಠಿಣ್ಯ ಗಾಂಭೀರ್ಯಗಳನ್ನು ನೋಡಿ ಮತ್ತೆ ಮುಖ ತಿರುಗಿಸಿದ.

"ಪಾರ್ವತಿಯ ನಡತೆ ಸರಿಯಿಲ್ಲ."

"ನಾನು ನಂಬಲಾರೆ. ನನ್ನ ಮಗ ನಡತೆ ಸರಿಯಿಲ್ಲದ ಹೆಣ್ಣಿನೊಂದಿಗೆ ಕಡಿದುಕೊಳ್ಳಲಸಾಧ್ಯವಾದ, ಗಾಢವಾದ ಸಂಬಂಧವನ್ನು ಬೆಳೆಸಿಕೊಳ್ಳಲಾರ....."

ತಾಯಿಯೊಂದಿಗೆ ವಾದಿಸುವ ಶಕ್ತಿ ಪ್ರಭಾಕರನಿಗೆಂದೂ ಇರಲಿಲ್ಲ. ಅದರಲ್ಲೂ ಈ ವಿಷಯದಲ್ಲಿ ವಾದಿಸುವುದೆಂದರೆ ಅವನ ನಾಲಗೆ ತಡವರಿಸುತ್ತಿತ್ತು. ಆದರೂ ಹೇಗೋ ಹೇಳಿದ. "ನನಗೆ ಗೊತ್ತಮ್ಮ. ಆ ಹುಡುಗಿ ಒಳ್ಳೆಯವಳಲ್ಲ....."

"ನಿನಗೆ ಹೇಗೆ ಗೊತ್ತು?"

"ಎಲ್ಲರೂ ಅನ್ನುತ್ತಾರೆ."

"ಅಷ್ಟು ಮಾತ್ರಕ್ಕೇ ಒಂದು ಹುಡುಗಿಯ ಮೇಲೆ ಅಪವಾದ ಹೊರಿಸುತ್ತೀಯ?"

"ನನ್ನ ಅನುಭವ ನನಗಿದೆ."

"ಏನದು? ನೂರು ಸಲ ಬೇಡಿಕೊಂಡ ಮೋಹದ ಮಾತು ಹೇಳಿ ಇಲ್ಲದ ಆಶೆ ಹುಟ್ಟಿಸಿ, ಭಾಷೆ ಮಾಡಿ, ಮರುಳು ಮಾತಿನಿಂದ ಮೈ ಮರೆಯುವಂತೆ ಮಾಡಿ ಸಮಯ ನೋಡಿ ಕೈವಶ ಮಾಡಿಕೊಂಡರೆ ಪ್ರತಿಸ್ಪಂದನೆ ತೋರದೆ ಸುಮ್ಮನಿರಲಾರದ ಸಾಧಾರಣ ಮಾನವತೆ ಪಡೆದಿರುವುದೇ?"

"ನೀನು ಕವಿತೆ ಹೇಳಿದರೆ ನಾನು ಉತ್ತರ ಹೇಳಲಾರೆ. ಆದರೆ ಶೀಲವತಿಯರೆಂದೂ ಅಷ್ಟು ಸುಲಭವಾಗಿ ಗಂಡಸರ ವಶವಾಗುವುದಿಲ್ಲ. ಆ ಹುಡುಗಿ ಅಂತಹವಳೆಂದು ತಿಳಿದೇ ನಾನು ಸ್ನೇಹ ಬೆಳೆಸಿದೆ. ಕೊರಳಿಗೆ ಕಟ್ಟಿಕೊಳ್ಳಬೇಕೆಂದಲ್ಲ."

"ಅಷ್ಟು ಚೆನ್ನಾಗಿ ಗೊತ್ತಿದ್ದರೆ ಆ ತರಹದ ಸಂಬಂಧವನ್ನೇ ಬೆಳೆಸ ಬೇಕಾಗಿತ್ತು. ಸುಳ್ಳು ಮಾತೇಕೆ ಹೇಳಿದೆ? ಸಲ್ಲದ ಆಶೆ ಏಕೆ ಹುಟ್ಟಿಸಿದೆ? ಸುಳ್ಳು ವಾಗ್ದಾನಗಳನ್ನು ಏಕೆ ಮಾಡಿದೆ?"

"ಇದೊಂದು ಆಟ. ಪ್ರತಿಯೊಂದು ಆಟಕ್ಕೂ ಕೆಲವು ನಿಯಮಗಳಿರುತ್ತವೆ."

"ಹುಂ. ನೀನು ಹೀಗನ್ನುತ್ತೀಯೆಂದೇ ಊಹಿಸಿದ್ದೆ ನಾನು. ಜೀವನದಲ್ಲಿ ಅತ್ಯಂತ ಮಂಗಳಪ್ರದವಾದ ಪವಿತ್ರವಾದ ವಿಷಯಗಳನ್ನು ಕೀಳಾಗಿ, ಆಟವಾಗಿ ಭಾವಿಸಿ ಸುಖ ಸಂತೋಷದ ಮೂಲವನ್ನೇ ತಿಳಿಯದ ಮಂದಭಾಗ್ಯ

ರಾಗುತ್ತಿದ್ದೀರಿ ನೀವು. ಇದನ್ನು ನೀನು ಆಟವೆಂದು ಭಾವಿಸಿರಬಹುದು. ಆದರೆ ನಾನದನ್ನು ಒಪ್ಪಲಾರೆ. ಬಾಳುವೆಯ ಅತಿಮುಖ್ಯ ಸಂಘಟನೆಯನ್ನು ಆಟವೆಂದು ಭಾವಿಸಿದ ನೀನು ಇನ್ನು ಮುಂದಾದರೂ ಅದರ ನಿಜವಾದ ಬೆಲೆಯನ್ನು ಅರಿತುಕೊಳ್ಳಲೇಬೇಕು."

"ಅರಿಯಲು ನಿಜವಾದ ಬೆಲೆಯೊಂದು ಇದ್ದರಲ್ಲವೇ?"

"ನೀನು ತಂದೆಯಾಗಲಿದ್ದೀಯೆಂಬುದನ್ನು ಬಲ್ಲೆಯಾ?"

"ಆ ಹುಡುಗಿ ತಾಯಿಯಾಗಲಿದ್ದಾಳೆ ಎಂಬುದು ಮಾತ್ರವೇ ನನಗೆ ಗೊತ್ತು."

"ಪ್ರಭಾಕರಾ" ಗರ್ಜಿಸಿದಳು ಅರುಂಧತಿ.

"ಕೇವಲ ಪ್ರಕೃತಿ ನಿನ್ನ ಮೇಲೆ ಯಾವ ಬಾಧ್ಯತೆಯನ್ನೂ ಹೊರಿಸಲಾರದೆಂಬ ಧೈರ್ಯದಿಂದಲೇ ಒಂದು ತುಂಬು ಜೀವವನ್ನು ನಾಶಪಡಿಸಲು ಸಿದ್ಧವಾಗುತ್ತಿದ್ದೀಯೇನು. ನಿನ್ನ ಮನಸ್ಸಾಕ್ಷಿ ಏನಾಯಿತು? ಶಿಸ್ತಿನಲ್ಲಿ, ಉತ್ತಮ ಶಿಕ್ಷಣ ಕೊಟ್ಟು ಬೆಳೆಸಿದ್ದೇನೆಂದುಕೊಂಡ ನನ್ನ ಮಗನಲ್ಲಿ ಸಾಧಾರಣ ಮಾನವೀಯತೆಗೂ ಅಭಾವವೇ?ನನಗೆಲ್ಲಾ ಗೊತ್ತು ಪ್ರಭಾಕರಾ. ನೀನೆಷ್ಟು ಸುಳ್ಳು ಮಾತುಗಳಿಂದ ಅವಳನ್ನು ಮರಳು ಮಾಡಿ, ರಮಿಸಿ, ಲಾಲಿಸಿ ಅವಳ ಮಗುವಿಗೆ ತಂದೆಯಾಗಲಿದ್ದೀಯೋ ನನಗೆ ಗೊತ್ತು. ಕೇವಲ ನಿನ್ನ ಮೇಲಿನ ಪ್ರೀತಿಯಿಂದ, ನಿನ್ನ ಮಾತಿಗೆ ಎದುರಾಡಲಾರದ ಗೌರವದಿಂದ, ನಿನ್ನ ಮಾತಿನಲ್ಲಿ ನಂಬಿಕೆ ಇಡದ ಅವಿಶ್ವಾಸಿಯೆಂದು ನೀನೆನ್ನುವಿಯೇನೋ ಎಂಬ ಭಯದಿಂದ ತನ್ನನ್ನು ನಿನಗೆ ಅರ್ಪಿಸಿ ಆತ್ಮಾರ್ಪಣೆ ಮಾಡಿದ ಸ್ತ್ರೀಯ ಬಾಳುವೆಯನ್ನು ಕೇವಲ ಹಣದಾಹದಿಂದ ತುಳಿಯಬೇಡ. ಜತೆಗೆ ನನಗೆ ಹಣದಾಸೆಯೆಂದೂ, ವರದಕ್ಷಿಣೆಯಿಲ್ಲದೆ ಮದುವೆಯಾಗಲು ನಾನು ಒಪ್ಪುವುದಿಲ್ಲ ಎಂದೂ ಆ ಮುಗ್ಧ ಹುಡುಗಿಯ ಮುಂದೆ ಕಣ್ಣೀರು ಸುರಿಸುತ್ತೀಯಾ? ಇಷ್ಟು ದಿನ ನಿನ್ನನ್ನು ಬೆಳೆಸಿ ದೊಡ್ಡವನನ್ನಾಗಿ ಮಾಡಿದ್ದಕ್ಕೆ ಒಳ್ಳೆಯ ಪ್ರತಿಫಲವನ್ನೇ ಕೊಟ್ಟಿದ್ದೀಯಪ್ಪಾ!"

ಪ್ರಭಾಕರ ಬಗ್ಗಿಸಿದ ತಲೆ ಮೇಲೆತ್ತಲಿಲ್ಲ. ಸ್ವಲ್ಪ ಹೊತ್ತಾದ ನಂತರ "ಅವಳು ನಿನ್ನ ಬಳಿ ಬಂದಿದ್ದಳೇನು?" ಎಂದ.

"ಹೌದು, ಬಂದು ವಿಷಯವನ್ನೆಲ್ಲಾ ಹೇಳಿದಳು. ನನಗೆ ಹಣದ ವ್ಯಾಮೋಹ ಬಹಳ ಎಂದು ನಿನ್ನ ಮೂಲಕ ತಿಳಿದುಕೊಂಡಿದ್ದಳಾದ್ದರಿಂದ ಹಣಕ್ಕೋಸ್ಕರ ನನ್ನ ಬಾಳ್ವೆಯನ್ನು ಬಲಿ ಕೊಡಬೇಡಿರೆಂದು ಬೇಡಿಕೊಳ್ಳಲು ಬಂದಿದ್ದಳು."

"ಏನನ್ನಾದರೂ ಮಾಡಬಲ್ಲ ಸಾಹಸಿ ಅವಳು!!"

"ತುಚ್ಛವಾಗಿ ಮಾತನಾಡಿ ಅವಳನ್ನು ಅವಮಾನಿಸಬೇಡ. ಹೌದು, ಪಾರ್ವತಿ ಸಾಹಸಿಯೇ ಸರಿ. ಒಂದು ಸಲ ಒಂದು ವಿಷಯದಲ್ಲಿ ಸಾಹಸ ಮಾಡಿದ ಮೇಲೆ ಮತ್ತೊಂದು ವಿಷಯಕ್ಕೆ ಸಾಹಸ ಮಾಡದೆ ವಿಧಿಯಿಲ್ಲವಲ್ಲಾ ಆದ್ದರಿಂದಲೇ ಜೀವ ಕೊಡಲು ಸಿದ್ಧಳಾಗಿ ಕೊನೆಯ ಪ್ರಯತ್ನವೆಂದು ನನ್ನ ಬಳಿ ಬಂದಳು."

"ನಿನಗೆಲ್ಲೋ ಹುಚ್ಚು. ಸಾಯುವುದು ಅಷ್ಟು ಸುಲಭವಲ್ಲಮ್ಮ. ಈಗ ಹೇಳಿ ನೋಡು, ಸಾಯುತ್ತಾಳೇನೋ?"

"ಆ ಮಾತು ನೀನು ಆಡಬಲ್ಲೆ ಮಗೂ. ನಾನಾಡಲಾರೆ. ನಾನು ಹೆಣ್ಣು. ಆದರೂ ತಾಳಿ ಕಟ್ಟಿದೀಯಲ್ಲಾ! ಇನ್ನು ಆ ದೇಹದಲ್ಲಿ ಪ್ರಾಣವಿಲ್ಲದಂತೆ ಮಾಡುವುದು ನಿನಗೇತರ ಹಕ್ಕು?" ಅರುಂಧತಿಯ ಕಂಠ ಗದ್ಗದವಾಯಿತು. ಪ್ರಭಾಕರನ ಬಾಯಿಯಿಂದಲೂ ಮಾತು ಹೊರಡಲಿಲ್ಲ. ಕೆಲಕ್ಷಣ ತಡೆದು ಕೇಳಿದ, "ಪಾರ್ವತಿಗೆ ಇಷ್ಟು ಹಣ ಹೇಗೆ ಬಂತು?"

"ನಾನು ಕೊಟ್ಟೆ. ಪ್ರಾವಿಡೆಂಟ್ ಫಂಡ್ ಇನ್ಶೂರೆನ್ಸ್..... ನನ್ನ ಒಡವೆ, ಎಲ್ಲಾ ಸೇರಿಸಿ....."

ನಿಶ್ಚೇಷ್ಟಿತನಾದ ಪ್ರಭಾಕರ.

"ನೀನೇಕೆ ಕೊಟ್ಟೆಯಮ್ಮಾ?"

"ಇದು ನನಗೆ ನಾನು ವಿಧಿಸಿಕೊಂಡ ಜುಲ್ಮಾನೆ. ನಮ್ಮ ಹಿಂದಿನ ಕಾಲದಲ್ಲಿ ಓದಿಕೊಂಡ ತಾಯಂದಿರ ಸಂಖ್ಯೆ ಕಡಿಮೆಯಾದ್ದರಿಂದ ಮಕ್ಕಳನ್ನು ಶಿಸ್ತಿನಿಂದ ಬೆಳೆಸಲಾರದೆ ಹೋದ್ದರಿಂದಲೇ ಸಮಾಜದಲ್ಲಿ ಸಂಕುಚಿತ ಸ್ವಭಾವದ ಮನುಷ್ಯರು

ಹೆಚ್ಚಾಗಿ ಜೀವನ ಸಂಕಟಕರವಾಗಿ ಪರಿಣಮಿಸುತ್ತಿದೆಯೆಂಬ ಭ್ರಮೆಯಿತ್ತು ನನಗೆ. ನಮ್ಮ ಕಾಲದಲ್ಲಿ ವಿದ್ಯಾವತಿಯರಾದ ತಾಯಂದಿರ ಸಂಖ್ಯೆ ಹೆಚ್ಚಾದ್ದರಿಂದ ನಮ್ಮ ಮಕ್ಕಳನ್ನು ಸಕ್ರಮವಾಗಿ, ಸುಶಿಕ್ಷಣದಲ್ಲಿ ಬೆಳೆಸಬಲ್ಲೆವೆಂದೂ, ಪರಿಣಾಮವಾಗಿ ನಮ್ಮ ಕಾಲದಲ್ಲಿ ಅಲ್ಲದಿದ್ದರೂ ಅನಂತರವಾದರೂ ಸಮಾಜದಲ್ಲಿ ವಿಶಾಲ ದೃಷ್ಟಿ ಏರ್ಪಟ್ಟು ಜೀವನ ಸ್ವಲ್ಪ ಸುಖಮಯವಾಗ ಬಹುದೆಂದು ಆಶಾಗೋಪುರ ಕಟ್ಟಿದೆ ನಾನು. ತುಂಬು ಜೀವನ ನಡೆಸುತ್ತಿರುವ ನನ್ನ ಮೊಮ್ಮಕ್ಕಳನ್ನು ಕೂಡಿಸಿಕೊಂಡು, ನಮ್ಮ ಕಾಲದ ಕತೆ ಹೇಳಬೇಕೆಂದು ಹಗಲು ಕನಸು ಕಂಡೆ ನಾನು. ನನ್ನದೆಲ್ಲಾ ಬರೀ ಭ್ರಾಂತಿಯೆಂದು ನಿರ್ಧಾರ ವಾಯಿತು. ನನ್ನ ಮಗನನ್ನು ಇಷ್ಟು ನಿರರ್ಥಕನನ್ನಾಗಿ ಬೆಳೆಸಿದುದಕ್ಕೆ ನನಗೆ ನಾನು ವಿಧಿಸಿಕೊಂಡ ಜುಲ್ಮಾನೆ ಇಪ್ಪತ್ತೈದು ಸಾವಿರ."

ಪ್ರಭಾಕರ ಉತ್ತರ ಹೇಳಲಿಲ್ಲ. ಅವನ ಮುಖದಲ್ಲಿ ಅಪ್ರಸನ್ನತೆ ಪೂರ್ಣವಾಗಿ ಮಾಯವಾಗಲಿಲ್ಲ. ಅರುಂಧತಿ ಸಹಿಸಲಾರದೆ ಹೋದಳು.

"ಇಪ್ಪತ್ತೈದು ಸಾವಿರಕ್ಕೋಸ್ಕರ ಕಣ್ಣು ಮುಚ್ಚಿಕೊಂಡು ಜೀವನದಾದ್ಯಂತವು ಇರುವ ಬಾಂಧವ್ಯವನ್ನು ಬೆಳೆಸಿಕೊಳ್ಳಲು ಸಿದ್ಧನಾದೆಯಲ್ಲಾ, ನಿನಗೆ ತಿಳಿಯದ ಅಯೋಗ್ಯ ಹುಡುಗಿಯೊಬ್ಬಳು ಈ ಸ್ಥಾನದಲ್ಲಿದ್ದರು ನಿನಗೆ ಆಕ್ಷೇಪಣೆ ಇರುತ್ತಿರಲಿಲ್ಲ. ಅಲ್ಲವೆ? ನಿನ್ನನ್ನು ನಂಬಿ ತನ್ನ ಸರ್ವಸ್ವವನ್ನೂ ನಿನಗೊಪ್ಪಿಸಿದ ವ್ಯಕ್ತಿಯನ್ನು ಮಾತ್ರ ಸಹಿಸಲಾರೆಯಾ?"

"ನೀನು ನೋಡಿದ ಹುಡುಗಿ ಎಂದು ನಾನು ನಿಶ್ಚಿಂತನಾಗಿದ್ದೆ."

"ಸರಿ ಹಾಗಾದರೆ, ಆ ಗೌರವ ಹಾಗೇ ಇರಲಿ. ಪಾರ್ವತಿಯನ್ನು ಮನಸಾರೆ ಸ್ವೀಕರಿಸು. ನೀವಿಬ್ಬರೂ ಮಾಡಿದ ತಪ್ಪಿಗೆ ಅವಳೊಬ್ಬಳನ್ನೇ ಶಿಕ್ಷಿಸಬೇಡ. ಅಷ್ಟು ಸ್ವಾರ್ಥಪರನಾಗಬೇಡ."

ಅರುಂಧತಿಯ ಕಣ್ಣು ತುಂಬಿ ಬಂತು. ತನ್ನ ತಾಯಿಯ ಕಣ್ಣೀರನ್ನು ನೋಡಿ ವಿಚಲಿತನಾದ ಪ್ರಭಾಕರ. ಅವನಿಗೆ ಬುದ್ಧಿ ಬಂದ ಮೇಲೆ ಎಂದೂ ತಾಯಿಯ ಕಣ್ಣೀರನ್ನು ಕಂಡರಿಯ. ತಾಯಿ ಮತ್ತೊಬ್ಬರ ಮುಂದೆ ನಿಸ್ಸಹಾಯಕಳಾಗಿ ನಿಲ್ಲುವ ವಿಷಯ ಅವನ ಊಹೆಗೇ ನಿಲುಕದ್ದು. ಈಗ ಅದೇ ನಡೆದಿತ್ತು.

"ಅಮ್ಮಾ ನನ್ನನ್ನು ಕ್ಷಮಿಸು" ಎಂದ ಪ್ರಭಾಕರ ಕಾತರದಿಂದ. ಕಣ್ಣೀರನ್ನು ಒರೆಸಿಕೊಂಡಲು ಅರುಂಧತಿ.

"ತಾಯಿ ಮಗುವನ್ನು ಕ್ಷಮಿಸದೆ ಇರಲಾರಳು ಮಗೂ, ಹಳೆಯದನ್ನು ಮರೆತು ಪಾರ್ವತಿಯನ್ನು ಸ್ವೀಕರಿಸಿ ಸುಖವಾಗಿರು."

ಲಜ್ಜಾಭಾರದಿಂದ ಬಗ್ಗಿದ ಕುಮಾರನ ಶಿರಸ್ಸನ್ನು ಅಪ್ಯಾಯಮಾನವಾಗಿ ನೇವರಿಸಿದಳು ಅರುಂಧತಿ.



# ತೋಳ ಬಂತು ತೋಳ

ಮೂಲ : ಶ್ರೀಮತಿ ಮನ್ನೆ ಶಾರದ

ರಾವ್ ವಾಚು ನೋಡಿಕೊಂಡರು.

ಅವರ ಎಲೆಕ್ಟ್ರಾನಿಕ್ ವಾಚು ಸರಿಯಾಗಿ ಎಂಟು ಗಂಟೆ ಹತ್ತೊಂಬತ್ತು ನಿಮಿಷಗಳನ್ನು ತೋರಿಸುತ್ತಿತ್ತು.

ಅವರು ಸರಸರನೆ ಕೋಟು ತೊಟ್ಟು, ಬೂಟ್ಸು ಶಬ್ದ ಮಾಡದಂತೆ ಹೆಂಡತಿಯ ಕೋಣೆಯೊಳಗೆ ಹೆಜ್ಜೆ ಹಾಕಿದರು.

ಡಬಲ್ ಕಾಟಿನ ಮೇಲೆ ಹಾಸಿದ ಶುಭ್ರವಾದ ಬಿಳಿಯ ಬಾಂಬೆ ಡೈಯಿಂಗ್ ದುಪ್ಪಟ್ಟಿಯ ಮೇಲೆ ಜಾಜಿ ಹೂವಿನಂತೆ ಒಂದು ಪಕ್ಕಕ್ಕೆ ತಿರುಗಿ ಮಲಗಿದ್ದರು ಶಾಂತಾದೇವಿ.

ರಾವ್ ಮೃದುವಾಗಿ ಆಕೆಯ ಭುಜದ ಮೇಲೆ ಕೈಯಿರಿಸಿದರು.

ಆ ಸ್ಪರ್ಶ ಗುರ್ತಿಸಿ ಶಾಂತಾದೇವಿ ಈ ಕಡೆ ತಿರುಗಿ ನೋಡಿದರು.

ಆಕೆಯ ಕಣ್ಣುಗಳು ನಿಶ್ಶಕ್ತಿಯಿಂದ ನಿಸ್ತೇಜವಾಗಿದ್ದರೂ, ಅನುರಾಗವನ್ನು ಹೊರಸೂಸುತ್ತಿದ್ದವು.

ರಾವ್ ಕಿರುನಗೆ ನಕ್ಕರು.

"ಶಾಂತಾ, ಸಮಯಕ್ಕೆ ಸರಿಯಾಗಿ ಔಷಧಿ ತೊಗೊಳ್ಳೊದನ್ನ ಮರೀಬೇಡ. ನಾನು ನಾಡಿದ್ದು ಸಾಯಂಕಾಲದೊಳಗಾಗಿ ಬಂದುಬಿಡ್ತೀನಿ. ಬಾಬೂನ ಸೆಕೆಂಡ್ ಷೋ ಸಿನಿಮಾಗಳಿಗೆ ಹೋಗಗೊಡಬೇಡ" ಎಂದು ಆಕೆ ಭುಜ ತಟ್ಟಿ ಆಕೆಯ ಉತ್ತರಕ್ಕಾಗಿ ಕಾಯದೆಯೇ ಅಲ್ಲಿಂದ ಹೊರಬಿದ್ದರು.

ವರಾಂಡಾದಲ್ಲಿ ಅವರಿಗೋಸ್ಕರ ಬ್ರೀಫ್‌ಕೇಸ್ ಹಿಡಿದು ಕಾದು ನಿಂತಿದ್ದ ಡ್ರೈವರ್ ರಹೀಂ, ಅವರನ್ನು ಕಂಡ ಕೂಡಲೇ ಮೆಟ್ಟಿಲಿಳಿದು ಕಾರಿನ ಬಳಿಗೆ ನಡೆದ ವಿನಯದಿಂದ.

ರಾವ್ ಮತ್ತೊಮ್ಮೆ ವಾಚ್ ನೋಡಿಕೊಂಡು ಮೆಟ್ಟಿಲಿಳಿದರು. ಅವರು ಮೆಟ್ಟಿಲಿಳಿಯುತ್ತಿದ್ದಂತೆ ಹಾಲಿನಲ್ಲಿದ್ದ ಫೋನ್ ಟ್ರಿಣ್..... ಟ್ರಿಣ್..... ಎಂದು ಶಬ್ದ ಮಾಡಿತು. ಅವರು ಅಸಹನೆಯಿಂದ ಅಲ್ಲಿಯೇ ನಿಂತಿದ್ದ ನೌಕರ ರಂಗಯ್ಯನ ಕಡೆ ನೋಡಿ ಹೋರಬಂದರು. ಅವರ ನೋಟದ ಅರ್ಥ ತಿಳಿದ ರಂಗಯ್ಯ ರಿಸೀವರ್ ಎತ್ತಿದ. ರಾವ್ ಕಾರು ಹತ್ತುತ್ತಾ ಆಕಾಶದ ಕಡೆ ನೋಡಿದರು.

ದೂರದಲ್ಲಿ ಕಾಣುತ್ತಿದ್ದ ಮಸೀದಿಯ ಗೋಪುರದ ಹಿಂದೆ, ದಟ್ಟವಾಗಿ ಒಂದುಗೂಡುತ್ತಿದ್ದ ಮೋಡಗಳನ್ನು ನೋಡಿ, ಒಂದು ಕ್ಷಣ ನಿರಾಸೆಯೆನಿಸಿತವರಿಗೆ. ಲೈನ್ಸ್ ಕ್ಲಿಯರ್ ಆಗಿಲ್ಲವೆಂಬ ಕಾರಣದಿಂದಾಗಿ ಬೆಂಗಳೂರು ಫ್ಲೈಟ್ ಕ್ಯಾನ್ಸಲ್ ಆಗುತ್ತೇನೋ ಎಂಬ ಚಿಂತೆ ಹತ್ತಿತ್ತು. ಈ ದಿನ ರಾತ್ರಿಗೆಲ್ಲಾ ತಾನು ಬೆಂಗಳೂರು ಸೇರದೆ ಹೋದರೆ ಹತ್ತು ಲಕ್ಷ ರೂಪಾಯಿನ ಕಾಂಟ್ರಾಕ್ಟ್ ನೀಗಿಕೊಂಡಂತೆಯೇ ಎಂದು ಆಲೋಚಿಸುತ್ತಲೇ ಕಾರು ಹತ್ತಿದರು.

ಕಾರು ಪೋರ್ಟಿಕೋ ದಾಟುತ್ತಿದ್ದಂತೆಯೇ ರಂಗಯ್ಯ ಕಾರು ನಿಲ್ಲಿಸುವಂತೆ ಕೈಯಾಡಿಸುತ್ತಾ ಓಡೋಡಿ ಬಂದ.

ಕಾರು ನಿಂತಿತು.

ಸಮಯ ಎಂಟೂ ಇಪ್ಪತ್ತೈದಾಗಿತ್ತು.

ಅಂದರೆ ಬೆಂಗಳೂರು ಫ್ಲೈಟ್‌ಗೆ ಕೆಲವೇ ನಿಮಿಷಗಳಿದ್ದುವು. ಅವರು ಅಸಹನೆಯಿಂದ ರಂಗಯ್ಯನ ಕಡೆ ನೋಡಿದರು.

"ಅಯ್ಯಾ..... ಒಂದ್ಸಲ ಒಳೀಕ್ಬನ್ನಿ" ಎಂದ ರಂಗಯ್ಯ. ಅವನ ಬಾಯಿಂದ ಮಾತೇ ಹೊರಡದಷ್ಟು ನಡುಗುತ್ತಿದ್ದ. ಮುಖ ಬೆವತಿತ್ತು.

ರಾವ್‌ಗೂ ಗಾಬರಿಯಾಯಿತು. "ಶಾಂತಳಿಗೆ ಮತ್ತೆ ಏನೇನೋವು ಬರಲಿಲ್ಲವಷ್ಟೆ" ಆ ಆಲೋಚನೆ ಬಂದದ್ದೇ ತಡ, ಅವರು ಕಾರಿನಿಂದಿಳಿದು ಒಂದೇ ಉಸುರಿಗೆ ಮನೆಯೊಳಕ್ಕೆ ಓಡಿದರು.

ಅವರನ್ನು ಹಿಂಬಾಲಿಸಿದ ರಂಗಯ್ಯ.

ರಾವ್ ಗಾಬರಿಯಿಂದ ಮೆಟ್ಟಿಲಿನ ಕಡೆ ಹೋಗುತ್ತಿದ್ದಂತೆಯೇ ರಂಗಯ್ಯ ಹೇಗೋ ಗಂಟಲು ಸರಿಪಡಿಸಿಕೊಂಡು ಕೂಗಿದ "ಅಯ್ಯಾ....." ಎಂದಂದು ಫೋನಿನ ಕಡೆ ತೋರಿಸಿದ.

ಆದರೆ ಅದನ್ನೆಲ್ಲಾ ಗಮನಿಸುವ ಸ್ಥಿತಿಯಲ್ಲಿರಲಿಲ್ಲ ರಂಗಯ್ಯ. ನಡುಗುತ್ತಾ ಸ್ಟೂಲಿನ ಮೇಲಿರಿಸಿದ ರಿಸೀವರ್ ಕಡೆ ತೋರಿಸಿದ.

ರಾವ್ ದೃಷ್ಟಿ ಫೋನಿನ ಕಡೆ ಹರಿಯಿತೀಗ.

ರಿಸೀವರ್ ಕ್ರೆಡಿಲ್ ಮೇಲಿರಲಿಲ್ಲ.

'ರಂಗಯ್ಯ ಅಷ್ಟು ಗಾಬರಿ ಪಟ್ಟುದಕ್ಕೆ ಕಾರಣ ಶಾಂತಳ ಅನಾರೋಗ್ಯವಲ್ಲ' ಎಂಬ ವಿಷಯ ಅವರಿಗೆಷ್ಟೋ ಧೈರ್ಯ ಕೊಟ್ಟಿತ್ತು. ದೀರ್ಘವಾಗಿ ಉಸಿರೆಳೆದುಕೊಂಡರು.

ಅಪ್ರಯತ್ನವಾಗಿಯೇ ಮತ್ತೊಮ್ಮೆ ವಾಚ್ ಕಡೆ ನೋಡಿದರು.

ಎಂಟೂ ಮುವ್ವತ್ತೊಂದು.

ಇಷ್ಟು ಹೊತ್ತಿಗೆ ಬೆಂಗಳೂರು ಫ್ಲೈಟ್ ರನ್‌ವೇ ಮೇಲೆ ಚಕ್ಕರ್ ಹೊಡೆಯುತ್ತಾ ಮೇಲೇರಿರುತ್ತೆ. ಇನ್ನು ಈ ದಿನ ತನ್ನ ಪ್ರಯಾಣ ಕ್ಯಾನ್ಸಲ್ ಆದಂತೆಯೇ!

ರಾವ್ ರಂಗಯ್ಯನ ಮೇಲಿನ ಸಿಟ್ಟನ್ನೆಲ್ಲಾ ಫೋನಿನ ಮೇಲೆ ತೋರಿಸುತ್ತಿರುವಂತೆ ಸರ್ರನೆ ರಿಸೀವರ್ ಕೈಗೆತ್ತಿಕೊಂಡು ಕಟುವಾಗಿ "ಹಲೋ" ಎಂದರು.

ಕೋಪದಿಂದಲೇ ಬಿಗಿದುಕೊಂಡಿದ್ದ ಅವರ ಮುಖ ಮತ್ತೊಂದು ಕ್ಷಣದಲ್ಲಿಯೇ ಕಳವಳದಿಂದ ತುಂಬಿ ಹೋಗಿದ್ದನ್ನು ರಂಗಯ್ಯ ಗಮನಿಸುತ್ತಲೇ ಇದ್ದ.

"ಏನು ನೀವು ಹೇಳ್ತಿರೋದು" ಎಂದರು ಗಾಬರಿಯಿಂದ.

ಆಚೆ ಕಡೆಯಿಂದ ಅವರ ಕಿವಿಗೆ ಬಿದ್ದ ಸಮಾಚಾರ ತುಂಬಾ ದಾರುಣವಾದದ್ದೇ ಆಗಿರಬೇಕು. ಕ್ಷಣಮಾತ್ರದಲ್ಲಿ ಅವರ ಮುಖ ಬಿಳಿಚಿಕೊಂಡಿತ್ತು. "ಹಲೋ..... ಹಲೋ....." ಎಂದು ಕೂಗುತ್ತಾ ಆ ಕಡೆಯಿಂದ ಫೋನ್ ಕೆಳಗಿಟ್ಟ ಸದ್ದನ್ನು ಕೇಳಿ ಹತಾಶರಾಗಿ ಫೋನ್ ಕುಕ್ಕಿ ಸೋಫಾದಲ್ಲಿ ಕುಳಿತರು.

ಒಂದರಕ್ಷಣದಲ್ಲಿಯೇ ಅವರ ಮುಖದಲ್ಲಿ ಎಷ್ಟೋ ಭಾವನೆಗಳು ಸುಳಿದು, ಮುಖ ಮುಪ್ಪುಗಟ್ಟಿದಂತಾಯಿತು.

ರಂಗಯ್ಯ ಅವರನ್ನೇ ನೋಡುತ್ತಾ ನಿಂತಿದ್ದ.

ಐವತ್ತು ವರ್ಷ ಸಮೀಪಿಸುತ್ತಿದ್ದರೂ ನಲವತ್ತೂ ಸಹ ದಾಟಿದಂತೆ ಕಾಣುತ್ತಿರಲಿಲ್ಲ ರಾವ್. ಪ್ರತಿಯೊಂದು ಕೆಲಸವೂ ಅಚ್ಚುಕಟ್ಟಾಗಿ ಆಗಿಂದಾಗ್ಗೆ ಆಗಲೇಬೇಕು ಅವರಿಗೆ. ಬಿಜಿನೆಸ್ ಕೆಲಸಗಳಲ್ಲಿ ಎಷ್ಟೇ ಬಳಲಿ ಮನೆಗೆ ಬಂದರೂ ಅರ್ಧರಾತ್ರಿಯ ನಂತರ ಮಲಗಿದರೂ ಬೆಳಿಗ್ಗೆ ಐದು ಗಂಟೆಗೆಲ್ಲಾ ಏಳದೆ ಇರುತ್ತಿರಲಿಲ್ಲ..... ಅನಾರೋಗ್ಯದಿಂದ ಬಳಲುತ್ತಿದ್ದ ಪತ್ನಿಯನ್ನು ಎಷ್ಟೋ ಮುತುವರ್ಜಿಯಿಂದ, ಜಾಗರೂಕತೆಯಿಂದ ನೋಡಿಕೊಳ್ಳುತ್ತಿದ್ದರು.

ಅವರಿಗೆ ಬಹಳ ಅಪರೂಪವಾಗಿ ಸಿಗುತ್ತಿತ್ತು ವಿಶ್ರಾಂತಿ.

ಅಂತಹವರಿಂದು ಒಂದೇ ಸಲ ಇಪ್ಪತ್ತು ವರ್ಷ ಹೆಚ್ಚಾದವರಂತೆ ಕುಗ್ಗಿ ಕುಳಿತಿರುವುದನ್ನು ಕಂಡು ರಂಗಯ್ಯ ಕಂಗೆಟ್ಟು ಹೋದ.

ರಾವ್ ತಮ್ಮ ಸುತ್ತಲಿನ ಪರಿಸರಗಳನ್ನು ಗಮನಿಸುವ ಸ್ಥಿತಿಯಲ್ಲಿರಲಿಲ್ಲ. ಅವರ ಮೆದುಳು ಆಲೋಚನೆಗಳಿಂದ ಬಿಸಿಯೇರಿತ್ತು. ಅವರು ತಮ್ಮ ಆಲೋಚನಾ ಪ್ರಪಂಚದಿಂದ ಹೊರಬೀಳುವ ಮೊದಲೇ ಮತ್ತೆ ಫೋನ್ ಶಬ್ದ ಮಾಡಿತು.

ರಾವ್ ಫೋನಿನ ಕಡೆ ಒಂದು ಬಾರಿ ನೋಡಿ ಒಂದು ನಿಶ್ಚಯಕ್ಕೆ ಬಂದವರಂತೆ ರಿಸೀವರ್ ಕೈಗೆತ್ತಿಕೊಂಡರು.

"ಹೂಂ, ಸರಿ, ಈಗಲೆ ಹತ್ತು ನಿಮಿಷದಲ್ಲಿ ಬರುತ್ತೇನೆ" ಹಾಗನ್ನುತ್ತಿರುವಾಗ ಅವರ ಕಂಠ ನಡುಗುತ್ತಿತ್ತು.

ಕೂಡಲೇ ಮಹಡಿಯ ಮೇಲಕ್ಕೆ ಹೋಗಿ ಮಿಂಚಿನಂತೆ ಬ್ರೀಫ್‌ಕೇಸಿನೊಂದಿಗೆ ಹಿಂದಿರುಗಿದ ರಾವ್‌ರವರನ್ನು ನಿಶ್ಚೇಷ್ಟನಾಗಿ ನೋಡಿದ ರಂಗಯ್ಯ

ರಾವ್ ಅವನ ಕಡೆ ನೋಡಿ "ಅಮ್ಮಾವ್ರನ್ನ ಹುಷಾರಾಗಿ ನೋಡಿಕೊ" ಎಂದು ಹೇಳಿ ಕಾರಿನ ಕಡೆ ನಡೆದರು.

ರಹೀಂ "ಎಲ್ಲಿಗೆ ಸಾರ್....." ಎಂದ ವಿನಯದಿಂದ.

"ನೀನು ಬೇಡ. ನಾನು ಈಗಲೇ ಬಂದುಬಿಡ್ತೀನಿ" ಎಂದು ಮತ್ತೊಂದು ಮಾತಿಗೆ ಅವಕಾಶ ಕೊಡದೆ ಕಾರು ಹತ್ತಿದರು.

ಕಾರು ವಿಮಾನದಂತೆ ಗೇಟನ್ನು ಹಾದು ರಸ್ತೆಗಿಳಿಯಿತು.

ಕಾರು ಗಂಧೀಪೇಟೆಯ ರಸ್ತೆಯಲ್ಲಿ ಅತಿ ವೇಗದಿಂದ ಸಾಗುತ್ತಿತ್ತು. ಚಳಿಗಾಳಿ ಸುಯ್ಯೆಂದು ರಾವ್ ಕಿವಿಗಳಲ್ಲಿ ಕೊರೆಯುತ್ತಿತ್ತು.

ಮಳೆಯ ತುಂತುರು ಕಾರಿನ ಗ್ಲಾಸಿನ ಮೇಲೆ ಬಿದ್ದು ದಾರಿ ಗಜಿಬಿಜಿ ಯಾಗುವಂತೆ ಮಾಡುತ್ತಿತ್ತು. ಮೋಡ ಸುರಿಸಿದ ಕಣ್ಣೀರನ್ನು, ರೆಕ್ಕೆಗಳಂತಿದ್ದ ವೈಪರ್ಸ್ ನಿರ್ವಿರಾಮವಾಗಿ ಒರೆಸಿ ಹಾಕುತ್ತಿತ್ತು. ಕಣ್ಣೀರು ಬಾರದ ರಾವ್ ಕೈಗಳು ಯಾಂತ್ರಿಕವಾಗಿ ಸ್ಟೀರಿಂಗ್ ತಿರುಗಿಸುತ್ತಿತ್ತು.

ಚಿಟ್ಟಿ ಬಾಬು! ತನ್ನ ಏಕೈಕ ಪುತ್ರ. ತನ್ನ ಲಕ್ಷಗಟ್ಟಲೆ ಆಸ್ತಿಗೆ ವಾರಸುದಾರ. ಯಾರೋ ದುಷ್ಟರ ಕೈಗೆ ಸಿಕ್ಕಿಬಿದ್ದಿದ್ದ. ಇಪ್ಪತ್ತೈದು ಸಾವಿರ ರೂಪಾಯಿಗಳನ್ನು ತಾನು ಈ ಕ್ಷಣದಲ್ಲಿ ಅವರಿಗೆ ಒಪ್ಪಿಸದಿದ್ದಲ್ಲಿ ಅವನ ಶವ ಸಹಾ ಸಿಕ್ಕಲಾರದು.

ರಾವ್ ಮೈ ಕಂಪಿಸಿತು.

ಅವರಿಗೆ ದಿಕ್ಕೇ ತೋಚದಂತಾಗಿತ್ತು. ತನಗೆ ತಿಳಿದಂತೆ ತಮಗಾರೂ ಶತ್ರುಗಳೇ ಇರಲಿಲ್ಲ. ಈ ರೀತಿಯ ದ್ರೋಹ ಯಾರು ಮಾಡಿರಬಹುದು? ತನ್ನ ಒಬ್ಬನೇ ಮಗನನ್ನು ಧನದಾಹದಿಂದ ಹೊತ್ತುಕೊಂಡು ಹೋದ ರಾಕ್ಷಸರು ಯಾರು? ಎಷ್ಟೇ ಆಲೋಚಿಸಿದರೂ ಅವರಿಗೆ ಏನೂ ಹೊಳೆಯಲಿಲ್ಲ.

ಅಸೂಯೆಗಿಂತ ಹೆಚ್ಚಿನ ಶತ್ರುವಿಲ್ಲ. ತಾನೀಗ ಶ್ರೀಮಂತ. ಅದಷ್ಟು ಸಾಕು, ಅಕಾರಣ ದ್ವೇಷಕ್ಕೆ!

ಅವರಿಗೆ ಹಠಾತ್ತಾಗಿ ನೆನಪಾಯಿತು ಒಂದು ವಾರದ ಹಿಂದೆ ಪೇಪರಿನಲ್ಲಿ ಓದಿದ ಸುದ್ದಿ.

"ಬೊಂಬಾಯಿನಲ್ಲಿ ಇದೇ ರೀತಿ ಪ್ರಮುಖ ವ್ಯಾಪಾರಿಯೊಬ್ಬನ ಮಗನನ್ನು ಕಿಡ್ನ್ಯಾಪ್ ಮಾಡಿ, ಅವರು ಕೇಳಿದ ಲಕ್ಷಗಟ್ಟಲೆ ಹಣವನ್ನು ಕೊಡಲಿಲ್ಲವೆಂದು ಕೊಂದುಬಿಟ್ಟರು.

ಈ ಸುದ್ದಿ ನೆನಪಾದ ಕೂಡಲೇ ರಾವ್ ದೇಹಾದ್ಯಂತವೂ ಕಂಪಿಸಿದರು.

'ನೋ, ಹಾಗಾಗಬಾರದು. ತನ್ನ ಆಸ್ತಿಯೆಲ್ಲಾ ಹೋದರೂ ಚಿಂತೆಯಿಲ್ಲ. ಚಿಟ್ಟಿಬಾಬು ಬದುಕಬೇಕು. ಅವನು ನನಗೆ ಬೇಕೇಬೇಕು. ಅಪರೂಪಕ್ಕೆ ಹುಟ್ಟಿದ ಒಬ್ಬನೇ ಮಗ. ಹೀಗೆಂದುಕೊಂಡು ಕಾರಿನ ಸ್ಪೀಡನ್ನು ಮತ್ತಷ್ಟು ಹೆಚ್ಚಿಸಿದರು.

ಕಾರು ಗೋಲ್ಕೊಂಡ ಫೋರ್ಟ್ ದಾಟಿತು.

ಆ ಕತ್ತಲಲ್ಲಿ ರಾವ್ ಕಣ್ಣು ಕಿರಿದಾಗಿಸಿ ಎಡಗಡೆಗೆ ನೋಡುತ್ತಾ ನಿಧಾನವಾಗಿ ಕಾರನ್ನು ನಡೆಸತೊಡಗಿದರು.

ಅವರ ಎದೆ ಡವಡವನೆ ಬಡಿದುಕೊಳ್ಳುತ್ತಿತ್ತು.

ಒಂದು ಕಿಲೋಮೀಟರ್ ದೂರ ಹೋದ ಮೇಲೆ ಅವರ ಕಾರಿಗೆ ಬ್ರೇಕ್ ಬಿತ್ತು. ಕಾರನ್ನು ರಸ್ತೆಯ ಬದಿಯಲ್ಲಿ ನಿಲ್ಲಿಸಿ ಬ್ರೀಫ್‌ಕೇಸ್ ತೆಗೆದುಕೊಂಡು, ರಸ್ತೆಯನ್ನು ಬಿಟ್ಟು ಪಕ್ಕದ ಕಲ್ಲುಮುಳ್ಳಿನ ದಾರಿಯಲ್ಲಿ ನಿಧಾನವಾಗಿ ಹೆಜ್ಜೆ ಹಾಕತೊಡಗಿದರು.

ಹಾಗೆ ನೂರು ಗಜ ದೂರ ನಡೆದು ತಲೆಯೆತ್ತಿ ಮೇಲಕ್ಕೆ ನೋಡಿದರು. ಅಲ್ಲಿ ಎತ್ತರವಾಗಿ ಪುಟ್ಟ ಗುಡ್ಡದಂತಿದ್ದ ಬೆಟ್ಟದ ಮೇಲೆ ಶಿಥಿಲಾವಸ್ಥೆಯಲ್ಲಿತ್ತು ಆ ಬಂಗಲೆ.

ಕಪ್ಪೆಗಳೂ, ಕೀಟಗಳೂ ಒಂದಾಗಿ ಹಾಡುತ್ತಿದ್ದ ಕೋರಸ್ ಹಾಡು ಪಿಶಾಚಿಗಳ ವಿಷಾದ ಗೀತೆಯಂತಿತ್ತು.

ಮಳೆಯ ತುಂತುರು ಮುಖವನ್ನು ತೋಯಿಸುತ್ತಿತ್ತು. ಕರ್ಚೀಫ್‌ನಿಂದ ಮುಖ ಒರೆಸಿಕೊಳ್ಳುತ್ತಾ ಒಂದು ಕ್ಷಣ ನಿಂತುಬಿಟ್ಟರಾತ.

ಬದುಕಿನಲ್ಲಿ ಎಂದೂ ಭಯವನ್ನೇ ಅರಿಯದ ಅವರು ಆ ಬಂಗಲೆಯೊಳಕ್ಕೆ ಹೆಜ್ಜೆಯಿಡಲು ಒಂದು ಕ್ಷಣ ಸಂದೇಹಿಸಿದರು.

ಆ ಕೂಡಲೇ ನನ್ನ ಪ್ರಾಣಕ್ಕೆ ಪ್ರಾಣವಾದ ಮಗ ಆ ಬಂಗಲೆಯಲ್ಲಿಯೇ ಬಂಧಿಸಲ್ಪಟ್ಟಿರುವನೆಂಬ ಸತ್ಯ ಮನಸ್ಸಿಗೆ ತಟ್ಟಿ ಸರಸರನೆ ಗುಡ್ಡ ಹತ್ತಿದರು.

ಗುಡ್ಡ ಹತ್ತಿದ ಆಯಾಸದಿಂದ ಒಂದು ಸಲ ನೀಳವಾಗಿ ಉಸಿರು ಬಿಟ್ಟರು.

ಎಲ್ಲೆಲ್ಲಿಯೂ ಭಯಂಕರವಾದ ನಿಶ್ಯಬ್ದ!

ಆ ಕತ್ತಲಲ್ಲಿ ಆತ ಒಂದು ಸಲ ಗಟ್ಟಿಯಾಗಿ "ಮಗೂ, ಚಿಟ್ಟಿಬಾಬೂ" ಎಂದೂ ಕೂಗಿದರು.

ಅವರ ಕೂಗಿಗೆ ಆ ಹಳೆಯ ಬಂಗಲೆ ಪ್ರತಿಧ್ವನಿಸಿತು. ರಾವ್ ತಮ್ಮ ಕೂಗನ್ನು ಕೇಳಿ ತಾವೇ ಬೆಚ್ಚಿದಂತೆ ನಿಂತುಬಿಟ್ಟರು.

ಆ ಕ್ಷಣದಲ್ಲಿ ಕೇಳಿಸಿತು ಚಿಟ್ಟಿಬಾಬುವಿನ ಕಂಠ "ಡ್ಯಾಡೀ, ಬಂದಿರಾ....." ಎಂದು.

ರಾವ್ ಕಲ್ಲುಮುಳ್ಳುಗಳನ್ನು ಲೆಕ್ಕಿಸದೆ ಒಳಕ್ಕೆ ಧಾವಿಸಿ ಸುತ್ತಲೂ ದೃಷ್ಟಿ ಹಾಯಿಸಿದರು.

"ಡ್ಯಾಡೀ..... ಇಲ್ಲಿ....."

ರಾವ್ ಹಿಂತಿರುಗಿ ನೋಡಿ ಕಂಬಕ್ಕೆ ಕಟ್ಟಿದ್ದ ಮಗನನ್ನು ಗುರ್ತಿಸಿದರು.

ನಿರ್ಮಾನುಷವಾದ ಆ ಪ್ರಾಂತದಲ್ಲಿ, ಕಡು ಕತ್ತಲಲ್ಲಿ, ನಿರ್ದಾಕ್ಷಿಣ್ಯವಾಗಿ ಕಂಬಕ್ಕೆ ಕಟ್ಟಲ್ಪಟ್ಟ ಮಗನನ್ನು ನೋಡಿ ಅವರ ಪಿತೃಹೃದಯ ವಿಲವಿಲನೆ ಒದ್ದಾಡಿತು.

"ಬಾಬೂ" ಎಂದು ಮಗನ ಬಳಿಗೆ ಓಡಿದರು. ಅವನ ಕಟ್ಟುಗಳನ್ನು ಬಿಚ್ಚಿ ತಬ್ಬಿಕೊಂಡರು. ತಂದೆಯ ಎದೆಯಲ್ಲಿ ಮುಖ ಹುದುಗಿಸಿ ರುದ್ಧ ಕಂಠದಿಂದ "ದುಡ್ಡು ತಂದಿರಾ ಡ್ಯಾಡೀ" ಎಂದ ಚಿಟ್ಟಿಬಾಬು.

ಅವರು ತಕ್ಷಣ ನೆನಪಾದಂತೆ ಬ್ರೀಫ್‌ಕೇಸನ್ನು ಅಲ್ಲಿಟ್ಟು ಮಗನೊಂದಿಗೆ ಅಮಿತ ವೇಗದಿಂದ ಗುಡ್ಡವನ್ನಿಳಿದು ಕಾರಿನ ಕಡೆ ನಡೆದರು.

ರಾವ್ ತೀವ್ರವಾಗಿ ಆಲೋಚಿಸುತ್ತಿದ್ದರು.

ಇದು ಮೂರನೆಯ ಬಾರಿ ಹೀಗಾಗುತ್ತಿದ್ದದು!

ಮೊದಲನೇ ಸಲವೇ ತಾವು ಚೆನ್ನಾಗಿ ಬುದ್ಧಿ ಹೇಳಬೇಕಾಗಿತ್ತು. ಮಗನ ಮೇಲಿನ ಮಮತೆಯಿಂದಲೂ, ಇಪ್ಪತ್ತೈದು ಸಾವಿರ ತಾನೇ ಎಂಬ ತಾತ್ಸಾರದಿಂದಲೂ ತಾನು ಅವರಿಗೆ ಸುಲಭವಾಗಿ ಹಣ ಪಡೆಯುವ ವಿಧಾನ ಕಲಿಸಿದಂತಾಗಿತ್ತು. ಈಗ ಅವರು ತಮಗೆ ಹಣ ಬೇಕಾದಾಗಲೆಲ್ಲಾ ಚಿಟ್ಟಿಬಾಬುವನ್ನು ಎತ್ತಿಕೊಂಡು ಹೋಗಲಾರಂಭಿಸಿದ್ದರು.

ತಾನು ಅವರಿಗೆ ಯಾವ ರೀತಿಯಲ್ಲಿ ಬುದ್ಧಿ ಹೇಳಬಲ್ಲೆ?

ತಾನು ಹಣ ಕೊಡದಿದ್ದಲ್ಲಿ ಅವರು ತನ್ನ ಮಗನನ್ನು ನಿರ್ದಾಕ್ಷಿಣ್ಯವಾಗಿ ಕೊಂಡು ಬಿಸಾಡುತ್ತಾರೆ. ಹಾಗೆ ನಡೆದದ್ದೇ ಆದರೆ ಈ ಹಣವನ್ನೆಲ್ಲಾ ತಾನು ತಲೆಯ ಮೇಲೆ ಸುರಿದುಕೊಳ್ಳಬೇಕೆ?

ರಾವ್ ಮತ್ತೆ ಯಾಂತ್ರಿಕವಾಗಿ ಇಪ್ಪತ್ತೈದು ಸಾವಿರ ಹಣ ತೆಗೆದುಕೊಂಡು ಗಂಢೀಪೇಟೆಯ ಕಡೆ ಹೊರಟರು.

ಸಮಯ ರಾತ್ರಿ ಒಂದು ಗಂಟೆಯಾಗಿದ್ದರೂ ಹಾಲಿನಲ್ಲಿದ್ದ ದೀಪ ಉರಿಯುತ್ತಲೇ ಇತ್ತು.

ಚಿಟ್ಟಿಬಾಬು ಮೆಲ್ಲನೆ ಒಳಕ್ಕೆ ಬಂದ.

ಸುತ್ತಲೂ ನೋಡಿ ತಂದೆ ಕಾಣದಿದ್ದುದರಿಂದ ಸರಸರನೆ ಮಹಡಿ ಮೆಟ್ಟಿಲನ್ನು ಹತ್ತಿದ. ತನ್ನ ಕೋಣೆಯಲ್ಲೂ ದೀಪ ಉರಿಯುತ್ತಿತ್ತು. ಒಳಕ್ಕೆ ಹೆಜ್ಜೆಯಿಟ್ಟ ಅವನು ಸ್ತಂಭಿತನಂತೆ ನಿಂತಲ್ಲಿಯೇ ನಿಂತುಬಿಟ್ಟ..... ಅವನಿಗೆದುರಾಗಿ ತಂದೆ ನಿಂತಿದ್ದರು.

ಅವನ ಅಲಮಾರು ತೆರೆದಿತ್ತು. ಒಳಗಿದ್ದ ವಸ್ತುಗಳೆಲ್ಲಾ ಚೆಲ್ಲಾಪಿಲ್ಲಿಯಾಗಿದ್ದುವು. ಸ್ಮಗಲ್ ಟೇಪ್ ರಿಕಾರ್ಡರ್, ವಾಚುಗಳು, ಬ್ಲೂಫಿಲಂ..... ಅಶ್ಲೀಲ ಸಾಹಿತ್ಯ..... ನಗ್ನರಾಗಿದ್ದ ದೇಶವಿದೇಶಗಳ ಸ್ತ್ರೀಯರ ಫೋಟೋಗಳು ಎಲ್ಲಾ ಕೆಳಗೆ ಬಿದ್ದಿದ್ದವು.

ರಾವ್ ಕಣ್ಣು ಕೆಂಪಾಗಿತ್ತು. ಕೋಪಾವೇಶದಿಂದ ಒಂದು ಹೆಜ್ಜೆ ಮುಂದಾಗಿ ಮಗನನ್ನು ಹೊಡೆಯಲು ಕೈಯೆತ್ತಿದರು.

ಚಿಟ್ಟಿಬಾಬು ಆಶ್ಚರ್ಯದಿಂದ ತಂದೆಯ ಕಡೆ ನೋಡಿದ. ರಾವ್ ಎತ್ತಿದ ಕೈ ಅಲ್ಲಿಯೇ ನಿಂತುಬಿಟ್ಟಿತು. ಮಗನ ಹತ್ತಿರದಿಂದ ಬಂದ ಕೆಟ್ಟವಾಸನೆ ಅವರನ್ನು ನಿಶ್ಚೇಷ್ಟಿತರನ್ನಾಗಿ ಮಾಡಿತ್ತು.

"ರ್ಯಾಸ್ಕೆಲ್..... ನೀನು..... ನೀನು" ದುಃಖದಿಂದಲೂ ಸಿಟ್ಟಿನಿಂದಲೂ ಅವರು ಕಂಪಿಸುತ್ತಿದ್ದರು.

ಚಿಟ್ಟಿಬಾಬು ಅಪರಾಧಿಯಂತೆ ತಲೆತಗ್ಗಿಸಿದ.

ರಾವ್ ಕೋಪಾವೇಶ ಕ್ರಮವಾಗಿ ದುಃಖವಾಗಿ ಮಾರ್ಪಟ್ಟಿತು.

"ಅಯ್ಯೋ! ಕೊನೆಗೆ ನಿನ್ನನ್ನು ಹೀಗೆ ಬೆಳೆಸಿದಂತಾಯಿತೇ ನಾನು? ಹದಿನಾರು ತುಂಬದ ಎಳೆಯ ಹುಡುಗನೆಂದೇ ಭಾವಿಸಿದೆ. ಆದರೆ ಹೀಗೆ ರೌಡಿಗಳೊಂದಿಗೆ ಸೇರಿ ಸರ್ವನಾಶವಾಗುತ್ತಿದ್ದೀಯೆಂದು ಊಹಿಸಲಾರದೆ ಹೋದೆ. ಬುದ್ಧಿವಂತನಾಗಿ, ಚೆನ್ನಾಗಿ ಓದಿಕೊಂಡು, ಈ ನನ್ನ ಆಸ್ತಿಗೆಲ್ಲಾ ವಾರಸುದಾರನಾಗುತ್ತೀಯೆಂದು ಕನಸು ಕಂಡೆ. ಆದರೆ..... ಈ ರೀತಿ ಗೂಂಡಾಗಳ ಜತೆ ಸೇರಿ ತಂದೆ ತಾಯಿಗಳನ್ನೇ ಬೆದರಿಸಿ ಹಣ ಕೀಳುವ ದ್ರೋಹ ಬುದ್ಧಿ ಬೆಳೆಸಿಕೊಳ್ಳುತ್ತೀಯೆಂದು ಎಣಿಸಲಿಲ್ಲ..... ನಾನು....." ದೈನ್ಯದಿಂದ ಮಗನ ಕೈಗಳನ್ನು ಹಿಡಿದು ರೋದಿಸಿದರು ತಂದೆ.

ಸಿಕ್ಕುಬಿದ್ದ ತಾನು ತಂದೆಯ ಕೈಯಲ್ಲಿ ಸಾಯಾಬೀಳ ಪೆಟ್ಟು ತಿನ್ನಬೇಕಾಗುವುದೆಂದು ಊಹಿಸಿದ್ದ ಚಿಟ್ಟಿಬಾಬು, ತಂದೆ ತನ್ನನ್ನು ದೈನ್ಯದಿಂದ ಬೇಡಿಕೊಂಡ ಕೂಡಲೇ ಕರಗಿ ನೀರಾದ.

"ಅಯಾಂ ವೆರಿ ಸಾರಿ ಡ್ಯಾಡೀ..... ಮತ್ತೆಂದೂ ಈ ರೀತಿ ಮಾಡಲ್ಲ ಡ್ಯಾಡೀ" ಎಂದು ತಂದೆಯನ್ನು ತಬ್ಬಿಕೊಂಡ.

ಮಗನ ಮಾತಿನಿಂದಾಗಿ, ಅವನಲ್ಲುಂಟಾದ ಪರಿವರ್ತನೆಯನ್ನು ಗಮನಿಸಿ ತಾತ್ಕಾಲಿಕವಾಗಿ ಅವರ ಪಿತೃಹೃದಯ ಶಾಂತಿ ಪಡೆಯಿತು.

"ನಿಮ್ಮ ಇಷ್ಟ ಬಂದ ಹಾಗೆ ಮಾಡಿಕೊಳ್ಳಿ..... ಒಂದು ಪೈಸಾನೂ ಕೊಡೊಲ್ಲ. ಈಡಿಯಟ್ಸ್....." ಕಟುವಾಗಿ ಹೇಳಿದರು. ರಾವ್.

"....."

"ಹತ್ತು ಸಲ ಕೊಲ್ಲುತ್ತೀನಿ ಅಂತ ಹೆದರಿಸಬೇಕಾಗಿಲ್ಲ. ಇನ್ನೊಂದು ಸಲ ಫೋನ್ ಮಾಡಿದರೆ ಪೋಲೀಸ್‌ಗೆ ರಿಪೋರ್ಟ್ ಮಾಡ್ತೀನಿ" ರಿಸೀವರನ್ನು ಬಲವಾಗಿ ಕುಕ್ಕಿ ಅತ್ತಿಂದಿತ್ತ ತಿರುಗಾಡತೊಡಗಿದರು ರಾವ್.

ಟ್ರಿಣ್..... ಟ್ರಿಣ್..... ಎನ್ನುತ್ತಿದ್ದ ಫೋನಿನ ಕಡೆ ಮೂರು ನಿಮಿಷ ಒಂದೇ ಸಮನೆ ನೋಡಿದರು ರಾವ್. ಅದು ನಿಲ್ಲದೇ ಶಬ್ದ ಮಾಡುತ್ತಲೇ ಇತ್ತು.

ಸಮಯ ನಾಲ್ಕು ಗಂಟೆ ಇರಬಹುದು ಆಗ.

ಫೋನ್ ಎತ್ತಿ ಮಾತನಾಡದೇ ನಿಂತುಕೊಂಡರು ರಾವ್.

"....."

ಕೋಪದಿಂದ ಕೆಂಪಗಾಗಿದ್ದ ಅವರ ಮುಖ ಒಂದು ಕ್ಷಣದಲ್ಲಿ ಬಿಳಚಿಕೊಂಡಿತು.

"ಆಸ್ಪತ್ರೆಗೆ? ಏಕೆ?..... ಸರಿ..... ಸರಿ..... ಈಗ ಬಂದೆ."

ಇದ್ದವರು ಇದ್ದಂತೆಯೇ ಕಾರು ಹತ್ತಿದರು.

ನಿರ್ಮಾನುಷವಾಗಿದ್ದ ರಸ್ತೆಯನ್ನು ದಾಟಿ ಕಾರು ಶರವೇಗದಿಂದ ಓಡುತ್ತಿತ್ತು.

ಕ್ಯಾಸುಯಾಲಿಟಿಯಲ್ಲಿಯೇ ಡಿ.ಎಸ್.ಪಿ. ರಂಗಧಾಮ್ ಎದುರಾದರು. ರಾವ್ ಸಂದೇಹದಿಂದ ಅವರ ಕಡೆ ನೋಡಿದರು.

ಆತ "ಸಾರಿ, ಮಿಸ್ಟರ್ ರಾವ್" ಎನ್ನುತ್ತಾ ಮುಖ ಪಕ್ಕಕ್ಕೆ ತಿರುಗಿಸಿಕೊಂಡರು.

"ಏನಾಯಿತು?" ರಾವ್ ಕಳವಳದಿಂದ ಪ್ರಶ್ನಿಸಿದರು.

ಅವರು ಉತ್ತರ ಕೊಡದೆ ಒಂದು ಕಾಗದವನ್ನು ಅವರ ಕೈಗಿತ್ತರು. ರಾವ್ ಆತುರದಿಂದ ಕಾಗದ ಓದಲಾರಂಭಿಸಿದರು.

*"ಡಿಯರ್ ಫ್ರೆಂಡ್ಸ್.....,*

*ಈ ಸಲಕ್ಕೆ ನನ್ನನ್ನು ಬಿಟ್ಟುಬಿಡಿರೋ. ನಮ್ಮ ಡ್ಯಾಡಿಗೆ ನಿಜ ತಿಳಿದುಬಿಟ್ಟಿದೆ. ಅವರು ನನ್ನನ್ನು ಹೊಡೆದು ಬಡಿದೂ ಶಿಕ್ಷಿಸಿದ್ದರೂ ಚೆನ್ನಾಗಿತ್ತು. ಆದರೆ ಅವರು ತುಂಬಾ ನೊಂದುಕೊಂಡಿದ್ದಾರೆ, ಮನಸ್ಸಿಗೆ ಹಚ್ಚಿಕೊಂಡು ಕೊರಗುತ್ತಿದ್ದಾರೆ ಕಣ್ರೋ..... ನಮ್ಮ ಮಮ್ಮಿ ಮೊದಲೆ ಹಾರ್ಟ್ ಪೇಷೆಂಟ್. ನಾನಿಲ್ಲವಾದರೆ ಬದುಕೊಲ್ಲ. ಪ್ಲೀಸ್ ನಿಮಗೆ ದುಡ್ಡು ಬೇಕಾದರೆ ನಮ್ಮ ಡ್ಯಾಡೀನ ಕೇಳಿದರೆ ಖಂಡಿತ ಕೊಡ್ತಾರೆ. ನಾವು ಕಾಶ್ಮೀರಕ್ಕೆ ಹೋಗ್ತೀವಿ ಅಂತ ಹೇಳಿ ನಾನು ತಪ್ಪದೆ ಹಣ ತರ್ತೀನಿ ಕಣ್ರೋ..... ಇಂತಹ ತಪ್ಪು ಮಾಡೋಲ್ಲ ಅಂತ ಡ್ಯಾಡೀಗೆ ಪ್ರಾಮೀಸ್ ಮಾಡಿದೀನಿ ಕಣ್ರೋ..... ಈ ಸಲಕ್ಕೆ ನನ್ನ ಬಿಟ್ಟುಬಿಡಿರೋ.....*

*ಯುವರ್ಸ್,*

*ಚಿಟ್ಟಿಬಾಬು"*

ಓದಿ, ಆತುರದಿಂದ ಡಿ.ಎಸ್.ಪಿ. ಕಡೆ ನೋಡಿದರು ರಾವ್.

"ಈ ಕಾಗದ ಹತ್ತು ದಿನದ ಹಿಂದೆ ನಿಮ್ಮ ಹುಡುಗ ಆ ಬ್ಯಾಚ್‌ಗೆ ಬರೆದಿರೋದು. ಆದರೂ ಅವನನ್ನು ಬಿಡಲಿಲ್ಲ. ಸುಮ್ಮನೇ ಬರುವ ಹಣದ ರುಚಿ ಹತ್ತಿದ ಅವರು ಹೇಗೆ ಬಿಟ್ಟಾರು? ಪ್ರತಿಸಾರಿ ಮಾಡಿದಂತೆ ಮಾಡಲು ಈ ಸಲ ನಿಮ್ಮ ಹುಡುಗ ಒಪ್ಪಿಕೊಳ್ಳದ್ದರಿಂದ, ಅವನನ್ನು ಬಲಾತ್ಕಾರವಾಗಿ ಎತ್ತಿಕೊಂಡು ಹೋಗಿ ನಿಮ್ಮನ್ನು ಬ್ಲಾಕ್ ಮೆಯಿಲ್ ಮಾಡಹತ್ತಿದರು. ನೀವು ಈ ಸಲ ಅವರ ಬಲೆಗೆ ಬೀಳದಿದ್ದುದು ಅವರಿಗೆ ಸಿಟ್ಟು ಬರುವಂತಾಯಿತು. ನೀವು ಹಣ ಕೊಡದೇ ಹೋದ್ದರಿಂದ..... ಅವರು ದ್ವೇಷದಿಂದ..... ಸಾರಿ..... ಎಲ್ಲಾ ಮುಗಿದುಹೋಯಿತು. ಆ ಬ್ಯಾಚ್‌ನ ಹಿಡಿದುಕೊಂಡಿದೀವಿ ಅಂತಿಟ್ಟುಕೊಳ್ಳಿ. ಬೇಸರದ ಸಂಗತಿ ಅಂದರೆ ಅವರಲ್ಲಿ ಯಾರಿಗೂ ಇನ್ನೂ ಇಪ್ಪತ್ತು ವರ್ಷವೂ ಇಲ್ಲ."

ರಾವ್‌ಗೆ ಅವರ ಮಾತುಗಳು ಕೇಳಿಸುತ್ತಿರಲಿಲ್ಲ.

ಎದುರಾಗಿ ಸ್ಟ್ರೆಚ್ಚರ್ ಮೇಲೆ, ಬಿಳೀ ಹೊದಿಕೆಯೊಳಗೆ ಶಾಂತಿದೂತನಂತೆ ಬರುತ್ತಿದ್ದ ಚಿಟ್ಟಿಬಾಬುವಿನ ಶರೀರವನ್ನು ಬಿಟ್ಟ ಕಣ್ಣು ಬಿಟ್ಟಂತೆ ನೋಡುತ್ತಿದ್ದ ರಾವ್ ಕುಸಿದುಬಿದ್ದರು.

★ ★ ★

# ಕಾನೂನಿನ ಎರಡು ತುದಿಗಳು

ಮೂಲ : ಶ್ರೀ ಪುಳಿ ಚರ್ಲಾ ಸುಬ್ಬರಾವ್

**ಬಿ**ಸಿಲು ಸುಡುತ್ತಿತ್ತು. ಗಾಳಿ ಸಹ ಬೆಚ್ಚಗೆ ಬೀಸುತ್ತಿತ್ತು. ಹೊಲದ ಪಕ್ಕದಲ್ಲಿದ್ದ ಕುಂಟೆಯ ಬಳಿ ಮರದ ಕೆಳಗೆ ಕುಳಿತು ಹಣ್ಣು ಮೆಣಸಿನ ಕಾಯಿಯ ಚಟ್ನಿಯಲ್ಲಿ ಅನ್ನ ಕಲಸಿ ಉಣ್ಣುತ್ತಿದ್ದ ನರಸಯ್ಯ. ಅದು ಪೂರ್ತಿಯಾದ ಕೂಡಲೇ ಅವನ ಬೊಗಸೆಯಲ್ಲಿ ಅನ್ನ ಕಲಸಿದ ಮಜ್ಜಿಗೆಯನ್ನು ಹಾಕಲು ಸಿದ್ಧವಾಗಿ ಕುಳಿತಿದ್ದರು ಅವನ ಹೆಂಡತಿ.

ಮುಂಜಾವಿನಿಂದ ಉಳುತ್ತಿದ್ದರೂ ಇನ್ನೂ ಅರ್ಧ ಹೊಲ ಕೂಡಾ ಉತ್ತಿದ್ದು ಪೂರ್ತಿಯಾಗಿರಲಿಲ್ಲ. ಉಳೋದೆಂದರೆ ಏನು? ಕಾಟಾಚಾರಕ್ಕೆ ಮೇಲೆ ಮೇಲೆ ಉತ್ತು ಮುಗಿಸುವುದಲ್ಲ, ನೆಲ ಅಡಿಮೇಲಾಗಬೇಕು, ಮಣ್ಣಿನ ಹೆಂಟೆಗಳು ಪುಡಿಪುಡಿಯಾಗಬೇಕು. ಬಂಡಿಗಳಲ್ಲಿ ತಂದು ತಂದು ಸುರಿದ ಗೊಬ್ಬರ ಚೆನ್ನಾಗಿ ಬೆರೆಯಬೇಕು.

ಹೊಲದಲ್ಲಿ ಒಳ್ಳೆ ಬೆಳೆ ಬರಬೇಕು.

ಗುತ್ತಿಗೆ ಹಣ ಕೊಟ್ಟಮೇಲೆ ತನ್ನ ಸಂಸಾರಕ್ಕೆ ವರ್ಷಪೂರ್ತಿ ತಿನ್ನಲು ಬೇಕು.

ಹೊಲದ ಕಡೆ ನೋಡುತ್ತಿದ್ದಂತೆ ತಿನ್ನುತ್ತಿದ್ದ ಖಾರದ ಮುದ್ದೆ ಮತ್ತಷ್ಟು ರುಚಿಯಾಗಿ ತೋರತೊಡಗಿತು ನರಸಯ್ಯನಿಗೆ. ಹೊಲ ಅಂದರೆ ಅಂತಿಂಥಾ ಹೊಲ ಅಲ್ಲ ಅದು. ಬಂಗಾರದಂಥಾ ಹೊಲ. ಇಪ್ಪತ್ತು ವರ್ಷದಿಂದ ತನ್ನ ನೇಗಿಲ ಕೆಳಕ್ಕೆ ಸಿಕ್ಕಿ ಒಂದು ಹಿಡಿತಕ್ಕೆ ಬಂದಿತ್ತು. ಹೊಲ ಯಾರದಾದರೇನು? ಇಷ್ಟು ದಿನದಿಂದಲೂ ಅದು ತನ್ನ ಬೆವರಿನಲ್ಲಿ ನೆನೆದು ಹದಗೊಂಡಿತ್ತು.

ಕುಂಟೆಯಲ್ಲಿಯ ನೀರನ್ನು ಕುಡಿಕೆಯಲ್ಲಿ ತುಂಬಿ ಕುಡಿದು ಮಜ್ಜಿಗೆಗಾಗಿ ಬೊಗಸೆಯೊಡ್ಡಿದ ನರಸಯ್ಯ. ಇಷ್ಟರಲ್ಲಿ ಪಕ್ಕದ ಹೊಲದ ಬದುವಿನ ಮೇಲಿಂದ ವೆಂಕಟ್ರಾಮಯ್ಯ ಅವರ ಮಗ ಸತ್ಯ ಬರುವುದು ಕಾಣಿಸಿತು. ಮಾಸಿದ ಗಡ್ಡ ಒಳಕ್ಕೆ ಅಂಟಿಕೊಂಡಂತಿದ್ದ ದವಡೆಗಳು; ಅರ್ಧ ತೆಗೆದು ಹೋಗಿದ್ದ ವೆಂಕಟ್ರಾಮಯ್ಯ ಏದುಸಿರು ಬಿಡುತ್ತಾ ಇನ್ನೂ ಉಳದೆ ಹಾಗೆಯೇ ಬಿಟ್ಟಿದ್ದ ತನ್ನ ಹೊಲದ ಕಡೆ ನೋಡುತ್ತಾ ನಿಧಾನವಾಗಿ ನಡೆದು ಬರುತ್ತಿದ್ದ. ಅವರನ್ನೇ ಅನುಸರಿಸಿ ಬರುತ್ತಿದ್ದ ಸತ್ಯನ ಮುಖದಲ್ಲಿ ತಂದೆಯ ನಿಧಾನದ ನಡಿಗೆಯಿಂದುಂಟಾದ ಬೇಸರ ಎದ್ದು ಕಾಣುತ್ತಿತ್ತು.

"ಬಾ, ಭಾವಾ, ಉಣ್ಣುವಿಯಂತೆ" ಎಂದ ನರಸಯ್ಯ.

ಅವರಿಬ್ಬರ ಕುಲಗಳೂ ಒಂದಲ್ಲದಿದ್ದರೂ ಪ್ರೀತಿ ವಿಶ್ವಾಸಗಳಿಗೆ ಕೊರತೆಯಿರಲಿಲ್ಲ.

"ಊಟ ಮಾಡಿಕೊಂಡೇ ಬಂದೆ ಕಣಯ್ಯಾ" ಎನ್ನುತ್ತಾ ಮರದ ಕೆಳಗೆ ಉಸ್ಸೆಂದು ಕುಳಿತರು ವೆಂಕಟ್ರಾಮಯ್ಯ. ಅವರ ಮುಖದಲ್ಲಿ ಅವರನ್ನು ಪೀಡಿಸುತ್ತಿದ್ದ ಕ್ಷಯ ವ್ಯಾಧಿಯ ಲಕ್ಷಣಗಳು ಎದ್ದು ಕಾಣುತ್ತಿದ್ದವು. ಸತ್ಯ ಮಾತ್ರ ನಿಂತೇ ಇದ್ದ.

"ಮೈಯಲ್ಲಿ ಎಂಗದೆ ಈಗ?" ಎಂದ ನರಸಯ್ಯ, ಉತ್ತರಕ್ಕಾಗಿ ಕಾಯದೆ ಸತ್ಯನ ಕಡೆ ತಿರುಗಿ "ದೊಡ್ಡಾಸ್ಪತ್ರೇಲಿ ಸೇರಿಸ್ತೀನಿ ಅಂದ್ಯಲ್ಲಾ, ಏನಾಯ್ತು?" ಎಂದ.

"ಮಂಗಳಗಿರಿ ಸ್ಯಾನಿಟೋರಿಯಂನಲ್ಲಿ ಸೇರಿಸೋಣಾಂತೀದೀನಿ ಮಾವಾ, ಆದರೆ ಅಪ್ಪ ಬರೋಕೆ ಒಪ್ತಾ ಇಲ್ಲ. ಸದಾ ನನ್ನ ಹೊಲವೊ, ಹೊಲವೋ ಅಂತಾನೆ. ಈ ಜುಜುಬಿ ಹೊಲ ಹಾಳಾಗುತ್ತೇಂತ ಗಲಾಟೆ. ಒಂದು ವರ್ಷ ಗೇಣಿಗೆ ಕೊಟ್ಟರೆ ಏನು ಮುಳುಗಿ ಹೋಗುತ್ತೆ. ನೀವು ಹೇಳಿ" ಎಂದ ಸತ್ಯ ತನ್ನ ಬೇಸರವನ್ನು ವ್ಯಕ್ತಪಡಿಸುತ್ತಾ.

"ಔದಣ್ಣ ಮತ್ತೆ, ಮೈಸಂದಾಕಿಲ್ಲಾಂದ್ರೆ ಏನು ಮಾಡೋಕಾಯ್ತದೆ? ಎಲ್ಲಾದಕ್ಕಿಂತ ಮುಖ್ಯ ಅದೇ ಅಲ್ಲವಾ? ಮಗ ಏಳ್ದಾಂಗೆ ಆಸ್ಪತ್ರೆ ಸೇರಣ್ಣಾ....." ಎಂದಳು ನರಸಯ್ಯನ ಹೆಂಡತಿ.

"ಗೆಯ್ತಾ ಗೆಯ್ತಾ ಇದ್ದ ಹೊಲ ಬಿಟ್ಟು ಹೋಗೋದೂಂದ್ರೆ ಎಂಥೋರ್ಗಾದ್ರೂ ಕಷ್ಟ ಆಯ್ತದೆ ಬುಡೇ" ಎಂದ ನರಸಯ್ಯ. ಬೊಗಸೆಯಲ್ಲಿ ಸುರಿದ ಮಜ್ಜಿಗೆ ಕುಡಿದು, ಕುಡಿಕೆಯಲ್ಲಿನ ನೀರನ್ನು ಕುಡಿದು, ಬಾಯಿ, ಮೀಸೆ ಒರೆಸಿಕೊಂಡು ಬಂದು ವೆಂಕಟ್ರಾಮಯ್ಯನ ಪಕ್ಕದಲ್ಲಿ ಕುಳಿತು ಪ್ರಾರಂಭಿಸಿದ.

"ಒಂದೊರ್ಸ ತಾನೇ? ಅಷ್ಟರಾಗೆ ಆಸ್ಪತ್ರೆಯಿಂದ ಬಂದೇ ಬತ್ತಾನೆ, ರೋಗ ವಾಸಿ ಮಾಡ್ಕೊಂಡು" ಎಂದಳು ನರಸಯ್ಯನ ಹೆಂಡತಿ.

"ಅದಲ್ಲಮ್ಮಾ, ನನಗೆ ಈ ರೋಗ ಬಂದು ಮೂಲೆಗೆ ಬಿದ್ದೆ ಅಂತಿಟ್ಟುಕೋ ಅಷ್ಟು ಮಾತ್ರಕ್ಕೆ ಹೊಲ ಕೌಲಿಗೆ ಕೊಡಬೇಕೆ? ಏನೋ ನಮ್ಮ ತಾತನ ಕಾಲದ್ದು ಎರಡೆಕರೆ ಹೊಲ ಇರೋಷ್ಟೊತ್ತಿಗೆ ಅಲ್ಲವಾ ಇಷ್ಟು ದಿನ ಈ ಸಂಸಾರದ ಬಂಡಿ ಎಳಕೊಂಡು ಬಂದದ್ದು ನಾನು? ಹಾಗೇ ನಾನು ಆಸ್ಪತ್ರೆಯಲ್ಲಿದ್ದರು ಈ ಒಂದು ವರ್ಷ ವ್ಯವಸಾಯ ಮಾಡಿದರೆ ಏನಂತೆ?" ಮಗನ ಕಡೆ ನೋಡದೆಯೇ ತನ್ನ ಮನಸ್ಸಿನಲ್ಲಿದ್ದ ದುಃಖ ಹೊರಹಾಕಿದ ವೆಂಕಟ್ರಾಮಯ್ಯ.

"ನೋಡು ಮಾವಾ, ಇದೋ ವರಸೆ. ಮಾತನಾಡಿದರೆ ನನ್ನನ್ನು ವ್ಯವಸಾಯ ಮಾಡೂಂತಾನೆ. ನೌಕರಿ ಮಾಡೋನು, ನಾನೇನು ತಾನೇ ಮಾಡಬಲ್ಲೆ? ಬೆಳಿಗ್ಗೆ ಎದ್ದು ಸೈಕಲ್ ತುಳಕೊಂಡು ಗುಂಟೂರಿಗೆ ಹೋಗಿ ಸಾಯಂಕಾಲದವರೆಗೂ ಆಫೀಸಿನಲ್ಲಿದ್ದು ಮತ್ತೆ ವಾಪಸು ಬರೋಷ್ಟು ಹೊತ್ತಿಗೆ ಕತ್ತಲಾಗುತ್ತೆ....." ಎಂದ ಸತ್ಯ.

ತಂದೆ – ಮಕ್ಕಳ ವಿವಾದವನ್ನು ಕೇಳುತ್ತಾ ಬೀಡಿ ಹೊತ್ತಿಸಿದ ನರಸಯ್ಯ.

"ಈ ಭೂದೇವೀನ ಬುಟ್ಟು ಹೋಗಬೇಕೂಂದ್ರೆ ಎಷ್ಟು ಕಷ್ಟ ಅನ್ನೋದು ಮಣ್ಣು ಮುಟ್ಟಿ ಬದ್ಕೋ ನಮಗ್ಗೊತ್ತು ಸತ್ತೆಪ್ಪಾ. ಈಗ ನನ್ನೇ ತಗಾ, ಇದು ಗೇಣಿಗೆ ತಗಂಡಿರೋ ಒಲಾನೇ ಆದ್ರೂ ದಿನಕ್ಕೊಳ್ಳು ಸತಿ ಆದ್ರು ನೋಡ್ದೆ ಇರಾಕಾಗಾಕಿಲ್ಲ ನನ್ ಜೀವಕ್ಕೆ" ಎಂದು ತನ್ನ ಹೊಲದ ಕಡೆ ಬಂಗಾರದ ಗಣಿಯನ್ನು ನೋಡಿದಂತೆ ಅಪ್ಯಾಯವಾಗಿ ನೋಡಿದ ನರಸಯ್ಯ.

ಸ್ವಲ್ಪ ಹೊತ್ತು ಯಾರೂ ಮಾತನಾಡಲಿಲ್ಲ. ಆ ಮರದ ಕೆಳಗೇ ಮತ್ತೊಂದು ಕಡೆ ಹುಲ್ಲು ಮೆಲ್ಲುತ್ತಿದ್ದ ಎತ್ತುಗಳ ಕೊರಳೊಳಗಿನ ಗಂಟೆಗಳು ಆಗಾಗ

ಸದ್ದು ಮಾಡುತ್ತಿದ್ದವು. ಆ ಸದ್ದು ಮತ್ತೊಂದು ವರ್ಷದವರೆವಿಗೂ ತನಗೆ ಕೇಳಿಸುವುದಿಲ್ಲವಲ್ಲಾ ಎಂಬ ಆಲೋಚನೆಯಿಂದ ವೆಂಕಟ್ರಾಮಯ್ಯನ ಮನಸು ಭಾರವಾಯಿತು.

"ಎಂಗೋ ಸೊಲ್ಪ ತಡಕೋ ಭಾವಾ, ನಿಂಗೇನು ಮಗ ಗುಮಾಸ್ತೆ ಕೆಲ್ಸ ಮಾಡ್ತವ್ನೆ. ಸೊಂತ ಒಲಾ ಐತೆ. ಒಂದು ವರ್ಸಾ ಕಣ್ಮುಚ್ಕೊಂಡ್ರೆ ಕಳೆದೋಗ್ತಯ್ತೆ" ಎಂದ ನರಸಯ್ಯ.

ವೆಂಕಟ್ರಾಮಯ್ಯ ಮತ್ತೇನೂ ಮಾತನಾಡದೆ ನಿಟ್ಟುಸಿರು ಬಿಟ್ಟರು.

"ನಂ ತಿರ್ಪತಯ್ಯಂಗೇನಾ ಗೇಣಿಗೆ ಕೊಟ್ಟಿದ್ದು?" ಎಂದಳು ನರಸಯ್ಯನ ಹೆಂಡತಿ.

"ಹೌದು, ಪತ್ರ ಬರಕೊಟ್ಟದ್ದೂ ಆಗಿ ಹೋಯಿತು" ಎಂದ ಸತ್ಯ ದೃಢವಾಗಿ. ಅವನಿಗೆ ಈ ಮಣ್ಣಿನ ವಾತಾವರಣದಿಂದ ಎಷ್ಟು ಬೇಗ ದೂರ ಹೋದರೆ ಅಷ್ಟು ವಾಸಿ ಅನ್ನಿಸುತ್ತಿತ್ತು.

"ಪತರಾ ಬರಕೊಂಡೂ ಆಗೋಯ್ತೇನು? ಸರ್ರಿ..... ಅಂಗಾದ್ರೆ ನಾಳ್ನಿಂದ ಉಳತಾನೆ ಬುಡು. ಪರ್ವಾಗಿಲ್ಲ ಭಾವ, ತಿರ್ಪತಿ ನಮ್ಮೋನೇಯ. ಅವಂಗಿನ್ನೂ ಸೊಂತ ವೊಲ, ಗೇಣಿಗೆ ವೊಲ ಎಲ್ಲಾ ಐತೆ. ಈ ವೊಲಾನೂ ಸಂದಾಕಿ ಗೊಬ್ರ ಆಕಿ ಮಾಡ್ತಾನೆ. ನೀನು ಸುಮ್ಕೆ ಮನಸ್ಗೆ ಅಚ್ಕೋಬೇಡ. ಮುಂದಿನೋರ್ಸ ಈಟೊತ್ತಿಗೆ ನೀನೇ ನೇಗಿಲು ಇಡೀತೀಯಾ ಬುಡು....." ಸಮಾಧಾನದ ಮಾತುಗಳನ್ನಾಡಿದ ನರಸಯ್ಯ.

ಯಾರು ಎಷ್ಟು ಹೇಳಿದರೂ ವೆಂಕಟ್ರಾಮಯ್ಯನ ಮನಸ್ಸಿಗೆ ಸಮಾಧಾನವಾಗಲೇ ಇಲ್ಲ. ಮಣ್ಣಿನ ಹೆಂಟೆಯೊಂದನ್ನು ಕೈಗೆ ತೆಗೆದುಕೊಂಡು ಸವರುತ್ತಾ ಕುಳಿತುಬಿಟ್ಟ. ಅವನ ಬೆಚ್ಚನೆಯ ಕಣ್ಣೀರು ಅದರ ಮೇಲೆ ಬಿದ್ದು ಕಾಣದಾಯಿತು.

ಒಂದು ವರ್ಷ ಉರುಳಿತು.

1980 ಜುಲೈ ಒಂದನೇ ತಾರೀಖು.

ಆಂಧ್ರದ ರೈತರ ಚರಿತ್ರೆಯಲ್ಲಿ ಸುವರ್ಣಾಕ್ಷರಗಳಲ್ಲಿ ಬರೆಯಬಹುದಾದ ತಾರೀಖು.

ಆ ದಿನಮುಂಜಾನೆ ಮೋಡ ಮುಚ್ಚಿದ್ದರಿಂದ ಸೂರ್ಯ ತನ್ನ ಬಂಗಾರದ ಕಾಂತಿಯನ್ನು ಹೊರಹೊಮ್ಮುತ್ತಿರಲಿಲ್ಲ.

ಆಗ ಆ ಕುಂಟೆಯ ಪಕ್ಕದಲ್ಲಿ ಯಾರೂ ಇರಲಿಲ್ಲ.

ಆ ಬದುವಿನ ಇಕ್ಕೆಲಗಳ ಹೊಲಗಳಲ್ಲಿ ತುಂಬಾ ಜನ ಸೇರಿದ್ದರು. ಅರಚಾಟ, ಅಳು, ಬೈಗುಳ, ಶಾಪ ಹಾಕುವಿಕೆ ನಡೆದಿತ್ತು.

ವೆಂಕಟ್ರಾಮಯ್ಯ ರೋಗ ವಿಮುಕ್ತನಾಗಿ ಸ್ಯಾನಿಟೋರಿಯಂನಿಂದ ವಾಪಸು ಬಂದು ಮೂರು ತಿಂಗಳಾಗಿತ್ತು. ಹೊಲಕ್ಕಾಗಿ ಅವನ ಜೀವ ಕಾತರಿಸುತ್ತಿತ್ತು.

"ತಿರುಪತಯ್ಯಾ, ಇದು ನಿನಗೆ ನ್ಯಾಯವಲ್ಲ. ವರ್ಷ ಕಳೆದಿದೆ, ನಾವು ಒಪ್ಪಂದ ಮಾಡಿಕೊಂಡಂತೆ ನನ್ನ ಹೊಲ ನನಗೆ ಕೊಟ್ಟುಬಿಡು. ಈ ಭೂಮಿಯನ್ನು ಬಿಟ್ಟು ಬದುಕಲಾರೆ ನಾನು....." ಎಂದ ವೆಂಕಟ್ರಾಮಯ್ಯ ಅವನ ಧ್ವನಿ ಕಂಪಿಸುತ್ತಿತ್ತು.

ತಿರುಪತಯ್ಯ ನಿರ್ಲಕ್ಷ್ಯದಿಂದ ಸೆಟೆದು ನಿಂತಿದ್ದ. ಅವನ ಹಿಂದೆ ಅವನ ಮೂರು ಜನ ಗಂಡುಮಕ್ಕಳು ಕೈಯಲ್ಲಿ ದೊಣ್ಣೆಗಳನ್ನು ಹಿಡಿದು ನಿಂತಿದ್ದರು.

ಜೇಬಿನೊಳಗಿನಿಂದ ಪತ್ರವನ್ನು ತೆಗೆದ ತಿರುಪತಯ್ಯ.

"ಇಗೋ ನೋಡು, ನಿನ್ನ ಮಗ ಸ್ವಹಸ್ತದಿಂದ ಈ ಪತ್ರ ಬರಕೊಟ್ಟಿದಾನೆ. ಇದರ ಮೇಲೆ ನಿನ್ನ ಹೆಬ್ಬೆಟ್ಟಿನ ಗುರುತು ಇದೆ. ನೀನು ನಿಮ್ಮ ಹೊಲ ನನಗೆ ಗೇಣಿಗೆ ಕೊಟ್ಟಿದ್ದಿ ಅಂತ ಇದೆ ಇದರಲ್ಲಿ....." ಎಂದ.

"ಹೌದು..... ನಿಜತಾನೇ. ಅದಕ್ಕೆ ಒಂದು ವರ್ಷ ಗೇಣಿ ಮಾಡಿದೆಯಲ್ಲಾ ಇನ್ನು ನನ್ನ ಹೊಲ ನನಗೆ ಬಿಟ್ಟುಕೊಡು....."

ತಿರುಪತಯ್ಯ ನಕ್ಕ.

"ನೋಡೋಕೆ ಅಂಗಿದೀಯ ಆದರೆ ನೀನೂ ದೇವಾಂತಕ ಕಣಪೊ, ಉಳೋಂದೇ ಭೂಮಿ ಅಂತ ಕಾನೂನು ಬಂದಿರೋದು ಗೊತ್ತೆ ಇಲ್ದಂಗೆ ಮಾತಾಡ್ತೀಯಲ್ಲಾ. ಈವೊತ್ತಿನಿಂದ ಈ ಭೂಮಿ ನಂದು....." ಎಂದ ಮೀಸೆ ತಿರುವುತ್ತಾ.

ವೆಂಕಟ್ರಾಮಯ್ಯನ ಬಾಯಿಂದ ಮಾತೇ ಹೊರಡದಂತಾಯಿತು.

"ನಿನ್ನದೇ.....!!" ಎಂದ ಸತ್ಯ ಚೇತರಿಸಿಕೊಂಡು.

"ಹೌದು, ನಮ್ಮದೇ. ಇನ್ನು ಮೇಲೆ ನೀವು ಈ ಕಡೆ ಕಾಲು ಹಾಕೋ ಹಂಗಿಲ್ಲ. ಬೆಳೆದ ಬೆಳೇಲಿ ನಿಮಗೆ ನಾಲ್ಕನೇ ಒಂದು ಭಾಗ ಕೊಡ್ತೀವಿ. ಫಸಲು ಬರದಿದ್ರೆ ಅದೂ ಇಲ್ಲ. ನೀವು ಇದನ್ನ ಮಾರಬೇಕಂದ್ರೂ ಕಡಿಮೆ ಬೆಲೇಗೆ ನಮಗೇ ಮಾರಬೇಕು. ಇದೇ ಈಗ ಹೊಸದಾಗಿ ಬಂದಿರೋ ಕಾನೂನು....." ಎಂದ ತಿರುಪತಯ್ಯನ ದೊಡ್ಡ ಮಗ, ತನ್ನ ನ್ಯೂಸ್ ಪೇಪರ್ ಪರಿಜ್ಞಾನವನ್ನು ಪ್ರದರ್ಶಿಸುತ್ತಾ.

ಎರಡನೆಯ ಮಗ ಮಾತನಾಡದೆ ತನ್ನ ಭುಜ ಬಲ ಪ್ರದರ್ಶಿಸುತ್ತಾ ದೊಣ್ಣೆ ತಿರುವುತ್ತಿದ್ದ.

"ಭೂ ಸ್ವಾಮಿಗಳ ದೌರ್ಜನಕ್ಕೆ ಧಿಕ್ಕಾರ! ಉಳುವವನದೇ ಭೂಮಿ....." ಚಿಕ್ಕ ಮಗ ತನ್ನ ಗಾಬರ್ಡಿನ್ ಪ್ಯಾಂಟು ಸರಿಪಡಿಸಿಕೊಳ್ಳುತ್ತಾ ಸ್ಲೋಗನ್ ಕೂಗುತ್ತಿದ್ದಂತೆ ಹೇಳಿದ. ಅವನು ಪಟ್ಟಣದಲ್ಲಿ ಓದುತ್ತಿದ್ದ, ಪ್ರಗತಿಪರ ಭಾವಗಳನ್ನು ಹೊಂದಿರುವ ಯುವಕ. ವಿದ್ಯಾರ್ಥಿಗಳ ಚಟುವಟಿಕೆಗಳಲ್ಲಿಯೂ, ಪ್ರಜಾಪ್ರಭುತ್ವದ ಚಟುವಟಿಕೆಗಳಲ್ಲಿಯೂ ಪಾಲ್ಗೊಳ್ಳುತ್ತಿರುವವ.

ವೆಂಕಟ್ರಾಮಯ್ಯ ತಟ್ಟನೆ ಮುಂದೆ ಬಂದು ತಿರುಪತಯ್ಯನ ಕೈಗಳನ್ನು ಹಿಡಿದುಕೊಂಡ.

"ತಿರುಪತಯ್ಯ, ಚಿಕ್ಕಂದಿನಿಂದ ಅಣ್ಣ ತಮ್ಮಂದಿರಂತೆ ಇರೋದುನಾವು. ನಮ್ಮ ಹೊಟ್ಟೆಯ ಮೇಲೆ ಹೊಡೆಯಬೇಡ. ನಮಗೆ ಇರೋದು ಈ ಎರಡೆಕರೆ ಜಮೀನು ಮಾತ್ರಾನೇ. ಹತ್ತೆಕರೆ ಸ್ವಂತ ಹೊಲ ಇಪ್ಪತ್ತೆಕರೆ ಗೇಣಿ ಹೊಲ

ಮಾಡಿಕೊಂಡಿರೋನು ನೀನು. ನನ್ನೊಬ್ಬನ ಹೊಲ ಬಿಟ್ಟರೆ ನಿನಗೇನೂ ಕಡಿಮೆಯಾಗೊಲ್ಲ. ನಿನ್ನ ಕಾಲು ಹಿಡೀತೀನಿ, ನಮ್ಮನ್ನು ದಿಕ್ಕಿಲ್ಲದ ಪಕ್ಷಿಗಳನ್ನಾಗಿ ಮಾಡಬೇಡ." ಎಂದು ದೈನ್ಯದಿಂದ ಕೇಳಿಕೊಂಡ.

ತಿರುಪತಯ್ಯ "ಏಹ್..... ವೋಗೋಗು....." ಎಂದು ಅವನ ಕೈಗಳನ್ನು ಕೊಡವಿ "ಗತಿಯಿಲ್ಲಾಂತ ಸುಳ್ಸುಳ್ಳೇ ಕೂಗಾಡ್ಬೇಡ. ನಿಂಗೇನು? ಮಗ ಅದಾನೆ, ಗುಮಾಸ್ತೆ ಕೆಲ್ಸಾ ಮಾಡ್ತಾವ್ನೆ" ಎಂದ.

"ನೀವೆಲ್ಲ ಮೇಲಿನ ವರ್ಗದವರು, ನಿಮ್ಮ ಹೆಚ್ಚುಗಾರಿಕೆ ಇನ್ನು ಮುಂದೆ ನಡೆಯಗೊಡಲ್ಲ. ಉದ್ಯೋಗಗಳೂ ನಿಮಗೇ, ವ್ಯವಸಾಯನೂ ನಿಮಗೇನೇನು?" ಎಂದು ಗರ್ಜಿಸಿದ ಪ್ರಗತಿಪರ ಭಾವಗಳನ್ನು ತುಂಬಿಕೊಂಡ ತಿರುಪತಯ್ಯನ ಚಿಕ್ಕ ಮಗ.

ಸತ್ಯನ ಯುವಕ ರಕ್ತ ಉಕ್ಕಿ ಬಂತು.

ಒಂದು ವರ್ಷ ಗೇಣಿ ಮಾಡಿದ ಮಾತ್ರಕ್ಕೇ ಹೊಲಾ ನಿಮ್ಮದಾಗುತ್ತೇನು? ಕೋರ್ಟು, ಸರ್ಕಾರ ಎಲ್ಲಾ ಕುರುಡೇನು?" ಎಂದ.

ತಿರುಪತಯ್ಯನ ಮಕ್ಕಳು ಗಟ್ಟಿಯಾಗಿ ನಕ್ಕರು.

"ವೋಗೋಲೇ..... ಯಾರಿಗೇಳಿಕೋತಿಯೋ ಏಳ್ಕೊ"

"ಆಗಲಿ, ಅದು ನೋಡೋಣ."

"ಏನೋ ನೋಡಾದು, ಬಾರೋ ಲೋ ನೋಡಾನ....." ದೊಣ್ಣೆಗಳನ್ನು ಹಿಡಿದು ಮುಂದೆ ಬಂದರು. ತಿರುಪತಯ್ಯನ ಜಟ್ಟಿಗಳಂತಹ ಮಕ್ಕಳು.

ತಿರುಪತಯ್ಯನ ಕಣ್ಣು ಕೆಂಪಾಯಿತು. ತಂದೆ – ಮಕ್ಕಳ ಕಡೆ ನೋಡಿ "ಏನ್ರೋ, ನೀವು ನನ್ನ ಹೊಲದಿಂದಾಚೆಗೆ ವೋಗ್ತೀರೋ ಇಲ್ವೋ" ಎಂದು ಗರ್ಜಿಸಿದ.

"ಇದು ನನ್ನ ಹೊಲ. ಎಂದಿಗೂ ನನ್ನದೇ. ನಾನು ಬದುಕಿದ್ರೂ ಸತ್ತರೂ ಇಲ್ಲಿಯೇ....." ಎಂದ ವೆಂಕಟ್ರಾಮಯ್ಯ ದೃಢವಾಗಿ.

"ಸರಿ, ಅಂಗಾದ್ರೆ..... ಇಲ್ಲೇ ಸಾಯಿ....." ಅಂತ ವೆಂಕಟ್ರಾಮಯ್ಯನನ್ನು ತಳ್ಳಿದ ತಿರುಪತಯ್ಯ.

ಇಷ್ಟರಲ್ಲಿ "ನಿಲ್ಲಿ, ನಿಲ್ಲಿ....." ಎನ್ನುತ್ತಾ ಬದುವಿನ ಮೇಲಿದ್ದ ಪಟೇಲ ಓಡೋಡಿ ಬಂದ.

ಕೆಳಗೆ ಬಿದ್ದು ಮೈ ಕೈ ಎಲ್ಲಾ ಮಣ್ಣಾಗಿದ್ದರು ಲೆಕ್ಕಿಸದೆ ಮೇಲೆದ್ದು ಪಟೇಲನ ಕೈ ಹಿಡಿದುಕೊಂಡ ವೆಂಕಟ್ರಾಮಯ್ಯ.

"ಅಯ್ಯಾ, ಅಯ್ಯಾ ನೀವಾರಾ ನ್ಯಾಯ ಹೇಳಿ. ರೋಗ ಬಂದು ಒಂದು ವರ್ಷ ಗೇಣಿಗೆ ಕೊಟ್ಟದ್ದಕ್ಕೇ ನಂದೇ ಜಮೀನು ಅಂತಿದಾನೆ, ತಿರುಪತಯ್ಯ. ನಮ್ಮ ತಾತ, ನಮ್ಮ ಅಯ್ಯ, ನಾನು ಈ ಹೊಲಾನೇ ನಂಬಿಕೊಂಡು ಮೈಮುರಿಯ ದುಡಿದು ಬದುಕಿರೋದು. ಈಗ ಹೊಸದಾಗಿ ಏನೋ ಕಾನೂನು ಬಂದಿದೆ ಅಂತ ಅದನ್ನು ಕಿತ್ತುಕೊಂಡರೆ ನನ್ನ ಗತಿ ಏನು?" ಎಂದ ವೆಂಕಟ್ರಾಮಯ್ಯ ದೈನ್ಯದಿಂದ.

"ಎಲ್ಲಾ ತಿಳಿಯಿತು ವೆಂಕಟ್ರಾಮಯ್ಯ, ಏನು ಮಾಡೋಣ, ನಿನ್ನ ದುರದೃಷ್ಟ! ಪತ್ರ ಬೇರೆ ಬರಕೊಟ್ಟಿದ್ದೀ....."

"ಬಾಯಿಮಾತಿನ ಕರಾರು ಆದರೂ, ಕಾನೂನಿನ ಪ್ರಕಾರ ಪತ್ರ ಬರಕೊಟ್ಟಷ್ಟೇ ಗಟ್ಟಿ, ಗೊತ್ತಿದೆಯೇ ಪಟೇಲರೇ....." ಎಂದ ತಿರುಪತಯ್ಯನ ಮಗ ವ್ಯಂಗ್ಯವಾಗಿ.

"ಇನ್ನು ಏನಂದುಕೊಂಡರೂ ಪ್ರಯೋಜನವಿಲ್ಲ ವೆಂಕಟ್ರಾಮಯ್ಯ. ವರ್ಷಕ್ಕೊಂದು ಸಲ ಅವರು ಕೊಟ್ಟದ್ದನ್ನು ತೆಗೆದುಕೊಂಡು ಸುಮ್ಮನಿರ ಬೇಕಾದ್ದೇ....." ಎಂದ ಪಟೇಲ.

ತಿರುಪತಯ್ಯ ಮೀಸೆ ತಿರುವುತ್ತಾ,

"ಮೊದಲು ಅವರನ್ನು ನನ್ನ ಹೊಲದಿಂದ ಆಚೆ ಹೋಗು ಅಂತ ಏಳಿ ಪಟೇಲರೇ" ಎಂದ.

"ಬಾ, ವೆಂಕಟ್ರಾಮಯ್ಯ ಹೋಗೋಣ" ಎಂದ ಪಟೇಲ ನೊಂದುಕೊಳ್ಳುತ್ತಾ.

...ದಿಂದ ನಾನೇ ಹೊರಟು ಹೋಗಬೇಕೆ? ಊಹುಂ.... ...ಸತ್ತರೂ ಇಲ್ಲಿಂದ ಕದಲೊಲ್ಲ ನಾನು. ಈ ಭೂಮಾತೆ ...ಇಷ್ಟು ದಿನ ಅನ್ನ ಕೊಟ್ಟ ತಾಯಿ..... ನನ್ನನ್ನ ಈ ಮಣ್ಣಿನಲ್ಲೇ ಹು... ಅಮ್ಮಾ..... ನಿನ್ನ ಬಿಟ್ಟು ಬದುಕಲಾರೆ..... ತಾಯೀ....." ಎನ್ನುತ್ತಾ ನೆಲದ ಮೇಲೆ ಬಿದ್ದು ಹೊರಳಾಡುತ್ತಾ ಅಳಲಾರಂಭಿಸಿದ ವೆಂಕಟ್ರಾಮಯ್ಯ

ಪಟೇಲನ ಕಣ್ಣಲ್ಲೂ ನೀರು ಬಂತು.

ತಿರುಪತಯ್ಯ ಅವನ ಮಕ್ಕಳು ಕೇಕೆ ಹಾಕಿ ನಗತೊಡಗಿದರು. ಸತ್ಯ ಏನು ಮಾಡಲೂ ತೋಚದವನಂತೆ ಬೆಪ್ಪಾಗಿ ನಿಂತುಬಿಟ್ಟ.

ಅದೇ ಸಮಯದಲ್ಲಿ ಪಕ್ಕದ ಹೊಲದಲ್ಲಿ ಇದೇ ರೀತಿ ಗಟ್ಟಿಯಾಗಿ ಕೂಗಾಟ ಕೇಳಿ ಬರುತ್ತಿತ್ತು.

ಆ ಹೊಲದ ಯಜಮಾನ ಕನಕಯ್ಯನವರು ಸ್ವತಃ ತಾವೇ ಹೊಲದಲ್ಲಿ ನಿಂತಿದ್ದರು. ಹೊಲ ಉಳಲು ಟ್ರ್ಯಾಕ್ಟರು, ನರಸಯ್ಯನ ನೇಗಿಲೂ ಎದುರೆದುರಾಗಿ ನಿಂತಿದ್ದುವು. ಕನಕಯ್ಯನವರ ಸುತ್ತಲೂ ಸಾಕಷ್ಟು ಜನ ಅವರ ಬೆಂಬಲವಾಗಿ ನಿಂತಿದ್ದರು. ಶಾನುಭೋಗರೂ ಒಂದು ಮೂಲೆಗೆ ಸರಿದು ನಿಂತಿದ್ದರು.

ಕನಕಯ್ಯನವರೆಂದರೆ ಸಾಧಾರಣ ಮನುಷ್ಯರೇನಲ್ಲ. ಸುತ್ತಮುತ್ತಲಿನ ನಾಲ್ಕು ಗ್ರಾಮಗಳಿಗೆ ಜಮೀನುದಾರರು. ಮಕ್ಕಳು ಮರಿಗಳ ಹೆಸರಿನಲ್ಲಿ ಮಾಡಿರುವ ಜಮೀನೇ ನೂರಾರು ಎಕರೆಗೆ ಮೇಲೆ ಇದ್ದೀತು. ಪಟ್ಟಣದಲ್ಲಿ ಬೇಕಾದಷ್ಟು ಕಾಂಟ್ರಾಕ್ಟ್‌ಗಳು ಬೇರೆ ಇತ್ತು. ದೊಡ್ಡ ಮಗ ಪೋಲೀಸ್ ಅಧಿಕಾರಿ. ಚಿಕ್ಕಮಗ ಸಮಿತಿ ಪ್ರೆಸಿಡೆಂಟ್, ಅಳಿಯ ಕಮರ್ಷಿಯಲ್ ಟ್ಯಾಕ್ಸ್ ಆಫೀಸರ್. ಎಂ.ಎಲ್.ಎ., ಎಂ.ಪಿ., ಮಂತ್ರಿಗಳು ಎಲ್ಲರಿಗೂ ಕನಕಯ್ಯನವರೆಂದರೆ ಗೌರವ. ಅಂತಹ ಕನಕಯ್ಯನವರು ಸ್ವತಃ ಹೊಲಕ್ಕಿಳಿದರೆ ಇನ್ನು ನರಸಯ್ಯ ನಡುಗದೆ ಇದ್ದಾನೆಯೇ?

"ಎಷ್ಟೋ ವರ್ಷದಿಂದ ಪಾದತ್ತಾವ ಬದುಕ್ತಿದೀವಿ. ಇಪ್ಪತ್ತೊರ್ಸದಿಂದ ಈ ವೊಲಾನೇ ನಂಬ್ಕೊಂಡಿದೀವಿ. ಈಗ ವೋಗು ಅಂದ್ರೆ ದಿಕ್ಕಿಲ್ದ ಪರ್ದೇಸಿಗಳಾಗ್ತೀವಿ ನನ್ನೊಡ್ಯಾ. ನಂ ಮ್ಯಾಕೆ ದಯೆ ತೋರ್ಸಿ ಬುದ್ಧಿ, ನಿಂ

ಕಾಲಿಗ್ಬಿಳ್ತೀನಿ....." ಎಂದು ಬಗ್ಗಿ ಕನಕಯ್ಯನವರ ಕಾಲುಗಳನ್ನು ಹಿಡಿಯ ಹೋದ ನರಸಯ್ಯ.

ನರಸಯ್ಯನ ಹೆಂಡತಿಯೂ ಅದೇ ಪರಿಸ್ಥಿತಿಯಲ್ಲಿ ಕಣ್ಣೀರು ಸುರಿಸುತ್ತಾ ನಿಂತಿದ್ದಳು.

ನರಸಯ್ಯನ ಕೈಗಳು ತನ್ನ ಗ್ಲಾಸ್ಕೋ ಪಂಚೆಯನ್ನು ಮುಟ್ಟದಂತೆ ಹಿಂದಕ್ಕೆ ಜರುಗಿದರು ಕನಕಯ್ಯ. ನಿಧಾನವಾಗಿ, ಶಾಂತರಾಗಿ ಹೇಳಿದರು :

"ನೋಡು ನರಸಯ್ಯ, ನಿನ್ನ ಹತ್ತಿರ ಗುಟ್ಟೇನಿಲ್ಲ. ಈ 'ಉಳುವವನೇ ಭೂಮಿ' ಅಂತ ಕಾನೂನು ಬಂದಿದೆಯಲ್ಲಾ, ಆದ್ದರಿಂದ ನನ್ನ ಹುಷಾರಿನಲ್ಲಿ ನಾವಿರೋಣ ಅಂತ ಗೇಣಿಗೆ ಕೊಟ್ಟಿರೋ ಭೂಮಿಗಳನ್ನೆಲ್ಲಾ ಸ್ವಾಧೀನಪಡಿಸಿ ಕೋತಾ ಇದೀನಿ. ಹಾಗೇನೆ ಇದೂನು. ನೀನೆಷ್ಟು ಅತ್ತರೂ ಪ್ರಯೋಜನವಿಲ್ಲ. ಹೋಗಿ ಬೇರೆ ಕಡೆ ಯಾರದಾದರೂ ಹೊಲ ಮಾಡಿಕೋ....."

"ಇಪ್ಪತ್ತೊರ್ಸದಿಂದ ಗೆಯ್ತಿರೋ ವೊಲಾನೇ ತಾವು ಕಿತ್ಕೊಂಡಿದೀರಾ, ಮತ್ಯಾರು ಕೊಟ್ಟಾರು ನನ್ನೊಡೆಯಾ....."

"ಅದಕ್ಕೆ ನಾನೇನ್ಮಾಡ್ಲಿ? ಯಾರ ಕರ್ಮ ಅವರದ್ದು. ಲೋ..... ಟ್ರ್ಯಾಕ್ಟರು ಸ್ಟಾರ್ಟ್ ಮಾಡ್ರೋ....." ಎಂದು ಕೆಲಸದವರಿಗೆ ಆಜ್ಞಾಪಿಸಿದರು ಕನಕಯ್ಯ.

ತಟ್ಟನೆ ಟ್ರ್ಯಾಕ್ಟರಿಗೆ ಅಡ್ಡ ಬಂದ ನರಸಯ್ಯ.

"ಈ ತಾಯೀನ್ಬುಟ್ಟು ಬದುಕ್ಲಾರೆ..... ನನ್ನೆಣದ ಮೇಲೋಗ್ಲಿ ಟ್ರ್ಯಾಕ್ಟರು....."

ಕನಕಯ್ಯನವರ ಕಣ್ಣು ಕೆಂಪಾಯಿತು.

"ಇವನು, ಇವನ ನೇಗಿಲನ್ನ ಎತ್ಕೊಂಡೋಗಿ ಹೊಲದ ಆಚೆ ಎಸೆದು ಬನ್ನಿರೋ....." ಎಂದು ಆಜ್ಞಾಪಿಸಿದರು.

ಬಲಿಷ್ಠರಾದ ಇಬ್ಬರು ನೌಕರರು ನರಸಯ್ಯನನ್ನ ಹಿಡಿದು ಮೇಲಕ್ಕೆತ್ತಿದರು. ನರಸಯ್ಯನ ಹೆಂಡತಿ ಬಾಯಿ ಬಡಿದುಕೊಳ್ಳಲಾರಂಭಿಸಿದಳು.

ನರಸಯ್ಯ ಅಳುತ್ತಳುತ್ತಲೇ,

"ಸಾನುಬೋಗ್ರೇ, ನೀವಾರಾ ನ್ಯಾಯಾ ಏಳಿ ದೇವ್ರೆ ನನ್ಗತಿ ಏನಪ್ಪೋ....." ಎಂದ.

ಆ ಮಾತು ಕೇಳಿ ಕನಕಯ್ಯ ಬೆಂಕಿಯಾದರು.

"ಯಾವನೋ ಈ ಊರ್ನಲ್ಲಿ ನಂಗೆ ನ್ಯಾಯಾ ಹೇಳೋನು..... ಲೋ ನರಸಿಗಾ, ಎಲ್ಲಾದರೂ ಬಾಯಿ ಮಾತಿನ ಕರಾರು, ಅದು ಇದೂ ಅಂತ ಕೂಗಾಡಿದೆಯೋ, ಉಳೋನದೇ ಭೂಮಿ ಅಂತೇನಾದ್ರೂ ನಿನ್ಬಾಯಲ್ಲಿ ಬಂತೋ, ನಿನ್ನನ್ನು, ನಿಂಗೆ ಸಹಾಯಕ್ಕೆ ಬರೋರನ್ನ ಇದೇ ಹೊಲದಲ್ಲಿ ಹೂಳಿ ಬಿಟ್ಟು ಹುಟ್ಟಲಿಲ್ಲಾ ಅನ್ನಿಸ್ಬಿಡ್ತೀನಿ..... ಹುಷಾರ್....."

ಕನಕಯ್ಯನವರ ಕಂಠದಲ್ಲಿನ ತೀಕ್ಷ್ಣತೆಗೆ ಸುತ್ತಮುತ್ತಲಿನ ಮರಗಿಡಗಳ ಮೇಲಿದ್ದ ಪಕ್ಷಿಗಳು ಹಾರಿಹೋದವು.

ಕನಕಯ್ಯನವರ ನೌಕರರು ನರಸಯ್ಯನನ್ನೂ, ಅವನ ನೇಗಿಲನ್ನೂ ಎತ್ತಿ ಹೊಲದ ಆಚೆ ಕುಕ್ಕಿ ಅಲ್ಲಿಯೇ ನಿಂತರು.

ನರಸಯ್ಯ ಅವನ ಹೆಂಡತಿ ಗೋಳಾಡುತ್ತಲೇ ಇದ್ದರು.

"ವೊಲಾ ವೋಯ್ತು..... ನಂತಾಯಿವೋದ್ಲು..... ನಾನೆಂಗೆ ಬದುಕ್ಲಿ ದೇವ್ರೇ....." ಎಂದಳುತ್ತಾ ನರಸಯ್ಯ ಮಣ್ಣನ್ನು ಎತ್ತಿ ತಲೆಯ ಮೇಲೆ ಸುರಿದುಕೊಳ್ಳಲಾರಂಭಿಸಿದ.

ಶಾನುಭೋಗರು ನಿಧಾನವಾಗಿ ಅವನ ಬಳಿ ಬಂದರು.

"ನರಸಯ್ಯ!"

"ಅಯ್ಯಾ, ಸಾನ್ಬೋಗ್ರೇ..... ಇಟ್ಟು ಅನ್ನಾಯ ನಡೀತ್ತೈತೆ, ಎಲ್ರೂ ನೋಡ್ತಾ ಸುಮ್ಕೆ ಅವ್ರಲ್ಲಾ. ರಾತ್ರಿ, ಅಗಲೂ, ಬಿಸಿಲೂ, ಮಳೆ, ಲೆಕ್ಕಮಾಡ್ದೆ, ಎಂಗಿದ್ದ ಭೂಮಿನ ಎಂಗೆ ಮಾಡ್ದೆ ನಾನು. ನನ್ ಬೆವರ್ಸುರ್ಸಿ, ವೊಲಾನ ಬಂಗಾರ್ದಾಂಗೆ ನೋಡ್ಕೊಂಡೆ..... ಎಲ್ರಿಗೂ ಗೊತ್ತಲ್ವಾ, ಆದ್ರೂ ನನ್ಗತಿ ಇಸ್ಟೇಯಾ? ಏಳ್ರಿ ಸಾಮೀ ಏಳ್ರೀ....."

"ನರಸಯ್ಯಾ, ಹೊಲಾ ಗೇಣೀಗೆ ತಗೊಂಡಿದೀಯಾಂತ ಒಂದು ಪತ್ರ ಕೂಡಾ ಇಲ್ಲ ನಿಂತಾವ. ಇದ್ರೂ ಏನೂ ಮಾಡೋಕಾಗೊಲ್ಲ ಬಿಡು. ಬಲ ಇರೋಂದೇ ರಾಜ್ಯ, ಕನಕಯ್ಯನವರಿಗೆ ವಿರುದ್ಧವಾಗಿ ಸಾಕ್ಷ್ಯ ಹೇಳಿ ಬದುಕೋರು ಯಾರಿದಾರೆ ಈ ಊರ್‍ನಲ್ಲಿ? ಸುಮ್ನೆ ಅತ್ತು ಏನು ಪ್ರಯೋಜನ? ಗಟ್ಟಿ ಮನಸು ಮಾಡ್ಕೊಂಡು, ಬದುಕೋ ದಾರಿ ಹುಡುಕ್ಕೋಬೇಕಪ್ಪ....."

"ಈ ಆಳು ಕಾನೂನು ಬಂದು ನನ್ಮನೆ ಆಳಾಯ್ತಪ್ಪೋ" ಎಂದು ಮತ್ತೆ ಎದೆ ಬಡಿದುಕೊಂಡ ನರಸಯ್ಯ.

"ಕಾನೂನು ಯಾವಾಗ್ಲೂ ಬಡವರನ್ನೇ ಸತಾಯಿಸುತ್ತೆ ನರಸಯ್ಯ. ನೀನು ಗೇಣಿದಾರನಾದ್ರೂ ಬಡವ, ಆದ್ದರಿಂದ ನಿಂಗೆ ಇದ್ದ ಆಧಾರನೂ ಕಳಕೊಂಡೆ. ಮತ್ತೆ ಹೊಲದ ಯಜಮಾನ ವೆಂಕಟ್ರಾಮಯ್ಯನ ಗತಿ ನೋಡು. ಗೇಣಿದಾರ ತಿರುಪತಯ್ಯನಿಗೆ ಶ್ರೀಮಂತಿಕೆ, ಮೈಬಲ ಎರಡೂ ಇದೆ. ಆದ್ದರಿಂದಲೇ ಇದೇ ಕಾನೂನಿನ ಆಧಾರದ ಮೇಲೆ ವೆಂಕಟ್ರಾಮಯ್ಯನನ್ನು ಅವನ ಹೊಲದಿಂದಲೇ ಹೊರಗೆ ಹಾಕಿದಾನೆ. ಅಲ್ಲಿ ನೋಡು, ವೆಂಕಟ್ರಾಮಯ್ಯ ತನ್ನ ಹೊಲದ ಮಣ್ಣಿನಲ್ಲಿ ಬಿದ್ದು ಹೇಗೆ ಹೊರಳಾಡುತ್ತಿದ್ದಾನೇ....."

ತನ್ನ ಅಳುವನ್ನು ನುಂಗಿ ನರಸಯ್ಯ ಪಕ್ಕದ ಹೊಲದ ಕಡೆ ನೋಡಿದ.

ಹೊಲದ ಮಣ್ಣಿನಲ್ಲಿ ಹೊರಳಾಡುತ್ತಾ ಹುಚ್ಚನಂತೆ ಮಣ್ಣನ್ನು ಮೈಗೆಲ್ಲಾ ಬಳಿದುಕೊಳ್ಳುತ್ತಾ, ಕಣ್ಣೀರಿನಿಂದ ಹೊಲವನ್ನು ತೋಯಿಸುತ್ತಿದ್ದ ವೆಂಕಟ್ರಾಮಯ್ಯ ಕಾಣಿಸಿದ. ಅದನ್ನು ಕಂಡು ನರಸಯ್ಯನ ದುಃಖ ಎರಡರಷ್ಟಾಯಿತು.

"ಭಾವಾ" ಎಂದು ಆಕ್ರೋಶಿಸುತ್ತಾ ನರಸಯ್ಯ ಅತ್ತ ಕಡೆ ದಾಪುಗಾಲು ಹಾಕಿದ.



## ಅಳಿಲುಸೇವೆ

ಮೂಲ : ಶ್ರೀಮತಿ ಜಿ. ಸೀತಾದೇವಿ

ಬಾಬು, ರಾಣಿ, ಇಷ್ಟು ಹೊತ್ತಿಗಾಗಲೇ ಬಂದು ಕಾದು ನಿಂತಿರಬೇಕಾಗಿದ್ದ ತಮ್ಮ ಆಯಾಗೋಸ್ಕರ ಎದುರು ನೋಡುತ್ತಿದ್ದರು. ಪ್ರತಿದಿನವೂ ಆಯಾ ಸೀತೆ ಸ್ಕೂಲು ಬಿಡುವುದಿಕ್ಕೆ ಮೊದಲೇ ಬಂದು ಅಲ್ಲಿ ನಿಂತಿರುತ್ತಿದ್ದಳು. ಈ ದಿನ ಮಕ್ಕಳೇ ಅವಳಿಗಾಗಿ ಎರಡು ನಿಮಿಷ ಎದುರು ನೋಡಿದರು. ಬಾಬುಗೆ ಎಂಟು ವರ್ಷ, ರಾಣಿಗೆ ಆರುವರ್ಷ, ಹತ್ತು ನಿಮಿಷವಾಯಿತು. ಕಾಲು ಗಂಟೆಯಾಯಿತು. ಮಿಕ್ಕ ಹುಡುಗರೆಲ್ಲಾ ಹೊರಟು ಹೋಗುತ್ತಿದ್ದರು. ಆದರೆ ಸೀತೆ ಎಲ್ಲೂ ಕಾಣಲಿಲ್ಲ. ರಾಣಿಗಾಗಲೇ ಹಸಿವಿನ ನೆನಪಾಗತೊಡಗಿತ್ತು.

"ಅಣ್ಣಾ, ಹಸಿವು....." ಎಂದಳು ಮುಖ ಸಪ್ಪಗೆ ಮಾಡಿಕೊಂಡಳು.

"ಸೀತೆ ಬರಲಿಲ್ಲ. ಹೋಗಲಿ, ನಾವಿಬ್ಬರೂ ರಸ್ತೆ ದಾಟಿ ಮನೆಗೆ ಹೊರಟು ಹೋಗೋಣವೇ?" ಎಂದ ಪುಸ್ತಕದ ಚೀಲವನ್ನು ಭುಜದ ಮೇಲಿಂದ ಇಳಿಬಿಡುತ್ತಾ.

"ಅಬ್ಬಾ!....." ಎಂದಳು ರಾಣಿ. ರಸ್ತೆಯಲ್ಲಿ ವೇಗವಾಗಿ ಅತ್ತಿಂದಿತ್ತ ಬಂದು ಹೋಗುತ್ತಿದ್ದ ವಾಹನಗಳನ್ನು ನೋಡಿದರೆ ಹೆದರಿಕೆ ಆಗುತ್ತಿತ್ತವಳಿಗೆ.

"ಪರವಾಗಿಲ್ಲ ಕಣೇ. ನಾನು ಕರಕೊಂಡು ಹೋಗ್ತೀನಿ. ನನ್ನ ಕೈ ಹಿಡಿದುಕೊಂಡು ಬಾ" ಎಂದು ಧೈರ್ಯ ಹೇಳಿದ ಬಾಬು. ರಾಣಿ ಹೆದರಿಕೆಯಿಂದ "ಬೇಡಣ್ಣ, ಅಮ್ಮ ಬೈತಾಳೆ" ಎಂದಳು.

"ಬಯ್ಯೊಲ್ಲ ಕಣೇ, ನಾನು ಹೇಳ್ತೀನಿ ಅಮ್ಮಂಗೆ" ಎಂದು ತಂಗಿಯ ಕೈಯನ್ನು ಗಟ್ಟಿಯಾಗಿ ಹಿಡಿದುಕೊಂಡು ರಸ್ತೆಯನ್ನು ದಾಟಲು ಪ್ರಯತ್ನಿಸಿದ

ಬಾಬು. ಬಂದು ಹೋಗುವ ವಾಹನಗಳಿಂದ ರಸ್ತೆ ತುಂಬಿ ಹೋಗಿತ್ತು. ಸಮಯಕ್ಕಾಗಿ ಕಾಯುತ್ತಿದ್ದ ಬಾಬು ಎರಡೂ ಕಡೆ ನೋಡಿ, "ಹಾಂ, ಈಗ ಬಾ" ಎಂದು ರಸ್ತೆಯಲ್ಲಿ ಹೆಜ್ಜೆಯಿಟ್ಟ. ಮತ್ತೊಂದು ಕಡೆಯಿಂದ ಲಾರಿಯೊಂದು ವೇಗವಾಗಿ ಬರುತ್ತಿತ್ತು.

"ಅಣ್ಣಾ....." ಎಂದು ಕೂಗಿಕೊಂಡ ರಾಣಿ, ರಸ್ತೆಗಿಳಿಯುತ್ತಿದ್ದ ಬಾಬು ಇಬ್ಬರನ್ನೂ ಒಟ್ಟಿಗೆ ಹಿಂದಕ್ಕೆಳೆದುಕೊಂಡ ಸೀತೆ ಯಾವಾಗ ಬಂದಳೆಂಬುದು ಆ ಅಣ್ಣ ತಂಗಿಯರಿಗೆ ತಿಳಿಯಲೇ ಇಲ್ಲ. ಲಾರಿ ವೇಗವಾಗಿ ಹೊರಟು ಹೋಗಿತ್ತು.

"ಹಮ್ಮಯ್ಯ....." ಸೀರೆಯನ್ನು ಆತುನಿಂತ ಮಕ್ಕಳಿಬ್ಬರ ಕಂಠದಿಂದಲೂ ನಿಶ್ಚಿಂತೆಯ ಉದ್ಗಾರ ಹೊರಬಿತ್ತು.

"ನಾನು ಬರೋಕೆ ಮುಂಚೆ ನೀವೇ ರಸ್ತೆ ದಾಟಲು ಹೋಗಬಹುದೇನಪ್ಪಾ....." ಎನ್ನುತ್ತಾ ಇಬ್ಬರನ್ನೂ ಕೈಹಿಡಿದು ರಸ್ತೆ ದಾಟಿಸಿ ಮುಂದೆ ನಡೆಯಲಾರಂಭಿಸಿದಳು ಸೀತೆ.

"ನಾನು ಬೇಡ ಅಂದರೂ ಅಣ್ಣಾನೇ ಹೋಗೋಣ ಅಂದಿದ್ದು" ರಾಣಿ ಮುಖ ಉಬ್ಬಿಸಿ ದೂರು ಹೇಳಿದಳು.

"ಮತ್ತೆ, ನೀನು ಯಾಕೆ ಇಷ್ಟು ಹೊತ್ತು ಮಾಡಿದ್ದು" ಎಂದ ಬಾಬು. ಅವನಿಗೆ ಸೀತೆಯೆಂದರೆ ತುಂಬಾ ಇಷ್ಟ.

"ನಮ್ಮ ತಂದೆಗೆ ಜ್ವರ ಕಣಪ್ಪಾ, ಔಷಧಿ ತಂದುಕೊಟ್ಟು ಬರೋ ಹೊತ್ತಿಗೆ ಲೇಟಾಯಿತು."

"ಹಾಗೇನು? ಅಯ್ಯೋ ಪಾಪ! ಮತ್ತೆ ಅಮ್ಮ ನಾವು ಬರ್ಲಿಲ್ಲಾಂತ ಗಾಬರಿಪಡ್ತಾ ಇರ್ತಾಳೆ" ಎಂದಂದು ಸ್ಕೂಲಿನಲ್ಲಿ ನಡೆದ ವಿಶೇಷಗಳನ್ನು ಹೇಳಲಾರಂಭಿಸಿದ. ತಾನು ನೋಡಿದ ಸಿನಿಮಾ, ತಿಂದ ಚಾಕ್ಲೆಟ್, ಆಡಿದ ಆಟಗಳನ್ನು ಕುರಿತೆಲ್ಲಾ ಸೀತೆಗೆ ಹೇಳುವುದು ಅಭ್ಯಾಸ ಬಾಬುವಿಗೆ.

ಸೀತೆ ಎಲ್ಲವನ್ನೂ ಮನಸ್ಸಿಟ್ಟು ಕೇಳುತ್ತಾ ಒಂದೊಂದು ಮಾತಿಗೆ ಉತ್ತರ ಹೇಳುತ್ತಾ ಹೆಜ್ಜೆ ಹಾಕತೊಡಗಿದಳು.

"ಸೀತಾ, ಈವತ್ತು ನಮ್ಮನೇಗೆ ಕಲ್ಕತ್ತಾದಿಂದ ಮಾಮ ಬಂದಿದ್ದಾರೆ. ಮತ್ತೆ ಚಿಕ್ಕಪ್ಪ ಕೂಡಾ ಬಂದಿದಾರೆ. ಅವರು ಯುದ್ಧದಲ್ಲಿ ಕೆಲಸ ಮಾಡ್ತಿದಾರಂತೆ. ನೀನು ನೋಡಿದೀಯಾ? ನಾನೂ ಚೆನ್ನಾಗಿ ಓದಿಕೊಂಡು ದೊಡ್ಡೋನಾದ್ಮೇಲೆ ಯುದ್ಧದಲ್ಲಿ ಕೆಲಸ ಮಾಡ್ತೀನಿ" ಬಾಬು ಉತ್ಸಾಹದಿಂದ ಹೇಳುತ್ತಿದ್ದ.

ಇಷ್ಟರಲ್ಲಿ ಮಕ್ಕಳು ಬರಲಿಲ್ಲವೆಂದು ಅವರ ತಂದೆ ತಾಯಿ ಎದುರಾಗಿ ಬಂದರು. ರಾಣಿ "ಅಮ್ಮಾ....." ಎಂದು ತಾಯಿಯ ಬಳಿ ಓಡಿಹೋಗಿ ಅಪ್ಪಿಕೊಂಡು ಸೀತೆ ತಡವಾಗಿ ಬಂದುದನ್ನೂ, ತಾವು ರಸ್ತೆ ದಾಟಲು ಪ್ರಯತ್ನಿಸಿದಾಗ ಲಾರಿ ವೇಗವಾಗಿ ಬಂದು, ತಾವು ತಪ್ಪಿಸಿಕೊಂಡುದನ್ನೂ ಒಂದೇ ಉಸುರಿನಲ್ಲಿ ಹೇಳಿದಳು. ಜಾನಕಮ್ಮ ಸೀತೆಯ ಕಡೆ ಕೋಪದಿಂದ ನೋಡುತ್ತಾ "ಸ್ಕೂಲು ಬಿಡೋ ಹೊತ್ತಿಗೆ ಸರಿಯಾಗಿ ಸ್ಕೂಲಿನ ಬಳಿ ಹೋಗದೆ ಎಲ್ಲಿ ಮೆರೀತಾ ಇದ್ದೆಯೇ?" ಎಂದಳು.

ಸೀತೆ ಹೆದರುತ್ತಲೇ, ವಿನಯದಿಂದ "ಅಮ್ಮಾ, ಈ ದಿನ ಅಪ್ಪನಿಗೆ ಜ್ವರ ವಿಪರೀತವಾಗಿತ್ತು. ಅದಕ್ಕೆ....." ಎಂದು ಮಾತು ಪೂರ್ತಿ ಮಾಡುವ ಮೊದಲೇ "ಸರಿ, ಯಾವುದೋ ಒಂದು ನೆಪ ಹೇಳುತ್ತೀ. ನೀನು ಮಾಡಿದ್ದು ಸಾಕು. ನಾಳೆಯಿಂದ ಬೇರೆ ಯಾರನ್ನಾದರೂ ನೋಡಿಕೊಳ್ತೀನಿ. ಮೊದಲನೇ ತಾರೀಖಿಗೆ ಬಂದು ಸಂಬಳ ತಗೊಂಡು ಹೋಗು" ಎಂದಳು ಕಟುವಾಗಿ.

"ಈ ಸಲಕ್ಕೆ ಕ್ಷಮಿಸಿ ಅಮ್ಮ. ಇನ್ನು ಮುಂದೆ ಹೀಗಾಗದಂತೆ ನೋಡಿಕೋತೀನಿ."

"ಇದು ನೂರೊಂದನೆಯ ಸಲ ಹೀಗೆ ಹೇಳ್ತಿರೋದು."

ಸೀತೆಯ ಕಣ್ಣು ತೇವವಾಯಿತು. ಜಾನಕಿಯ ಗಂಡ ಮೆಲ್ಲನೆ "ಪಾಪ! ಯಾಕೆ ಲೇಟಾಯಿತೋ ಕೇಳಿ ನೋಡು" ಎಂದರು.

"ಉಹೂಂ. ನನ್ನ ಮಕ್ಕಳ ಬೆಲೆ ಇವಳಿಗೇನು ಗೊತ್ತು? ದಿನಾ ರಾಣಿಯಂತೆ ಲೇಟಾಗಿ ಬಂದು ನೆಪ ಹೇಳ್ತಾಳೆ. ಇವಳ ವಿಷಯ ನಿಮಗೇನು ಗೊತ್ತು? ನಡೆಯಿರಿ" ಎಂದು ಇಬ್ಬರು ಮಕ್ಕಳ ಕೈ ಹಿಡಿದು ಸರಸರನೆ ಹೆಜ್ಜೆ ಹಾಕತೊಡಗಿದರು ಜಾನಕಮ್ಮ.

"ಸೀತೇನ ಕೆಲಸದಿಂದ ತೆಗೆದು ಹಾಕಬೇಡಮ್ಮಾ" ಬಾಬು ಗೋಗರೆದ.

"ಹೋಗಲಿ. ನಾಳೆಯಿಂದ ಬರಲಿಕ್ಕೆ ಹೇಳು" ಎಂದರು ಜಾನಕಿಯ ಗಂಡ.

ಜಾನಕಿಯ ಮೈ ಉರಿದುಹೋಯಿತು.

"ನಿಮಗೇನು ಗೊತ್ತು ಅವಳ ಜಾಣತನ? ಒಂದುಸಲ ತಂದೆಗೆ ಜ್ವರಾಂತಾಳೆ. ಮತ್ತೊಂದು ಸಲ ಅಗಸ ಸೀರೆ ತರಲಿಲ್ಲಾಂತಾಳೆ. ಹೋಗಲಿ ಪಾಪ ಅಂತ ಒಂದು ಸೀರೆ ಕೂಡಾ ಕೊಟ್ಟಾಯಿತು. ಇವಳಿಗೆ ಇಷ್ಟು ಗರ್ವ ಯಾಕೇಂತ ಗೊತ್ತೇನು? ಎಸ್ಸೆಸ್ಸೆಲ್ಸಿ ಪಾಸಾಗಿದೀನಿ, ಟೈಪು ಪಾಸಾಗಿದೀನೀ ಅಂತ ಎಲ್ಲೂ ಕೆಲಸ ಸಿಗದೆ ನಮ್ಮ ಮನೇಲಿ ಆಯಾ ಆಗಿದ್ದರೂ ಗರ್ವಕ್ಕೇನೂ ಕಡಿಮೆಯಿಲ್ಲ. ನಿಜ ಹೇಳಬೇಕೂಂದರೆ ಈ ಓದಿಕೊಂಡೋಳನ್ನು ಕೆಲಸಕ್ಕಿಟ್ಟುಕೊಂಡಿದ್ದು ನನ್ನದೇ ತಪ್ಪು....."

ಜಾನಕಿ ಸರಸರನೆ ಮುಂದಕ್ಕೆ ನಡೆದಳು. ಆತ ನಿಸ್ಸಹಾಯಕನಾಗಿ ಅವಳನ್ನು ಹಿಂಬಾಲಿಸಿದ. ಸೀತೆ ಮೌನವಾಗಿ ನಿಂತಲ್ಲಿಯೇ ನಿಂತುಬಿಟ್ಟಳು.

ಹೈಸ್ಕೂಲು ಓದು ಮುಗಿದಾಗ ಸೀತೆ ಎಷ್ಟೋ ಕನಸು ಕಂಡಿದ್ದಳು. ಮೊದಲು ಯಾವುದಾದರೂ ಸಣ್ಣ ಕೆಲಸ ಹುಡುಕಿಕೊಳ್ಳುವುದು. ಪಾರ್ಶ್ವವಾಯುವಿನಿಂದ ಹಾಸಿಗೆ ಹಿಡಿದು ಸ್ವಲ್ಪವೇ ಚೇತರಿಸಿಕೊಂಡಿದ್ದ ತಂದೆಯನ್ನು ನೋಡಿಕೊಳ್ಳುತ್ತಾ, ನೈಟ್ ಕಾಲೇಜಿಗೆ ಸೇರಿ, ಡಿಗ್ರಿ ತೆಗೆದುಕೊಂಡು, ಇನ್ನೂ ಒಳ್ಳೆ ಕೆಲಸ ಸಂಪಾದಿಸುವುದು. ಹೀಗೇ ಏನೇನೋ ಅಂದುಕೊಂಡಿದ್ದಳು. ಆದರೆ ಉದ್ಯೋಗ ಪ್ರಯತ್ನದ ಮೊದಲಲ್ಲೇ ಕಟು ಅನುಭವಗಳನ್ನು ಎದುರಿಸಬೇಕಾಯಿತು ಅವಳು.

'ಈ ಓದು ನಿಜವಾಗಿಯೂ ನನಗೆ ಅನ್ನ ಹಾಕುತ್ತದೆಯೇ? ದುಡ್ಡು ಸಂಪಾದಿಸುವ ಬಗೆ ಹೇಗೆ?' ಎಂದೆಲ್ಲಾ ಆಲೋಚಿಸುತ್ತಿದ್ದಳು. ಎರಡು ಕಡೆ ಟ್ಯೂಷನ್ ಹೇಳುತ್ತಿದ್ದಳು. ಈ ಇಬ್ಬರು ಮಕ್ಕಳನ್ನು ಸ್ಕೂಲಿಗೆ ಕರೆದುಕೊಂಡು ಹೋಗಿ, ಬಂದು ಮಾಡುತ್ತಿದ್ದಳು. ಎಲ್ಲಾ ಸೇರಿ ಐವತ್ತಕ್ಕಿಂತ ಹೆಚ್ಚು ಬರುತ್ತಿರಲಿಲ್ಲ. ಎಂಪ್ಲಾಯ್‌ಮೆಂಟ್ ಎಕ್ಸ್‌ಚೇಂಜಿನ ಸುತ್ತಲೂ ತಿರುಗಿ ತಿರುಗಿ ಸಾಕಾಗಿತ್ತು.

“ಇದೆಂತಹ ಪ್ರಪಂಚ ಅಪ್ಪಾ” ಎಂದು ದಿಕ್ಕು ತೋಚದೆ. ರಾಮಣ್ಣ ನಕ್ಕು “ಅಧೈರ್ಯ ಪಡಬೇಡಮ್ಮಾ, ನಮಗೆ ಅರೆ ಹೊಟ್ಟೆಯಾದರೂ ತುಂಬಲು ಆಧಾರವಿದೆ. ಅದೂ ಇಲ್ಲದವರು ನಮ್ಮ ದೇಶದಲ್ಲಿ ಲಕ್ಷಗಟ್ಟಲೆ ಇದಾರೆ” ಎಂದರು.

ರಾಮಣ್ಣ ಕಾಯಿಲೆ ಬೀಳುವ ಮೊದಲು ಕಂಪೆನಿಯೊಂದರಲ್ಲಿ ಕೆಲಸ ಮಾಡುತ್ತಿದ್ದರು. ಹೊಟ್ಟೆಗೆ ಬಟ್ಟೆಗೆ ಕಷ್ಟವಿರಲಿಲ್ಲ. ಹಾಗೆಯೇ ಸೀತೆಗೆ ಹೈಸ್ಕೂಲಿನವರೆಗೂ ಓದು ಹೇಳಿಸಿದ್ದರು. ಈಗ ಅನಾರೋಗ್ಯದಿಂದ ಸ್ವಲ್ಪ ಚೇತರಿಸಿಕೊಂಡಿದ್ದರೂ, ಅವರ ಕೆಲಸ ಹೋಗಿತ್ತು. ಮನೆಯಲ್ಲಿ ಕುಳಿತು ಮಗಳಿಗೆ ಭಾರವಾದೆನಲ್ಲಾ ಎಂದು ಚಿಂತಿಸುವಂತಾಗಿತ್ತು.

ಇಂತಹ ಪರಿಸ್ಥಿತಿಯಲ್ಲಿ ತನಗೆ ಬರುತ್ತಿದ್ದ ಐವತ್ತು ರೂಪಾಯಿ ಹೋಯಿತಲ್ಲಾ ಎಂದುಕೊಂಡಾಗ ಅವಳ ಕಣ್ಣುಗಳೂ ತುಂಬಿ ಬಂದಿದ್ದವು. ಆದರೆ ಅವಳು ಏನೂ ಮಾಡುವಂತಿರಲಿಲ್ಲ. ಟ್ಯೂಷನ್ನಿನ ಟೈಮಾಯಿತೆಂದು ಮೆಲ್ಲನೆ ಹಿಂತಿರುಗಿ ನಡೆಯಲಾರಂಭಿಸಿದಳು.

ಸರಳೆಯ ಗಂಡ ಒಳ್ಳೇ ಕೆಲಸದಲ್ಲಿದ್ದ. ಬಂಗಲೆ, ಕಾರು, ಆಳು – ಕಾಳು ಎಲ್ಲಾ ತುಂಬಾ ಜೋರಾಗಿತ್ತು. ಸರಳೆಯ ಮಕ್ಕಳಿಗೆ ಸೀತೆ ಟ್ಯೂಷನ್ ಹೇಳುತ್ತಿದ್ದಳು. ಶ್ರೀಮಂತಳಾದರೂ ಸರಳೆಗೆ ಅಹಂಕಾರವಿರಲಿಲ್ಲ. ಸೀತೆಯ ಪರಿಸ್ಥಿತಿಗಾಗಿ ಮರುಗುತ್ತಿದ್ದಳು. ಸೀತೆಯ ಕಷ್ಟ – ಸುಖ ವಿಚಾರಿಸಿಕೊಳ್ಳುತ್ತಿದ್ದಳು.

ಸರಳೆಯ ಮಕ್ಕಳು ಲತಾ, ಸ್ಮಿತಾ ಅವಳಿಗಳು, ಅವರು ಬುದ್ಧಿವಂತರೇ ಆದರೂ ಆಟಗಳಲ್ಲಿದ್ದ ಆಸಕ್ತಿ ಓದಿನಲ್ಲಿರಲಿಲ್ಲ. ನೋಟ್ಸ್ ಬರೆಯಬೇಕೆಂದರೆ ಸೋಮಾರಿತನ.

ಸರಳ ಎಷ್ಟೇ ಒಳ್ಳೆಯವಳಾದರೂ ತನ್ನ ಮಕ್ಕಳಿಬ್ಬರೂ ಕ್ಲಾಸಿನಲ್ಲಿ ಫಸ್ಟ್ ಬರಬೇಕೆಂಬ ಆಸೆ ಅವಳಿಗೆ. “ಸೀತಾ, ಈ ಮಕ್ಕಳು ಚೆನ್ನಾಗಿ ಓದಿಕೊಂಡು, ಪರೀಕ್ಷೆಯಲ್ಲಿ ಫಸ್ಟ್ ಬರೋ ಹಾಗೆ ನೋಡಿಕೊಳ್ಳೋ ಭಾರ ನಿಂದೇ” ಎನ್ನುತ್ತಿದ್ದಳು.

ಸೀತೆ ತಲೆ ಬಗ್ಗಿಸಿಕೊಂಡು ಲತಾ ಸ್ಮಿತಾರ ನೋಟ್ಸ್ ಬರೆಯುತ್ತಿದ್ದಳು. ಅವರಿಬ್ಬರೂ ಪುಸ್ತಕಗಳನ್ನು ಅವಳ ಮುಂದೆ ಹಾಕಿ ಹೊರಟು ಹೋದವರು

ಪತ್ತೆಯಿರಲಿಲ್ಲ. ಮನೆಗೆ ಯಾರೋ ಬಂಧುಗಳು ಬಂದಂತಿತ್ತು. ಒಳಗಿನಿಂದ ಮಾತುಕತೆ ಬರುತ್ತಿತ್ತು.

ಮಕ್ಕಳಿಬ್ಬರೂ ನೀಟಾಗಿ ಡ್ರಸ್ ಮಾಡಿಕೊಂಡು ಓಡಿಬಂದು "ಟೀಚರ್, ಟೀಚರ್, ನಮ್ಮ ಅಂಕಲ್ ಸಿನಿಮಾ ಪ್ರೋಗ್ರಾಂ ಹಾಕಿದಾರೆ. ಈ ದಿನ ರಜಾ ಕೊಡಬೇಕು ನಮಗೆ" ಎಂದರು ಏಕಕಂಠದಿಂದ.

"ಪರೀಕ್ಷೆ ಹತ್ತಿರ ಬರ್ತಾ ಇದೆ. ಹೀಗೆ ಪಾಠ ತಪ್ಪಿಸಿಕೊಂಡರೆ ಹೇಗಮ್ಮಾ" ಎಂದಳು ಸೀತೆ, ನೋಟ್ಸ್ ಬರೆಯುತ್ತಲೇ.

"ಟೀಚರ್, ನೀವು ಹಾಗಂತೀರಿ ಅಂತ ಗೊತ್ತು. ಅದಕ್ಕೇ ನಮ್ಮ ಅಂಕಲ್‌ನೇ ಕೇಳು ಅಂದಿವಿ. ಅಗೋ ಬಂದರು" ಎಂದಳು ಸ್ಮಿತಾ, ತನ್ನ ಹೊಸ ಫ್ರಾಕಿನ ಲೇಸನ್ನು ಮುಟ್ಟಿ ನೋಡಿಕೊಳ್ಳುತ್ತಾ.

ಸೀತೆ ಗಾಬರಿಯಿಂದ ತಲೆಯೆತ್ತಿ ನೋಡಿದಳು. ಫುಲ್ ಸೂಟು ಹಾಕಿದ ತರುಣ, ಸರಳೆಯ ತಮ್ಮ ಎದುರಾಗಿ ನಿಂತಿದ್ದ. ಸೀತೆ ಭುಜದ ಮೇಲಿಂದ ಸೆರಗನ್ನು ಹೊದ್ದುಕೊಳ್ಳುತ್ತಾ ಎದ್ದು ನಿಂತಳು.

"ಅರೆರೆ..... ಕೂತ್ಕೊಳ್ಳಿ ಟೀಚರ್. ನೋಡಿ, ಮಕ್ಕಳಿಗೆ ಪರೀಕ್ಷೆ ಹತ್ತಿರ ಬರ್ತಿದೆ ಅಂತ ಗೊತ್ತು. ಆದರೆ ದಯವಿಟ್ಟು ಇವತ್ತೊಂದು ದಿನ ಪಿಕ್ಚರ್‌ಗೆ ಹೋಗಲು ಒಪ್ಪಿಗೆ ಕೊಡಿ. ನಾಳೆ ಬೆಳಿಗ್ಗೆ ಐದು ಗಂಟೆಗೇ ಎಬ್ಬಿಸಿ ಅವರ ಕೈಯಲ್ಲಿ ಓದಿಸೋ ಹೊಣೆ ನನ್ನದು" ಎಂದ ಮೆದು ಮಾತಿನಲ್ಲಿ.

ವಿನಯದಿಂದ ಕೇಳುತ್ತಿದ್ದ ಅವರ ಕಡೆ ಒಂದು ಸಲ ತಲೆಯೆತ್ತಿ ನೋಡಿದಳು ಸೀತೆ. ಅವನ ಸುಂದರವಾದ ಕಣ್ಣುಗಳು ಹೊಳೆಯುತ್ತಿದ್ದವು. ವಿಶಾಲವಾದ ಹಣೆಯ ಮೇಲಕ್ಕೆ ಇಳಿದಿದ್ದ ಕ್ರಾಪು ಮತ್ತೂ ಸುಂದರವಾಗಿತ್ತು. ಮುಖದಲ್ಲಿ ಸರಳೆಯ ಹೋಲಿಕೆ ಸ್ಪಷ್ಟವಾಗಿ ಕಾಣುತ್ತಿತ್ತು. 'ಇವರು ಶ್ರೀಮಂತರು, ಆದರೂ ಒಳ್ಳೆಯವರ ಹಾಗೆ ಕಾಣುತ್ತಾರಲ್ಲಾ. ಮನುಷ್ಯ ಒಳ್ಳೆಯವನಾಗಲು ಶ್ರೀಮಂತಿಕೆ ಅಡ್ಡಿ ಬರುವುದಿಲ್ಲವೇನೋ! ಬಡವರೆಲ್ಲಾ ಒಳ್ಳೆಯವರೆಂದೂ, ಶ್ರೀಮಂತರೆಲ್ಲಾ ಕೆಟ್ಟವರೆಂದು ಕತೆಗಳಲ್ಲಿ ಬರೆಯುತ್ತಾರಲ್ಲಾ, ಯಾವುದು ನಿಜವಿರಬಹುದು?'

"ಟೀಚರ್ ನಮಗೆ ರಜ ಕೊಡಲಿಲ್ಲ" ಎಂಬ ಹರೀನ್ ಮಾತುಗಳಿಂದ ಸೀತೆ ತನ್ನ ಆಲೋಚನಾ ಲೋಕದಿಂದ ಎಚ್ಚೆತ್ತು ತನ್ನನ್ನು ತಾನು ಸಂಬಾಳಿಸಿಕೊಂಡು.

"ನಾನು ರಜಾ ಕೋಡೋದೇನು ಬಿಡಿ, ಸಂಬಳ ತೆಗೆದುಕೊಂಡು ಪಾಠ ಹೇಳಿಕೊಡೋಳು....." ಎಂದಳು.

"ಉಹೂಂ..... ಹಾಗನ್ನಬೇಡಿ. ಟೀಚರ್ ಎಂದರೆ ಟೀಚರೆ" ಎಂದ ಹರೀನ್ ಮಾತುಗಳಿಗೆ ಅಡ್ಡಬರುತ್ತಾ.

ಸೀತೆ "ಸರಿ, ಹೋಗಿ ಬನ್ನಿರಮ್ಮಾ" ಎಂದಳು. ಹರೀನ್ 'ನಮಸ್ಕಾರ' ಎಂದಾಗ ಯಾಂತ್ರಿಕವಾಗಿ ಕೈ ಜೋಡಿಸಿದಳು. ಮಕ್ಕಳಿಬ್ಬರೂ ಹರೀನ್‌ನ ಕೈ ಹಿಡಿದೆಳೆಯುತ್ತಾ ಕರೆದುಕೊಂಡು ಹೋದರು. ಅವರನ್ನೇ ನೋಡುತ್ತಾ ಮೌನವಾಗಿ ನಿಂತಿದ್ದಳು ಸೀತೆ.

ಮನೆಯ ಮುಂದೆ ಕಾರಿನ ಬಾಗಿಲು ಹಾಕಿದ ಶಬ್ದ, ಮತ್ತೊಂದು ಕ್ಷಣದಲ್ಲಿ ಅದು ಹೊರಟ ಶಬ್ದವೂ ಕೇಳಿಸಿತು. ಸೀತೆಯ ಮನಸ್ಸಿಗೆ ಹರ್ಷವಾಗಿತ್ತು – ಅಷ್ಟು ಶ್ರೀಮಂತನಾದ ಸುಂದರ ಯುವಕ ಹರೀನ್, ತನ್ನೊಂದಿಗೆ ಮರ್ಯಾದೆಯಿಂದ ಮಾತನಾಡಿದ್ದಕ್ಕಾಗಿ. ಆನಂತರ ಬಹಳ ಹೊತ್ತು ಕುಳಿತು ನೋಟ್ಸ್ ಕಂಪ್ಲೀಟ್ ಮಾಡಿ ಒಂದು ಚಿಕ್ಕ ಕಾಗದದ ಮೇಲೆ ಲತಾ, ಸ್ಮಿತಾ ಓದಬೇಕಾದ ಪಾಠಗಳನ್ನು ಗುರ್ತು ಹಾಕಿ ಅದನ್ನು ಅವರಿಗೆ ಕೊಡುವಂತೆ ಹೇಳಿ ಮೆಲ್ಲನೆ ಮನೆಯ ದಾರಿ ಹಿಡಿದಳು.

ಮತ್ತೆರಡು ಟ್ಯೂಷನ್ಸ್ ಸಿಕ್ಕಿದ್ದರೆ ಚೆನ್ನಾಗಿತ್ತು ಎನ್ನಿಸುತ್ತಿತ್ತವಳಿಗೆ. ತನಗೆ ತಿಳಿದವರಿಗೆಲ್ಲಾ ಹೇಳಿಟ್ಟಿದ್ದಳು – ಯಾರಿಗಾದರೂ ಮನೆ ಪಾಠ ಬೇಕಿದ್ದರೆ ಹೇಳುತ್ತೀನಿ ಅಂತ. ಇದುವರೆವಿಗೂ ಸಿಕ್ಕಿರಲಿಲ್ಲ.

ಮನೆಗೆ ಹೋಗುತ್ತಿದ್ದಂತೆಯೇ ಹೊಗೆ ತುಂಬಿದ ಅಡುಗೆ ಮನೆಯಲ್ಲಿ ಒಲೆ ಊದುತ್ತಾ ಅವಸ್ಥೆ ಪಡುತ್ತಿದ್ದ ತಂದೆಯನ್ನು ನೋಡಿ "ಅಪ್ಪಾ, ಏಳಿನ್ನು, ನಾನು ಬಂದಿದೀನಿ" ಎಂದಳು ಆತಂಕದಿಂದ.

"ಹಮ್ಮಯ್ಯ" ಎಂದು ಹರಿದ ಟವೆಲಿನಿಂದ ಮುಖ ಒರೆಸಿಕೊಳ್ಳುತ್ತಾ ಹೊರಗೆ ಬಂದರು ರಾಮಣ್ಣ.

ಸೀತೆ ಕೈಕಾಲು ತೊಳೆದುಕೊಂಡು ಸೆರಗನ್ನು ಸೊಂಟಕ್ಕೆ ಸಿಕ್ಕಿಸಿ ಕೆಲಸಕ್ಕಿಳಿದಳು. ಕೆಲಸ ಮಾಡಿಕೊಳ್ಳುತ್ತಲೇ,

"ಅಪ್ಪಾ, ಮನುಷ್ಯರಲ್ಲಿ ಇಷ್ಟು ವ್ಯತ್ಯಾಸಗಳು ಹೇಗೆ ಬಂದುವು? ದೇವರು ಕೆಲವರನ್ನು ಶ್ರೀಮಂತರನ್ನಾಗಿ, ಕೆಲವರನ್ನು ಬಡವರನ್ನಾಗಿ ಏಕೆ ಮಾಡಿದ?" ಎಂದು ಕೇಳಿದಳು.

"ಅಯ್ಯೋ ಹುಚ್ಚಿ, ಇದನ್ನೆಲ್ಲಾ ಭಗವಂತನೆಲ್ಲಿ ಮಾಡಿದ? ಮನುಷ್ಯರು ಸೃಷ್ಟಿಸಿದ್ದೇ ಇದೆಲ್ಲಾ. ಅದಿರಲಿ, ಮುಖ್ಯವಾದ ವಿಷಯಾನ ಹೇಳೋದೇ ಮರೆತೆ. ನನಗೊಂದು ಪುಟ್ಟ ನೌಕರಿ ಸಿಕ್ಕಿದೆಯಮ್ಮಾ."

"ನಿಜವಾಗಿಯೂ! ನೀನೇನು ಕೆಲಸ ಮಾಡಬಲ್ಲೆ ಅಪ್ಪಾ?"

"ದೇವರ ಗುಡಿ ಚೊಕ್ಕಟ ಮಾಡುವುದು, ಇನ್ನೂ ಚಿಲ್ಲರೆ ಕೆಲಸ..... ಅಷ್ಟೆ ಮಾಡಬಲ್ಲೆ ಅನ್ನಿಸತ್ತೆ."

"ಸಂಬಳ ಎಷ್ಟು ಕೊಡುತ್ತಾರೆ?"

"ಅವರೆಷ್ಟು ಕೊಟ್ಟರೆ ಅಷ್ಟು ಸಾಕಮ್ಮಾ. ಇಪ್ಪತ್ತು ರೂಪಾಯಿ ಕೊಡುತ್ತೀವಿ ಅಂದಿದಾರೆ. ನನ್ನ ಸದ್ಯದ ಪರಿಸ್ಥಿತಿಯಲ್ಲಿ, ನನ್ನ ಯೋಗ್ಯತೆಗೆ ಅಷ್ಟು ಸಾಕು. ದೇವರ ಸೇವೆ ಮಾಡಿದ ಹಾಗೂ ಆಯಿತು. ಇನ್ನೂ ಕಡಿಮೆ ಕೊಟ್ಟರೂ ಸರಿ. ನೀನೇನೋ ದೇವರಿಲ್ಲ ಅಂತೀಯಾ. ನನಗೇನೋ ದೇವರಿದಾನೆಂದೇ ನಂಬಿಕೆ.

ಸೀತೆ ಬಾಯಿ ಮಾತಿನಲ್ಲಿ ದೇವರಿಲ್ಲವೆಂದು ತಂದೆಯೊಂದಿಗೆ ವಾದಿಸಿದರೂ ಒಳಗೊಳಗೇ ಇದಾನೇನೋ ಎಂದುಕೊಳ್ಳುತ್ತಿದ್ದಳು. ಒಂದು ಕಡೆ ತನಗೆ ಇದ್ದ ಕೆಲಸ ಹೋಯಿತಲ್ಲಾ ಎಂದು ಚಿಂತಿಸುತ್ತಿರುವಾಗ ಈ ಕಡೆ ಮತ್ತೊಂದು ರೂಪದಲ್ಲಿ ದಾರಿಯಾಯಿತು. ಆದರೂ ಸಂಸಾರ ನಡೆಯುವುದು ಕಷ್ಟ. ತಾನು ಆಚೆ ಹೋಗಬೇಕೆಂದರೆ ಇರುವುದು ಒಂದೇ ಸೀರೆ. ಇನ್ನೊಂದು

ಸೀರೆಯನ್ನಾದರೂ ತೆಗೆದುಕೊಳ್ಳಬೇಕು. ಆದರೆ ಹೇಗೆ? ಇಪ್ಪತ್ತು ರೂಪಾಯಿಗಳಾದರೂ ಇಲ್ಲದಿದ್ದಲ್ಲಿ ಸೀರೆಯನ್ನು ಕುರಿತು ಆಲೋಚಿಸುವಂತೆಯೇ ಇಲ್ಲ.

ಏನು ಮಾಡುವುದು?

ನಿಟ್ಟುಸಿರುಬಿಟ್ಟು ಸುಮ್ಮನಾದಳು ಸೀತೆ.

ಸೀತೆ ಸರಳೆಯ ಮನೆಗೆ ಟ್ಯೂಷನ್ ಹೇಳಲು ಬರುತ್ತಲೇ ಇದ್ದಳು. ಆಗಾಗ ಹರೀನ್ ಕಾಣಿಸುತ್ತಿದ್ದ. ಸೀತೆಯನ್ನು ನೋಡಿದಾಕ್ಷಣ ಕಿರುನಗೆಯೊಂದಿಗೆ 'ನಮಸ್ಕಾರ ಟೀಚರ್' ಎನ್ನುತ್ತಿದ್ದ.

"ನಾನೇನು ನಿಮಗೆ ಟೀಚರಲ್ಲವಲ್ಲಾ" ಎಂದಳು ಒಮ್ಮೆ ಸೀತೆ ಸಿಟ್ಟಿನಿಂದಲೇ.

"ಗೌರವನೀಯರು ಅಂತ ಅರ್ಥ" ಎಂದ ಹರೀನ್.

ಇನ್ನು ಆ ಮಾತಿಗೆ ಉತ್ತರ ಹೇಳಲಾರದೆ ಸುಮ್ಮನಾದಳು ಸೀತೆ.

ಸರಳ ಒಂದು ಸಲ ಅಂದಿದ್ದಳು, "ನನ್ನ ತಮ್ಮನಿಗೆ ಲಕ್ಷಕ್ಕೂ ಮಿಕ್ಕ ಆಸ್ತಿ ಇದೆ. ಅಮೆರಿಕಾಕ್ಕೆ ಹೋಗುವ ಅವಕಾಶಾನೂ ಬಂದಿತ್ತು. ಅಲ್ಲಾದರೆ ಇನ್ನಷ್ಟು ಹಣ ಸಂಪಾದಿಸಬಹುದು. ಸಂಪಾದಿಸಿದ ಹಣದಲ್ಲಿ ಮಜವಾಗಿ ಬದುಕಬಹುದು. ಹೋಗಿ ಬಾರೋ ಅಂತೀನಿ ನಾನು. ಅವನೂ ಆಲೋಚಿಸುತ್ತಿದ್ದಾನೆ. ಮದುವೆ ಮಾಡಿಕೊಂಡು ಅಮೆರಿಕಾಕ್ಕೆ ಹೋಗೋಣವೇ ಇಲ್ಲಾ ಬಂದು ಮಾಡಿಕೊಳ್ಳೋಣವೇ ಅಂತ." ಸರಳ ಹೇಳಿದ್ದನ್ನು ಮೌನವಾಗಿ ಕೇಳಿದ್ದಳು ಸೀತೆ.

"ಆದರೆ ಎಂತಹ ಹುಡುಗೀನ ತಂದರೂ ಒಪ್ಪುತ್ತಿಲ್ಲ ಅವನು. ಓದಿಕೊಂಡವರೂ, ಹಣವಂತರೂ, ರೂಪವತಿಯರನ್ನೆಲ್ಲಾ ತೋರಿಸಿದ್ದಾಯಿತು. ಒಬ್ಬರೂ ತನಗೆ ಹಿಡಿಸಲಿಲ್ಲ ಅಂತಾನೆ. ಇವನಿಗೆ ಹೆಂಡತಿ ಹುಟ್ಟಿದಾಳೋ ಇಲ್ಲ ಹುಟ್ಟಬೇಕೋ" ಎಂದು ನಕ್ಕಳು ಸರಳ.

ಉದ್ಯೋಗ ಪ್ರಯತ್ನದಲ್ಲಿ ಸುತ್ತಿ ಸುತ್ತಿ ಸಾಕಾಗಿ ಮನೆಯ ಕಡೆ ಹೆಜ್ಜೆ ಹಾಕುತ್ತಿದ್ದ ಸೀತೆ ಪಕ್ಕದಲ್ಲಿಯೇ ಬಂದು ನಿಂತ ಕಾರಿನ ಕಡೆ ತೀಕ್ಷ್ಣವಾಗಿ ನೋಡಿದಳು. ಆ ಕಾರಿನ ಡ್ರೈವಿಂಗ್ ಸೀಟಿನಲ್ಲಿ ಹರೀನ್ ಕುಳಿತಿದ್ದ.

"ನಮಸ್ಕಾರ ಟೀಚರ್, ಬನ್ನಿ, ನಿಮ್ಮ ಮನೆಯ ಬಳಿ ಬಿಡುತ್ತೇನೆ" ಎಂದ ಹರೀನ್.

"ಥ್ಯಾಂಕ್ಸ್, ನಿಮ್ಮಂತಹವರೂ, ನಿಮ್ಮ ಕಾರೂ ಬರುವಷ್ಟು ವಿಶಾಲ ವಾದದ್ದಲ್ಲ ನಮ್ಮ ಓಣಿ."

"ಓಹ್, ಸಾರಿ ನಾನು ಬರುತ್ತೇನೆ."

ಕಾರು ಹೊರಟು ಹೋಯಿತು.

ಸೀತೆಯ ಮನಸ್ಸು ಭುಗಿಲ್ಲನೆ ಹತ್ತಿ ಉರಿಯುತ್ತಿತ್ತು. ತನ್ನ ಸೀರೆಯ ಕಡೆಗೊಮ್ಮೆ ನೋಡಿಕೊಂಡಳು. ತನ್ನೊಂದಿಗೆ ಮಾತನಾಡುತ್ತಾ ಹರಿದ ಸೀರೆಯ ಭಾಗವನ್ನು ಗಮನಿಸುತ್ತಿದ್ದ ಹರೀನ್, ಅದರಿಂದಾಗಿಯೇ ಅವಳಿಗಷ್ಟು ಕೋಪ ಬಂದಿತ್ತು. ಹರಿದ ಭಾಗವನ್ನು ಬೆರಳುಗಳಿಂದ ಎಳೆದಳು. ಅದು ಮತ್ತಷ್ಟು ಹರಿಯಿತು. ಸೀತೆಯ ಆವೇಶ ತಣ್ಣಗಾಯಿತು. ಈಗ ನಷ್ಟವಾಗಿದ್ದು ಯಾರಿಗೆ? ನೀರು ತುಂಬಿದ ಕಣ್ಣುಗಳನ್ನು ಒರೆಸಿಕೊಳ್ಳುತ್ತಾ 'ಛೆ! ಏನಿದು, ಎಂದೂ ಇಲ್ಲದ ದೌರ್ಬಲ್ಯ!' ಎಂದು ತನ್ನನ್ನು ತಾನೇ ಹಳಿದುಕೊಳ್ಳುತ್ತಾ ಮನೆ ಸೇರಿದಳು.

ಲತಾ – ಸ್ಮಿತಾರಿಗೆ ಪಾಠ ಹೇಳಿ ಮನೆಗೆ ಹಿಂದಿರುಗುತ್ತಿದ್ದ ಸೀತೆಗೆ ಸ್ಮಿತಾ ಒಂದು ಪ್ಯಾಕೆಟ್ ಮತ್ತು ಒಂದು ಚೀಟಿ ತಂದುಕೊಟ್ಟು "ಟೀಚರ್, ಅಂಕಲ್ ಇದನ್ನು ನಿಮಗೆ ಕೊಡ ಹೇಳಿದರು" ಎಂದಳು. ಸೀತೆಯ ಮುಖ ಕಪ್ಪಿಟ್ಟಿತು. ಆದರೂ ಕಾಗದ ಓದಿಕೊಂಡಳು. "ಟೀಚರ್, ನಮಸ್ಕಾರ. ನೀವು ಅನ್ಯಥಾ ಭಾವಿಸದೆ ಈ ಸೀರೆಗಳನ್ನು ಸ್ವೀಕರಿಸಿ" ಎಂದಿತ್ತು.

ಸೀತೆ ಒಂದು ಕ್ಷಣ ಆಲೋಚಿಸಿದಳು. ಆ ವಾಕ್ಯಗಳಲ್ಲಿ ಅಸಭ್ಯತೆ ಏನೂ ಇಲ್ಲದಿದ್ದರೂ ಅವಮಾನ, ಅಭಿಮಾನಗಳಿಂದ ಅವಳ ಹೃದಯ ನೊಂದು ಕೊಂಡಿತು. ಕೂಡಲೇ ತಾನೂ ಹೀಗೆ ಬರೆದಳು.

"ಹರೀನ್‌ರವರಿಗೆ ನಮಸ್ಕಾರ. ನಮ್ಮಂತಹ ಬಡವರ ಮೇಲೆ ನಿಮಗಿರುವ ದಯೆಗೆ ವಂದನೆಗಳು. ಆದರೆ ನಿಮ್ಮ ದಯಾಧರ್ಮದಿಂದ ನಮ್ಮನ್ನು ಯಾಚಕರನ್ನಾಗಿ ಮಾಡಬೇಡಿ. ಕಷ್ಟಪಟ್ಟು ಬದುಕುತ್ತಿರುವ ನಮಗೆ ಮಿಕ್ಕಿರುವುದು ಸ್ವಾಭಿಮಾನ, ಗೌರವ ಮಾತ್ರ. ಅದೇ ನಮಗೆ ಪ್ರಾಣ, ಕ್ಷಮಿಸಿ.

ನಮಸ್ಕಾರ, ಸೀತೆ."

"ಈ ಪ್ಯಾಕೆಟ್ಟೂ, ಚೀಟಿ ನಿಮ್ಮ ಅಂಕಲ್‌ಗೆ ಕೊಡು ಸ್ಮಿತಾ" ಎಂದಂದು ಮನೆಯ ಕಡೆ ಹೊರಟಳು ಸೀತೆ. ತೃಪ್ತಿಯ ನಿಟ್ಟುಸಿರು ಅವಳಿಗೆ ತಿಳಿಯದಂತೆಯೇ ಹೊರಬಿತ್ತು.

ರಾಮಣ್ಣ ದೇವಸ್ಥಾನದಲ್ಲಿ ಕೆಲಸ ಮಾಡಲಾರಂಭಿಸಿದ್ದರು. ತಮ್ಮ ಬಯಕೆಗಳನ್ನು ಈಡೇರಿಸಿದ ದೇವಿಗೆ ಒಳ್ಳೊಳ್ಳೇ ಸೀರೆಗಳನ್ನು, ಕಾಣಿಕೆಗಳನ್ನೂ ಸಲ್ಲಿಸುವ ಭಕ್ತಾದಿಗಳನ್ನು ಕಣ್ಣಾರೆ ಕಾಣುತ್ತಿದ್ದರು. ವಯಸ್ಸಿನಲ್ಲಿರುವ ತಮ್ಮ ಮಗಳಿಗೆ ಮೈ ಮುಚ್ಚಲು ಒಂದು ಸರಿಯಾದ ಸೀರೆಯೂ ಇಲ್ಲ. ಈ ದೇವತೆಗೆ ಎಷ್ಟೊಂದು ಸೀರೆಗಳು! ಅನ್ನಿಸದೆ ಇರುತ್ತಿರಲಿಲ್ಲ.

ಐವತ್ತು ವರ್ಷದ ತನ್ನ ಬದುಕಿನಲ್ಲಿ ಕಷ್ಟ ಸುಖಗಳನ್ನು ಅನುಭವಿಸಿ, ಮೈಗೂಡಿಸಿಕೊಂಡ ಸಹನೆಯ ಕಟ್ಟೆಯೊಡೆಯುವಂತಹ ಘಟನೆ ರಾಮಣ್ಣನ ಜೀವನದಲ್ಲಿ ಆ ದಿನ ನಡೆದು ಹೋಗಿತ್ತು. ದೇವರು ಅವನ ಸಹನಶೀಲತೆಯನ್ನು ಪರೀಕ್ಷಿಸಿದನೋ ಏನೋ ಅಂತೂ ಅದರಲ್ಲಿ ರಾಮಣ್ಣ ಸೋತು ಹೋಗಿದ್ದ.

ಸೀತೆ ಆ ದಿನ ರಾತ್ರಿ ತನ್ನ ಒಂದೇ ಒಂದು ಸೀರೆಯನ್ನು ಒಗೆದು ಅಂಗಳದಲ್ಲಿ ಒಣಗಲು ಹಾಕಿ, ಲಂಗದ ಮೇಲೆ ಕಂಬಳಿಯ ತುಂಡನ್ನು ಹೊದ್ದು ಮಲಗಿ ನಿದ್ದೆ ಮಾಡಿದಳು. ಬೆಳಗಾಗೆದ್ದು ನೋಡಿದರೆ ಸೀರೆ ಇರಲಿಲ್ಲ. ಆದರೆ ಪಕ್ಕದ ಮನೆಯಲ್ಲಿದ್ದ ನಾರಯ್ಯ ಕುಡಿದು, ಹಾಡುತ್ತಾ 'ಸೀತಮ್ಮನ ಸೀರೆ ಗೋವಿಂದೋಹರಿ' ಎಂದು ಕುಣಿಯತೊಡಗಿದ್ದ.

ಕ್ಷಣಮಾತ್ರದಲ್ಲಿ ರಾಮಣ್ಣನಿಗೆ ವಿಷಯವೇನೆಂದು ಅರ್ಥವಾಗಿತ್ತು. ನಿರಾಶೆ, ನಿಸ್ಪೃಹೆಗಳಿಂದ ಅವನು ಬುದ್ಧಿ, ವಿವೇಕಗಳನ್ನು ಕಳೆದುಕೊಂಡು ಹುಚ್ಚನಾದ. ಮೂಲೆಯಲ್ಲಿದ್ದ ಮಚ್ಚನ್ನು ತೆಗೆದುಕೊಂಡು ಕಾಲೆಳೆಯುತ್ತಾ ಹೋದವನೇ ನಾರಯ್ಯನ ಮೇಲೆ ಬಿದ್ದ.

ಸೀತೆ ಸುತ್ತಮುತ್ತಲಿನವರು ಅಡ್ಡಬಂದರೂ ಲೆಕ್ಕಿಸದೆ ಉದ್ರೇಕ ಕೊಟ್ಟ ಬಲದಿಂದ ಅವನನ್ನು ಕಡಿದು ಹಾಕಿದ. ಸೀತೆ ಬಲವಂತದಿಂದ ತಂದೆಯನ್ನು ಮನೆಯೊಳಕ್ಕೆ ಎಳೆದು ತಂದಳು.

ನಾರಯ್ಯನಿಗೆ ಬೇಕಾದವರು ಪೋಲೀಸ್ ರಿಪೋರ್ಟ್ ಕೊಡದಿರುತ್ತಾರೆಯೇ? ರಾಮಣ್ಣ ಜೈಲಿನಲ್ಲಿ ಕುಳಿತ.

ಶೋಕದೇವತೆಯಂತಿದ್ದ ಸೀತೆಯನ್ನು ನೆರೆಹೊರೆಯವರು ಸಮಾಧಾನ ಪಡಿಸಲಾರದಾಗಿದ್ದರು. ಆರ್ಥಿಕವಾಗಿ ಅವರು ಯಾರೂ ಅವಳಿಗೆ ಯಾವ ವಿಧವಾದ ಸಹಾಯವನ್ನೂ ಮಾಡುವ ಸ್ಥಿತಿಯಲ್ಲಿರಲಿಲ್ಲ. ಮೈಮುಚ್ಚಲು ಹರಿದ ತುಂಡೊಂದು ಸಹಾಯ ಮಾಡಿತಷ್ಟೆ.

ಎರಡು ದಿನ ಭಾರವಾಗಿ ಕಳೆದಿತ್ತು. ಸೀತೆ ಏಕೆ ಪಾಠಕ್ಕೆ ಬರುತ್ತಿಲ್ಲವೆಂದು ತಿಳಿದುಕೊಳ್ಳಲು ಸರಳೆ ನೌಕರನನ್ನು ಕಳುಹಿಸಿದ್ದಳು. ಅವನು ಹಿಂತಿರುಗಿ ಹೋಗಿ ಸರಳೆಗೆ ಎಲ್ಲಾ ವಿಷಯಗಳನ್ನೂ ಹೇಳಿದ್ದ. ಅಲ್ಲಿಯೇ ಇದ್ದ ಹರೀನ್ ಎಲ್ಲಾ ಕೇಳಿಸಿಕೊಂಡ, ನೌಕರನ ಮೂಲಕ ಮನೆಯ ಗುರುತನ್ನು ತಿಳಿದುಕೊಂಡು ಅಲ್ಲಿಗೆ ಬಂದು ಕಾರನ್ನು ರಸ್ತೆಯ ಬದಿಯಲ್ಲಿ ನಿಲ್ಲಿಸಿ ನಡೆದು ಬಂದಿದ್ದ "ರಾಮಣ್ಣನವರ ಮನೆ ಎಲ್ಲಿ?" ಎಂದು ಕೇಳಿದ ಅವನನ್ನು ವಿಚಿತ್ರವೆಂಬಂತೆ ನೋಡಿದರು ಜನ.

ಹರೀನ್ ಅದನ್ನೆಲ್ಲಾ ಮನಸ್ಸಿಗೆ ತಂದುಕೊಳ್ಳದೆ ತಗಡಿನ ಬಾಗಿಲನ್ನು ತಟ್ಟಿದ.

"ಯಾರು?"

ಸೀತೆಯ ಕಂಠ ಕೇಳಿ ಹರೀನ್ ಬಾಗಿಲನ್ನು ತಳ್ಳಿ ಒಳಕ್ಕೆ ಹೋದ. ಸೀತೆ ಹರೀನ್‌ನನ್ನು ನೋಡಿ ಆಶ್ಚರ್ಯಚಕಿತಳಾದಳು.

"ನೀವೇ? ಇಲ್ಲಿಗೇಕೆ ಬಂದಿರಿ? ಹೇಗೆ ಬಂದಿರಿ?" ಒಂದೊಂದು ಮಾತೂ ಅಸ್ಪಷ್ಟವಾಗಿ ಅವಳ ಬಾಯಿಂದ ಹೊರಬಿದ್ದುವು. ಹರೀನ್‌ನ ಕಣ್ಣುಗಳು ಕ್ಷಣಮಾತ್ರದಲ್ಲಿ ಆ ಪುಟ್ಟ ಕೋಣೆಯಲ್ಲಿದ್ದ ವಸ್ತುಗಳ ಕಡೆ ಹಾಯ್ದು ತುಂಡು ಸೀರೆಯಲ್ಲಿದ್ದ ಸೀತೆಯ ಮೇಲೆ ನಿಂತಿತು.

"ಟೀಚರ್, ನಮಸ್ಕಾರ" ಎಂದ ಹರೀನ್.

ಸೀತೆ ಪ್ರತಿ ನಮಸ್ಕಾರ ಮಾಡದಾದಳು. ಅವಳಿಗೆ ದುಃಖ ಉಕ್ಕಿ ಬಂತು. ಆ ಕ್ಷಣದಲ್ಲಿ ಹರೀನ್ ಅತ್ಯಂತ ಆಪ್ತನಂತೆ ಕಂಡ. ಅಷ್ಟೇ ಅಲ್ಲ, ಆ ಕ್ಷಣದಲ್ಲಿ

ಅವನಲ್ಲಿ ಸರಳೆ, ಲತಾ, ಸ್ಮಿತಾ ಎಲ್ಲರೂ ಕಾಣಿಸಿದರು. ಸೀತೆ ಬಿಕ್ಕಿ ಬಿಕ್ಕಿ ಅತ್ತಳು. ಅವಳನ್ನು ಹೇಗೆ ಸಮಾಧಾನ ಮಾಡಬೇಕೆಂದು ತಿಳಿಯದೆ ನಿಶ್ಚೇಷ್ಟನಾಗಿ ನಿಂತುಬಿಟ್ಟ ಹರೀನ್.

'ಬಡತನ' ಎಂಬುದಕ್ಕೆ ಅರ್ಥ ಅಥವಾ ಅನುಭವಪೂರ್ವಕವಾಗಿ ತಿಳಿದಿರಲಿಲ್ಲ ಅವನಿಗೆ. ಪುಸ್ತಕಗಳನ್ನು ಓದಿ ಅಲ್ಪ-ಸ್ವಲ್ಪ ತಿಳಿದುಕೊಂಡಿದ್ದ. ಆದರೆ ಇಲ್ಲಿ ಸೀತೆಯ ಸ್ಥಿತಿಯನ್ನು ನೋಡಿ ಅವನ ಕಣ್ಣು ಮಂಜಾಯಿತು. ನಮ್ಮ ದೇಶದ ಪರಿಸ್ಥಿತಿ ಏನು? ಈ ಸಮಾಜದಲ್ಲಿ ಯಾರ್‍ಯಾರು ಹೇಗೆ ಹೇಗೆ ಬದುಕುತ್ತಿದ್ದಾರೆ? ಮನುಷ್ಯ ಜೀವಿಸಲು ಅತ್ಯಾವಶ್ಯಕವಾಗಿ ಬೇಕಾದ ತಿಂಡಿ, ಬಟ್ಟೆಗೇ ಕೊರತೆಯಾಗಿದೆಯೇ? ಇಂತಹುದೇ ಸಾವಿರ ಪ್ರಶ್ನೆಗಳು ಅವನ ತಲೆಯಲ್ಲಿ ಸುಳಿದು ಹೋದವು.

ಆದರೆ ಸೀತೆಯ ಪರಿಸ್ಥಿತಿ ಬೇರೆಯೇ ಆಗಿತ್ತು. ಒಳಗೇ ಹುದುಗಿದ್ದ ಅವಳ ದುಃಖ ಮಾತಿನ ರೂಪದಲ್ಲಿ ಹರಿದು ಬಂದಿತ್ತು.

"ನಾನು ಈ ಸ್ವಲ್ಪ ಓದನ್ನೂ ಓದದೇ ಇದ್ದಿದ್ದರೆ ಚೆನ್ನಾಗಿತ್ತು. ನಾಲ್ಕು ಮನೆಗಳಲ್ಲಿ ಕಸ – ಮುಸುರೆ ಮಾಡಿ ಬದುಕಬಹುದಾಗಿತ್ತು. ಈ ಓದು ನನಗೆ ಅತ್ತ ಉದ್ಯೋಗಕ್ಕೂ ಕೆಲಸಕ್ಕೆ ಬರಲಿಲ್ಲ, ಇತ್ತ ಕೂಲಿ ಕೆಲಸವೂ ಕೈಲಾಗದಂತಾಯಿತು. ಸಮಾಜದಲ್ಲಿ ಮೇಲಿನ ವರ್ಗದವರೂ ಚೆನ್ನಾಗಿಯೇ ಇದಾರೆ. ಕೂಲಿನಾಲಿ ಮಾಡಿ ಬದುಕುವವರೂ ಪರವಾಗಿಲ್ಲ. ಮಧ್ಯಮ ವರ್ಗ, ಅದರಲ್ಲೂ ಕೆಳ ಮಧ್ಯಮವರ್ಗದವರಾದ ನಮ್ಮ ಪಾಡು ತ್ರಿಶಂಕು ಸ್ವರ್ಗದಂತಾಗಿದೆ.....

ಸೀತೆ ಅಳುತ್ತಾ ಅಳುತ್ತಲೇ ಮಾತನಾಡುತ್ತಿದ್ದಳು. ಹರೀನ್ ಕೇಳುತ್ತ ನಿಂತೇ ಇದ್ದ. ಆದರೆ ನೆರೆಹೊರೆಯವರು ಇಣಿಕಿ ನೋಡುತ್ತಿರುವುದನ್ನೂ, ಪಿಸುಮಾತಿನಲ್ಲಿ ಮಾತನಾಡಿಕೊಳ್ಳುತ್ತಿರುವುದನ್ನೂ ಅವಳ ದೃಷ್ಟಿ ಗಮನಿಸಿದ ಕೂಡಲೇ ತಟ್ಟನೆ ಅವಳ ಅಳು ನಿಂತು ಹೋಯಿತು. ತಟ್ಟನೆ ಕಣ್ಣೊರೆಸಿಕೊಂಡಳು.

"ನೀವೇಕೆ ಬಂದಿರಿ ಇಲ್ಲಿಗೆ?" ಎಂದಳು ಕಟುವಾಗಿ.

"....."

"ಹೇಳಿ, ಏಕೆ ಬಂದಿರಿ?" ಎಂದು ಹುಚ್ಚಿಯಂತೆ ಚೀರಿದಳು ಸೀತೆ.

ಹರೀನ್ ಇದೀಗ ಗಮನಿಸಿದ. ತಮ್ಮಿಬ್ಬರನ್ನೂ ಸುತ್ತಲೂ ಹಲವಾರು ಕಣ್ಣುಗಳು, ವಿಚಿತ್ರವಾದ ಮೃಗಗಳನ್ನು ನೋಡುವಂತೆ ನೋಡುತ್ತಿವೆಯೆಂದು.

"ಬರಬಾರದೆಂದು ತಿಳಿಯದೆ ಬಂದೆ ಟೀಚರ್, ನಮಸ್ಕಾರ" ಎಂದವನೇ ಸರ್ರನೆ ಹಿಂದಿರುಗಿ ಹೊರಟು ಹೋದ ಹರೀನ್.

ಸೀತೆ ಕುಸಿದು ಕುಳಿತು ನೀರಸವಾಗಿ ರೋದಿಸತೊಡಗಿದಳು.

ಎರಡು ತಿಂಗಳು ಭಾರವಾಗಿ ಕಳೆದಿದ್ದುವು.

'ಪೋಸ್ಟ್' ಎಂಬ ಕೂಗನ್ನು ಕೇಳಿ ಹೊರಗೆ ಬಂದ ಸೀತೆ, ತನಗೆ ಬಂದ ಇಂಟರ್‌ವ್ಯೂ ಕಾರ್ಡನ್ನು ನೋಡಿ ಆಶ್ಚರ್ಯಪಟ್ಟಳು ಇದು ಹೇಗೆ ತನಗೆ ಬಂದಿತೆಂದು. ಹೋಗಲಿ, ಈ ಕೆಲಸವಾದರೂ ತನಗೆ ಸಿಕ್ಕುತ್ತದೆಯೇ? ಸಿಕ್ಕಿದರೆ ಎಷ್ಟು ಚೆನ್ನ! ಎಂದು ಆಶೆ – ನಿರಾಶೆಗಳ ಮಧ್ಯೆ ಉಯ್ಯಾಲೆಯಾಡಿತು ಅವಳ ಮನ.

ನಿರ್ಣಯವಾಗಿದ್ದ ದಿನ ಆ ಕಂಪೆನಿಗೆ ಹೋದಳು. ಹೊಸದಾಗಿ ಸ್ಥಾಪಿಸಿದ ಕಂಪೆನಿ ಅದು. ಬಹಳ ಜನ ಹುಡುಗಿಯರು ತುಂಬಿದ್ದರು ಅಲ್ಲಿ.

'ಊಹುಂ..... ನನಗೆ ಈ ಕೆಲಸ ಸಿಕ್ಕುವುದು ಅಸಂಭವ' ಎಂದುಕೊಂಡಳು ಸೀತೆ. ಅವಳ ಉತ್ಸಾಹವೆಲ್ಲಾ ನೀರಾಗಿ ಹೋಯಿತು.

ಅಲ್ಲಿದ್ದವರು ಮಾತನಾಡಿಕೊಳ್ಳುತ್ತಿದ್ದರು. ಹುಡುಗಿಯರಿಗೇ ಈ ಕೆಲಸಕ್ಕೆ ಅವಕಾಶ ಹೆಚ್ಚೆಂದು.

ತನ್ನ ಹೆಸರನ್ನು ಕೂಗಿದ ಕೂಡಲೇ, ನಡುಗುತ್ತಿದ್ದ ಹೆಜ್ಜೆಗಳಿಂದ, ಸೆಕೆಂಡ್ ಹ್ಯಾಂಡ್ ಬಟ್ಟೆ ಮಾರುವವನ ಬಳಿ ಕೊಂಡ ಬಣ್ಣ ಹೋದ ಸೀರೆಯ ಸೆರಗನ್ನು ಭುಜದ ತುಂಬಾ ಹೊದ್ದುಕೊಳ್ಳುತ್ತಾ ಒಳಗೆ ಕಾಲಿಟ್ಟಳು. ಎದುರಾಗಿ ಕುರ್ಚಿಯ ಮೇಲೆ ಕುಳಿತಿದ್ದ ವ್ಯಕ್ತಿಯನ್ನು ನೋಡಿ ಆಶ್ಚರ್ಯದಿಂದ,

"ಸರ್..... ನೀವು....." ಎಂದಳು.

"ನಮಸ್ಕಾರ ಟೀಚರ್, ಕುಳಿತುಕೊಳ್ಳಿ" ಎಂದ ಹರೀನ್.

"ದಯವಿಟ್ಟು ನನ್ನನ್ನು ಹಾಗೆ ಕರೆಯಬೇಡಿ."

"ತಪ್ಪು ತಿಳಿಯಬೇಡಿ, ಅಭ್ಯಾಸ ಬಲ ಅಷ್ಟೆ."

"ನೀವು..... ಇಲ್ಲಿ....." ಆಶ್ಚರ್ಯದ ನಂತರ ಅವಳ ಮನಸ್ಸು ಆನಂದದಿಂದ ಸ್ಪಂದಿಸಿತ್ತು.

"ಈ ಕುರ್ಚಿಯ ಮೇಲೆ ಏಕೆ ಕುಳಿತಿದೀನಿ ಅಂತೀರಾ? ನಮ್ಮ ಹಿರಿಯರು ಸಂಪಾದಿಸಿದ ಆಸ್ತಿ ತುಂಬಾ ಇತ್ತು. ಅದನ್ನು ಹೇಗೆ ಸದ್ವಿನಿಯೋಗ ಪಡಿಸಲಿ ಅಂತ ಆಲೋಚಿಸುತ್ತಾ ಇದ್ದೆ. ಈ ದಾರಿ ಕಾಣಿಸಿತು. ಹಣ ಅನ್ನುವುದೊಂದಿದ್ದರೆ ಏನು ಮಾಡಬಹುದು ಅನ್ನುವುದೂ ತಿಳಿದುಬಂತು."

"ಅಂದರೆ?" ಅರ್ಥವಾಗದೆ ಪೆಚ್ಚಾಗಿ ಕೇಳಿದಳು ಸೀತೆ.

"ಈ ಕಂಪೆನಿ ಯಾಕೆ ಸ್ಥಾಪಿಸಿದೆ ಗೊತ್ತೇನು? ನಿಮ್ಮಂತಹ 'ಸೀತಮ್ಮಂ'ದಿರಿಗೆ ಕನಿಷ್ಠ ಪಕ್ಷ ತಿಂಡಿ, ಬಟ್ಟೆಗಾದರೂ ಲೋಪವಿಲ್ಲದೆ ಕಳೆಯಲು 'ಅಳಿಲ ಸೇವೆ' ಅಂತಾರಲ್ಲ ಹಾಗೆ, ಕೆಲವು ಮಂದಿಗಾದರೂ ಸಹಾಯ ಮಾಡೋಣಾಂತ. ಈ ಫ್ಯಾಕ್ಟರಿ ನಿಮ್ಮಂತಹ ಸೀತಮ್ಮಂದಿರಿಗೇ ಅಂಕಿತ. ಇದರ ಅಭಿವೃದ್ಧಿ ನಿಮ್ಮಗಳ ಕೆಲಸದ ಮೇಲೆಯೇ ಆಧಾರಪಟ್ಟಿದೆ. ಫಲಿತವೂ ನಿಮ್ಮದೆ. ನಾನೂ ನಿಮ್ಮಲ್ಲೊಬ್ಬ ಅಷ್ಟೇ....." ಆವೇಶದಿಂದ ಹೇಳಿದರೂ ಹರೀನ್‌ನ ಕಂಠದಲ್ಲಿ ಒಂದು ವಿಧವಾದ ಆತ್ಮಸಂತೃಪ್ತಿ ಕಂಡುಬಂದಿತು.

"ನಿಮಗೆ ಆರ್ಡರ್ಸ್ ಮನೆಗೇ ಬರುತ್ತೆ. ಕೊನೆಯದಾಗಿ ಒಂದು ಮಾತು ಹೇಳಲೇ? ಈ ನನ್ನ ಕೆಲಸಕ್ಕೆ ಕಾರಣಭೂತರು ನೀವು....."

"ಹರೀನ್ ಬಾಬೂ....." ಎಂದ ಸೀತೆಯ ಕಣ್ಣುಗಳಲ್ಲಿ ಕೃತಜ್ಞತೆ, ಆನಂದದ ಕಾಂತಿ ಮಿನುಗಿತು.

ಅದನ್ನು ಕಂಡ ಹರೀನ್ "ಸಾಕು, ನನಗಿಷ್ಟು ಸಾಕು ಟೀಚರ್" ಎಂದ.

"ಹರೀನ್ ಬಾಬೂ, ಸ್ತ್ರೀಯರಿಗೆ ಇಷ್ಟು ಗೌರವ ತೋರುವ ನಿಮಗೆ ನನ್ನ ಕೋಟಿ ನಮಸ್ಕಾರ" ಎಂದಳು ಸೀತೆ.

"ಬೇಡ, ಅದರ ಅವಶ್ಯಕತೆಯಿಲ್ಲ. ನಿಮ್ಮಂತಹ ಸೀತೆಯರೂ, ಝಾನ್ಸಿ, ದುರ್ಗಾಬಾಯಿ, ಸರೋಜಿನಿಯರು ಇದ್ದಷ್ಟು ಕಾಲ, ಹರೀನ್‌ರೂ ಇದ್ದೇ ಇರುತ್ತಾರೆ" ಎಂದ ಹರೀನ್.

ಸೀತೆಯ ಕಣ್ಣುಗಳು ಆನಂದಬಾಷ್ಪಗಳಿಂದ ತುಂಬಿದ್ದವು. ಹೊಸ ಫ್ಯಾಕ್ಟರಿ ಈಗ ಚಿಕ್ಕದೇ ಆಗಿದ್ದರೂ ಕ್ರಮೇಣ ಅಭಿವೃದ್ಧಿ ಹೊಂದಿ, ತನ್ನಂತಹ ಎಷ್ಟೋ ಜನರಿಗೆ ಜೀವನಾಧಾರವಾಗುತ್ತಿರುವ ಉಜ್ವಲ ಚಿತ್ರ ಅವಳ ಕಣ್ಣ ಮುಂದೆ ಗೋಚರಿಸಿತು. ಭವಿಷ್ಯವನ್ನು ಊಹಿಸುತ್ತಾ ತೃಪ್ತಿಯ ನಿಟ್ಟುಸಿರುಬಿಟ್ಟಳು ಸೀತೆ.



# ಆಯ್ಕೆ

ಮೂಲ : ಶ್ರೀ ಆದಿವಿಷ್ಣು

ಹೈದರಾಬಾದಿನಿಂದ ಟೆಲಿಗ್ರಾಂ ಬಂದಿತ್ತು. ಭಾನುವಾರ ಸ್ಕ್ರೂಟಿನಿ ಏರ್ಪಾಟಾಗಿದೆಯಾದ್ದರಿಂದ ತಕ್ಷಣ ಹೊರಟು ಬನ್ನೀಂತ. ಹೊರಡಲೇ ಬೇಕಾಯಿತು. ಶನಿವಾರ ರಾತ್ರಿ ಬಸ್ಸಿನಲ್ಲಿ ಕುಳಿತು ಅಮ್ಮಿರೆಡ್ಡಿಯನ್ನು ಕುರಿತು ಆಲೋಚಿಸತೊಡಗಿದ್ದೆ.

ನಾನು ಕತೆ ಕಾದಂಬರಿ ಬರೆಯುತ್ತಿದ್ದ ಕಾಲದಲ್ಲಿ ಜನ ನನ್ನನ್ನು ಇಷ್ಟರಮಟ್ಟಿಗೆ ಗುರ್ತಿಸಿದಂತೆ ನೆನಪಿಲ್ಲ. ಯಾವ ಶುಭ ಮುಹೂರ್ತದಲ್ಲಿ ನಾಟಕಗಳನ್ನು ಬರೆಯಲು ಪ್ರಾರಂಭಿಸಿದೆನೋ ಕಾಣೆ. ಕೆಲವೇ ತಿಂಗಳಲ್ಲಿ ಪ್ರತಿ ಊರಿನಲ್ಲಿಯೂ ನನ್ನ ನಾಟಕಗಳು ಪ್ರದರ್ಶಿತವಾಗಿ ಜನಾದರಣೆ ಪಡೆಯಲಾರಂಭಿಸಿದ್ದುವು.

ಆರು ತಿಂಗಳ ಹಿಂದೆ 'ಬಾಳಬಲ್ಲವ' ನಾಟಕ ಬರೆದಿದ್ದೆ. ಅದರಲ್ಲಿ ಅಮ್ಮಿರೆಡ್ಡಿಯದೊಂದು ಮುಖ್ಯಪಾತ್ರ. ಅಮ್ಮಿರೆಡ್ಡಿಯ ವಯಸ್ಸು ಹತ್ತು ವರ್ಷಕ್ಕೆ ಹೆಚ್ಚಿರಬಾರದು. ನಾಟಕದ ಮಧ್ಯದಲ್ಲಿ ಅಮ್ಮಿರೆಡ್ಡಿಯ ತಂದೆ ಮರಣಿಸುತ್ತಾನೆ. ಬದುಕಿದ್ದ ಕಾಲದಲ್ಲಿ ವಿಲಾಸ ಜೀವನ ನಡೆಸಿದ ವ್ಯಕ್ತಿ ಅಮ್ಮಿರೆಡ್ಡಿಯ ತಂದೆ, ಸಾಲ ಮಾಡುವುದರಲ್ಲಿ ಸಿದ್ಧಹಸ್ತ. ಇದರಿಂದ ಅವನು ಸತ್ತನಂತರ ಉಳಿದ ಮನೆಯೂ ಸಾಲಗಾರರ ಪಾಲಾಗುತ್ತದೆ. ಅನಾಥನಾಗಿ ಬೀದಿಯಲ್ಲಿ ನಿಂತ ಅಮ್ಮಿರೆಡ್ಡಿಯ ಹೃದಯ ವಿದ್ರಾವಕ ರೋದನ ಪ್ರೇಕ್ಷಕರ ಕಣ್ಣಿನಲ್ಲಿ ನೀರು ತರಿಸುತ್ತದೆ. ಇಲ್ಲಿ ಅಮ್ಮಿರೆಡ್ಡಿಯ ಪಾತ್ರಕ್ಕೆ ತಕ್ಕ ಹುಡುಗ ಮುಖ್ಯ. ಒಳ್ಳೇ ಚುರುಕಾದ ಹುಡುಗ ಸಿಗಬೇಕು. ವಯಸ್ಸು ಚಿಕ್ಕದಾದರೂ ನಟನೆಯ ವಿಷಯದಲ್ಲಿ ಸಾಕಷ್ಟು ಎಚ್ಚರ ವಹಿಸಬೇಕು.

"ಬಾಳಬಲ್ಲವ" ನಾಟಕದ ಮೂರು ಪ್ರದರ್ಶನಗಳನ್ನು ಇದಕ್ಕೆ ಮೊದಲೇ ನಾನು ನೋಡಿಯಾಗಿತ್ತು. ಆದರೆ ಅದರಲ್ಲಿ ನಾನು ಊಹಿಸಿ ಬರೆದ ಅಮ್ಮಿರೆಡ್ಡಿಯನ್ನು ಕಾಣಲಾರದಾಗಿದ್ದೆ. ಬರಬರುತ್ತಾ ನನಗೆ ಆ ಪಾತ್ರದ ವಿಷಯದಲ್ಲಿ ಹೆದರಿಕೆ ಹುಟ್ಟಲಾರಂಭಿಸಿತ್ತು. ಅಂತಹ ಪಾತ್ರಗಳನ್ನು ನಾಟಕದಲ್ಲಿ ಚಿತ್ರಿಸುವುದು ನನಗೆ ಸುಲಭವಾಗಿರಬಹುದು. ಆದರೆ ಪ್ರದರ್ಶಕರಿಗದು ತುಂಬಾ ಕಷ್ಟಾನೇ ಸರಿ. ಆದ್ದರಿಂದಲೇ ನನಗೆ ಅಮ್ಮಿರೆಡ್ಡಿಯ ವಿಷಯದಲ್ಲಿ ನಂಬಿಕೆ ಮಾಯವಾಗಿ ಹೆದರಿಕೆ ಹುಟ್ಟಿತ್ತು.

ಈ ಸಲ ಆ ನಾಟಕ ಪ್ರದರ್ಶಿಸಲಿದ್ದ ಹೈದರಾಬಾದಿನ ಪ್ರದರ್ಶಕರು ಹೆಸರಾಂತ ನಟರೆಂದು ಕೇಳಿದ್ದೆ. ಅವರ ಅಮ್ಮಿರೆಡ್ಡಿ ಹೇಗಿರುತ್ತಾನೋ ನೋಡಬೇಕೆಂಬ ಕುತೂಹಲ ನನಗಿತ್ತು. ಕಾರಣವಿಲ್ಲದೆಯೇ ನನ್ನ ಮನಸ್ಸಿನ ಒಂದು ಮೂಲೆಯಲ್ಲಿ ಈ ಅಮ್ಮಿರೆಡ್ಡಿ ನನಗೆ ಅನ್ಯಾಯ ಮಾಡುವುದಿಲ್ಲವೆಂಬ ಭರವಸೆ ಮೂಡಿತ್ತು. ಆದ್ದರಿಂದಲೇ ಅವರ ಸ್ಕ್ರೂಟಿನಿ ನೋಡಲು ಮುಖ್ಯವಾಗಿ ಈ ಅಮ್ಮಿರೆಡ್ಡಿಯನ್ನು ಪರೀಕ್ಷಿಸಲು ಹೊರಟಿದ್ದೆ.

ಹೈದರಾಬಾದಿನ ಬಸ್‌ಸ್ಟಾಂಡಿನಲ್ಲಿ ಅವರೆಲ್ಲಾ ನನಗಾಗಿ ಕಾದಿದ್ದರು. ಅವರು ತಂದಿದ್ದ ಟ್ಯಾಕ್ಸಿಯಲ್ಲಿ ಕುಳಿತುಕೊಳ್ಳುತ್ತಾ ಅವರ ಆರ್ಗನೈಜರನ್ನು ಕೇಳಿದೆ, ಅಮ್ಮಿರೆಡ್ಡಿಯನ್ನು ತೋರಿಸುತ್ತೀರಾಂತ. ಆತ ಸಿಗರೇಟು ಹಚ್ಚುತ್ತಾ "ಇನ್ನೂ ಬರಲಿಲ್ಲ, ಸ್ಕ್ರೂಟಿನಿ ಟೈಮಿಗೆ ಬರ್ತಾನೆ. ಒಳ್ಳೆ ಚುರುಕಾದ ಹುಡುಗ ಬಿಡಿ" ಎಂದರು.

ಆ ದಿನ ಸಾಯಂಕಾಲ ಸುಮಾರು ನಾಲ್ಕೂವರೆಗೆ ರವೀಂದ್ರ ಭಾರತೀಯಲ್ಲಿ ಸ್ಕ್ರೂಟಿನಿ ಏರ್ಪಾಡಾಗಿತ್ತು. ಮೂರು ಗಂಟೆಯಿಂದಲೇ ಪಾತ್ರದಾರರು ಬಣ್ಣ ಹಚ್ಚಿಕೊಳ್ಳಲು ಪ್ರಾರಂಭಿಸಿದ್ದರು. ಆಗಲೂ ಅಮ್ಮಿರೆಡ್ಡಿ ಇನ್ನೂ ಬಂದಿಲ್ಲವೆಂದು ಕೇಳಿ ನನ್ನ ಮನಸ್ಸಿಗೆ ಸ್ವಲ್ಪ ಅಳುಕುಂಟಾಯಿತು.

ನನ್ನ ಜತೆಯಲ್ಲಿಯೇ ಓಡಾಡುತ್ತಿದ್ದ ಸ್ಕ್ರೂಟಿನಿ ಅಧಿಕಾರಿ ನನ್ನ ಮನಸ್ಸನ್ನರಿಯದೆ "ಏಕೆ ಒಂದು ಥರಾ ಇದೀರಲ್ಲಾ! ಯು ಆರ್ ನಾಟ್ ಫೀಲಿಂಗ್ ವೆಲ್, ಐ ಸೀ" ಎಂದು ಪರಾಮರ್ಶಿಸಿದರು. ನಾನು ನಕ್ಕು

ಸುಮ್ಮನಾದೆ. ನನ್ನ ಮನಸ್ಸಿನಲ್ಲಿದ್ದ ಆಲೋಚನೆಯನ್ನು ಅವರಿಗೆ ಹೇಳಲಿಲ್ಲ. ನಾಲ್ಕು ಗಂಟೆಯ ಸುಮಾರಿಗೆ ಅಮ್ಮಿರೆಡ್ಡಿಯ ಪಾತ್ರಧಾರ ಬಂದನೆಂದು ಯಾರೋ ಹುಡುಗ ಹೇಳಿದ. ತಕ್ಷಣ ಗ್ರೀನ್‌ರೂಮಿಗೆ ಹೋಗೋಣವೆಂದು ಕೊಂಡೆ. ಆದರೆ ಸಂಭಾಷಣೆಯ ಮಧ್ಯದಲ್ಲಿ ಹಾಗೆ ಎದ್ದು ಹೋಗುವುದು ಮರ್ಯಾದೆಯಲ್ಲವೆಂದು ಭಾವಿಸಿ ಮನಸ್ಸು ಬಿಗಿಹಿಡಿದು ಕುಳಿತೆ. ಅಷ್ಟರಲ್ಲಿ ದಪ್ಪನೆಯ ವ್ಯಕ್ತಿಯೊಬ್ಬರು ಬಂದು ನನ್ನ ಪಕ್ಕದಲ್ಲಿ ಕುಳಿತರು. ಅವರನ್ನು ನೋಡಿದ ತಕ್ಷಣವೇ ಶ್ರೀಮಂತರೆಂದು ಹೇಳಬಹುದಾಗಿತ್ತು. ಆತ ತಮ್ಮ ಪರಿಚಯ ತಾವೇ ಹೇಳಿಕೊಂಡರು. 'ಚಿಟ್ಟಿಬಾಬು'ವಿನ ತಂದೆಯಂತೆ,

ಇಲ್ಲಿ, ಈ ನಾಟಕದಲ್ಲಿ ಅಮ್ಮಿರೆಡ್ಡಿಯ ಪಾತ್ರ ಧರಿಸುತ್ತಿದ್ದ ಹುಡುಗನ ಹೆಸರು ಚಿಟ್ಟಿಬಾಬು.

ಸರಿಯಾಗಿ ನಾಲ್ಕೂವರೆಗೆ ತೆರೆ ಮೇಲೆದ್ದಿತು, ನಾಟಕ ಪ್ರಾರಂಭವಾಯಿತು. ಮೊದಲನೆಯ ಅಂಕ ಪೂರ್ತಿಯಾಗುತ್ತಿದ್ದಾಗ ಪರಿಶೀಲನಾಧಿಕಾರಿಯ ಕಡೆ ನೋಡಿದೆ. ಆತ ಗೋಡೆಯ ಮೇಲಿದ್ದ ಚಿತ್ರಗಳ ಕಡೆಗೂ ಆಗಾಗ ತನ್ನ ಕೈಗಡಿಯಾರದ ಕಡೆಗೂ ದೃಷ್ಟಿ ಬೀರುತ್ತಿದ್ದರು, ನಾಟಕದ ವಿಷಯದಲ್ಲಿ ಆತ ತೋರುತ್ತಿದ್ದ ನಿರಾಸಕ್ತಿ ನನಗೆ ನೋವನ್ನುಂಟು ಮಾಡಿತು.

ವಧು ಪರೀಕ್ಷೆಗೂ ಈ ಸ್ಕ್ರೂಟಿನಿಗಳಿಗೂ ಹತ್ತಿರದ ಸಂಬಂಧವಿದೆಯೆಂದು ನಾಟಕಗಳನ್ನು ಬರೆಯಲಾರಂಭಿಸಿದ ಹೊಸದರಲ್ಲಿಯೇ ತಿಳಿದುಕೊಂಡಿದ್ದೆ. ನೋಡಲು ಬಂದ ಹುಡುಗನ ಇಚ್ಛೆಯ ಮೇಲೆ ಕನ್ಯೆಯ ಮದುವೆ. ಆಧಾರಪಟ್ಟಂತೆಯೇ ಇಲ್ಲಿ, ಈ ಪರಿಶೀಲನಾಧಿಕಾರಿಯ ನಿರ್ಣಯದ ಮೇಲೆ ನಾಟಕ, ಸಮಾಜದವರ ಕೆಲವು ತಿಂಗಳುಗಳ ಪರಿಶ್ರಮ ಪ್ರಯಾಸಗಳು ಆಧಾರಪಟ್ಟಿರುತ್ತವೆ. ಹೆಣ್ಣು ಹೆತ್ತವರ ಆತುರಕ್ಕೆ, ಈ ಸಮಾಜ ನಿರ್ವಾಹಕರ ಎದೆಬಡಿತ ಸ್ವಲ್ಪವೂ ಕಡಿಮೆಯದಲ್ಲವೆಂದು ಹೇಳಬಹುದು.

ಮೊದಲನೆಯ ದೃಶ್ಯ ಪರಿಶೀಲನಾಧಿಕಾರಿಗೆ ಅಷ್ಟು ಮೆಚ್ಚಿಗೆಯಾಗದಿದ್ದರೂ ಎರಡನೆಯ ದೃಶ್ಯದಲ್ಲಿ ಆತ ಮೈಮರೆತಂತೆ ಕಂಡಿತು. ಅದಕ್ಕೆ ಸಾಕ್ಷಿಯಾಗಿ ಆ ದೃಶ್ಯ ಪೂರ್ತಿಯಾದಾಗ ಆತನ ಕಣ್ಣಂಚಿನಲ್ಲಿ ನಿಂತಿದ್ದ ಕಂಬನಿಯೇ ಸಾಕಾಗಿತ್ತು.

ಇನ್ನು ನನ್ನ ವಿಷಯ ಹೇಳಬೇಕಾದದ್ದೇ ಇರಲಿಲ್ಲ. ಆ ಸಮಾಜ ನಿರ್ವಾಹಕರು ಹೇಳಿದಂತೆ ಚಿಟ್ಟಿಬಾಬು ಚುರುಕಾದ ಹುಡುಗ, ಅವನು ಅಮ್ಮಿರೆಡ್ಡಿಯ ಪಾತ್ರವನ್ನು ಮನೋಹರವಾಗಿ ಪೋಷಿಸಿದ್ದ. ಇಷ್ಟು ದಿನಗಳ ನಂತರ ಇಲ್ಲಿ, ಈ ನಗರದಲ್ಲಿ ನಾನು ಊಹಿಸಿ ಬರೆದ ಅಮ್ಮಿರೆಡ್ಡಿಯನ್ನು ನಾನು ಕಂಡೆ. ಆ ದೃಶ್ಯ ಪೂರ್ತಿಯಾಗುತ್ತಿದ್ದಾಗ ಅಮ್ಮಿರೆಡ್ಡಿ ಪಾತ್ರಕ್ಕೆ ನಾನು ಬರೆದ ನಾಲ್ಕು ವಾಕ್ಯಗಳನ್ನೂ ಪ್ರಭಾವ ಬೀರುವಂತೆ ಹೇಳಿದ್ದ ಚಿಟ್ಟಿಬಾಬು. ದಿವ್ಯಾನುಭೂತಿಯ ಅನುಭವವಾಯಿತು ನನಗೆ.

"ಸಾರ್! ಸಾರ್! ದೇವರೇ ಅಲ್ಲದೆ ಇವರೆಲ್ಲರು ಕೂಡಾ ನನಗೆ ಅನ್ಯಾಯ ಮಾಡ್ತಿದಾರೆ. ನಾನೀಗ ತಂದೆಯಿಲ್ಲದ ಅನಾಥ, ಗತಿ ತಪ್ಪಿದ ಬಾಲಕ, ನನ್ನ ಮೇಲೆ ಕರುಣೆ ತೋರಿ ಸಾರ್, ನನ್ನನ್ನು ಸಂತೈಸಿ....."

ನನ್ನ ಪಕ್ಕದಲ್ಲಿಯೇ ಕುಳಿತಿದ್ದ ಚಿಟ್ಟಿಬಾಬುವಿನ ತಂದೆ ಕಣ್ಣೊರೆಸಿ ಕೊಳ್ಳುತ್ತಿದ್ದುದು ಸ್ಪಷ್ಟವಾಗಿ ಕಾಣಿಸಿತು.

ಊರಿಗೆ ವಾಪಸು ಬಂದ ಮೇಲೆ ಒಂದು ತಿಂಗಳ ನಂತರ "ಬಾಳ ಬಲ್ಲವ" ನಾಟಕ ಆಯ್ಕೆಯಾಯಿತೆಂಬ ಶುಭವಾರ್ತೆ ತಿಳಿದುಬಂತು. ಆ ನಾಟಕದ ಆಯ್ಕೆಗೆ ಮುಖ್ಯ ಕಾರಣ ಅಮ್ಮಿರೆಡ್ಡಿಯ ಪಾತ್ರವೆಂದು ನನಗೆ ಗೊತ್ತಿತ್ತು.

ನಮ್ಮೂರಿನಲ್ಲಿ ನನ್ನ ಸ್ನೇಹಿತರೊಂದಿಗೆ ನಾನಲ್ಲಿ ನೋಡಿದ ಅಮ್ಮಿರೆಡ್ಡಿ ಯನ್ನು ಕುರಿತು ಮನಃಪೂರ್ತಿಯಾಗಿ ಹೊಗಳಿದೆ. ಚಿಟ್ಟಿಬಾಬುವಿಗೆ ಉಜ್ವಲ ಭವಿಷ್ಯತ್ತು ಕಾದಿದೆಯೆಂದೂ ಹೇಳಿದೆ. ನನ್ನ ಮಾತು ಕೆಲವರಿಗೆ ಉತ್ಪ್ರೇಕ್ಷೆಯಾಗಿ ಕಾಣಿಸಿತೋ ಏನೋ, ಅಪನಂಬಿಕೆಯ ನಗು ನಕ್ಕರು. ಅದನ್ನು ಕಂಡು ನನ್ನ ಮಾತಿನ ಜೋರು ಕಡಿಮೆಯಾಯಿತು.

ಆಫೀಸಿನ ಕೆಲಸದಲ್ಲಿ ಮುಳುಗಿದ್ದ ನನಗೆ "ಬಾಳ ಬಲ್ಲವ" ನಾಟಕ ಪ್ರದರ್ಶನದ ದಿನ, ಒಂದು ವಾರಕ್ಕೆ ಮುಂಚಿತವಾಗಿಯೇ ತಿಳಿಯಿತು. ಭಾಗ್ಯ ನಗರದಲ್ಲಿ ರವೀಂದ್ರ ಭಾರತಿಯಲ್ಲಿಯೇ ಪ್ರತ್ಯೇಕವಾಗಿ ಆಹ್ವಾನಿಸಲ್ಪಟ್ಟ ಸಿನಿಮಾ ನಟರ, ನಿರ್ದೇಶಕರ ಎದುರಿನಲ್ಲಿ ಏರ್ಪಡಿಸಿದ್ದ ಸ್ಪರ್ಧೆಯಲ್ಲಿ ನನ್ನ ಮೆಚ್ಚಿನ

ಅಮ್ಮಿರೆಡ್ಡಿಯ ಪರಿಚಯವಾಗುತ್ತದೆ ಎಂದು ತಿಳಿದಾಗ ನನ್ನ ಉತ್ಸಾಹ ದ್ವಿಗುಣಗೊಂಡಿತ್ತು. ಆ ಸ್ಪರ್ಧೆಯ ಕೊನೆಯ ನಾಟಕ 'ಬಾಳ ಬಲ್ಲವ'. ಅದೇ ದಿನ ಬಹುಮಾನ ಪ್ರಧಾನೋತ್ಸವ ಕೂಡ.

ಆದರೆ ಆಫೀಸಿನಲ್ಲಿಯ ಕೆಲಸ ನನ್ನ ಉತ್ಸಾಹಕ್ಕೆ ಸಾಕಷ್ಟು ತಣ್ಣೀರೆರಚಿತು. ಆದರೂ ಹೇಗಾದರೂ ಮಾಡಿ ಹೋಗಲೇಬೇಕೆಂದೂ, ಅಮ್ಮಿರೆಡ್ಡಿಯನ್ನು ಆಶೀರ್ವದಿಸಿ ಬರಬೇಕೆಂದೂ ನಿಶ್ಚಯಿಸಿದ್ದೆ. ಆರುದಿನ ಹಗಲು ಕನಸುಗಳಲ್ಲಿಯೇ ಕಳೆಯಿತು. ಏಳನೆಯ ದಿನ – ಸರಿಯಾಗಿ ನನ್ನ ನಾಟಕ ಪ್ರದರ್ಶನದ ದಿನ ದೇವರ ದಯೆಯಿಂದ ಹೇಗೋ ಕಷ್ಟಪಟ್ಟು, ರಜಾ ದೊರಕಿಸಿ ಆಫೀಸಿನಿಂದಲೇ ಬಸ್‌ಸ್ಟಾಂಡ್ ಸೇರಿದೆ.

ಬಸ್ಸು ಹೈದರಾಬಾದ್ ಸೇರಿದಾಗ ತುಂಬಾ ಹೊತ್ತಾಗಿತ್ತು. ಟ್ಯಾಕ್ಸಿಯಲ್ಲಿ ನೇರವಾಗಿ ರವೀಂದ್ರ ಭಾರತಿಗೆ ಹೋದೆ. ನಾನು ಸಭಾಂಗಣದಲ್ಲಿ ಹೆಜ್ಜೆಯಿರಿಸುವ ವೇಳೆಗೆ ಸರಿಯಾಗಿ ಎರಡನೇಯ ದೃಶ್ಯ ನಡೆಯುತ್ತಿತ್ತು. ಸ್ಪರ್ಧೆಯ ಕೊನೆಯ ದಿನವಾದ್ದರಿಂದ ಆ ದಿನ ಸಭಾಂಗಣ ಪ್ರೇಕ್ಷಕರಿಂದ ಕಿಕ್ಕಿರಿದಿತ್ತು.

ಗೋಡೆಗಾತು ನಿಂತು ತವಕದಿಂದ ನೋಡಲಾರಂಭಿಸಿದೆ. ನನ್ನ ಎದೆ ಜೋರಾಗಿ ಬಡಿದುಕೊಳ್ಳುತ್ತಿತ್ತು. ನಾಟಕ ಒಳ್ಳೇ ರಸಘಟ್ಟದಲ್ಲಿತ್ತು. ಅಮ್ಮಿರೆಡ್ಡಿಯ ಬಗ್ಗೆ ಮೆಚ್ಚಿಗೆ ತೋರುತ್ತಿದ್ದ ಪ್ರೇಕ್ಷಕರ ಕಂಠ ನನಗೆ ಕೇಳಿಸುತ್ತಿತ್ತು. ಈ ದೃಶ್ಯ ಪೂರ್ತಿಯಾಗುತ್ತಿದ್ದಾಗ ಮಂದಿರದ ಒಂದು ಮೂಲೆಯಿಂದ ಆವೇಶವನ್ನು ತಡೆದುಕೊಳ್ಳಲಾರದೆ ಪ್ರೇಕ್ಷಕರೊಬ್ಬರು 'ಲವ್ ಲೀ' ಎಂದು ಕೂಗಿದರು. ಅದರ ಹಿಂದೆಯೇ ಕಿವಿಗಡಚಿಕ್ಕುವಂತೆ ಕರತಾಡನ ಕೇಳಿಸಿತು. ಆನಂದಾಶ್ರುಗಳ ಬೆಲೆ ಏನೆಂಬುದು ಆಗಲೇ ನನಗೆ ತಿಳಿದದ್ದು.

ಬಹುಮಾನ ವಿನಿಯೋಗದ ಸಮಯದಲ್ಲಿ ಮತ್ತಷ್ಟು ಸೆಟೆದು ನಿಂತಿದ್ದೆ ನಾನು. ವರ್ಷದ ಉತ್ತಮ ನಟನೆಂದು ನನ್ನ ಅಮ್ಮಿರೆಡ್ಡಿ ಪಾತ್ರಧಾರ ಚಿಟ್ಟಿಬಾಬು ಆಯ್ಕೆಯಾಗಿದ್ದ. ಪ್ರೇಕ್ಷಕರು ಹರ್ಷಾಮೋದಗಳಿಂದ ಮತ್ತೊಮ್ಮೆ ಕರತಾಡನ ಮಾಡಿದರು. ಉತ್ತಮ ಪ್ರದರ್ಶನದ ಬಹುಮಾನವನ್ನೂ ನನ್ನ ನಾಟಕವೇ ಪಡೆದಿತ್ತು.

ಕುಣಿದು ಕುಪ್ಪಳಿಸಬೇಕೆನ್ನುವಷ್ಟು ಆವೇಶದಲ್ಲಿದ್ದೆ ನಾನು. ಸರಸರನೆ ಗ್ರೀನ್ ರೂಮಿನ ಕಡೆ ಹೆಜ್ಜೆ ಹಾಕಿದೆ..... ಚಿಟ್ಟಿಬಾಬುವನ್ನು ಅಭಿನಂದಿಸಲೋಸುಗ. ಆದರೆ ಅಲ್ಲಿ ಸೇರಿದ ಜನರನ್ನು ನೋಡಿದೊಡನೆಯೇ ನನ್ನ ಹೆಜ್ಜೆ ತಡೆಯಿತು. ಪ್ರಸಿದ್ಧ ಸಿನಿಮಾ ನಿರ್ದೇಶಕರೊಬ್ಬರು ಚಿಟ್ಟಿಬಾಬುವಿನೊಂದಿಗೆ ಮಾತನಾಡುತ್ತಿದ್ದರು. ಅವರನ್ನು ಮಿಕ್ಕ ನಟವೃಂದ ಸುತ್ತುಗಟ್ಟಿತ್ತು. ಅವರಲ್ಲಾರೂ ನನ್ನನ್ನು ಗಮನಿಸುವ ಸ್ಥಿತಿಯಲ್ಲಿರಲಿಲ್ಲ. ಅವರ ಉತ್ಸಾಹವನ್ನೂ, ಚಿಟ್ಟಿಬಾಬುವಿನ ಅದೃಷ್ಟವನ್ನೂ ನೋಡಿ ಸಂತೋಷದಿಂದ ಮೈಮರೆತೆ ನಾನು.

ನನ್ನ ಭುಜದ ಮೇಲೆ ಯಾರದೋ ಕೈ ಬಿದ್ದಂತಾಯಿತು. ಬೆಚ್ಚಿ ತಿರುಗಿ ನೋಡಿದೆ, ಸುದರ್ಶನ..... ನನ್ನ ಗೆಳೆಯ ನಗುತ್ತಾ ನಿಂತಿದ್ದ. ಅವನು ಹೇಳಿದ

"ಹೋಗೋಣ ಬಾ, ಈಗ ಅವರಿಗೆ ನಿನ್ನ ಅವಶ್ಯಕತೆಯೇನೂ ಇಲ್ಲ. ಅವರನ್ನು ಇಕ್ಕಟ್ಟಿಗೆ ಸಿಲುಕಿಸಬೇಡ. ನಿನ್ನ ಮರ್ಯಾದೆ ಕಾಪಾಡಿಕೋ..... ಬಂದುಬಿಡು."

ಅದು ನಿಜವಾಗಿತ್ತು. ಗೆಳೆಯನೊಂದಿಗೆ ಅವನ ಮನೆಗೆ ಹೋದೆ. ಆ ರಾತ್ರಿ ಸರಿಯಾಗಿ ನಿದ್ದೆ ಬರಲಿಲ್ಲ ನನಗೆ. ಬೆಳಿಗ್ಗೆ ಹೊತ್ತೇರಿದ ಮೇಲೆ ಎದ್ದು ಸ್ನಾನಾದಿಗಳನ್ನು ಮುಗಿಸುವ ಹೊತ್ತಿಗೆ ಗಂಟೆ ಹತ್ತಾಗಿತ್ತು. ಸುದರ್ಶನ ಆಫೀಸಿಗೆ ಹೊರಟುಹೋದ. ನಾನು ಚಿಕ್ಕಡ ಪಲ್ಲಿಯ ಕಡೆ ಹೊರಟೆ.

ಸ್ಕೂಟರಿನಿ ನಡೆದಾಗ ಚಿಟ್ಟಿಬಾಬು ಮನೆಗೆ ಹೋಗಿದ್ದೆ. ಈಗ ಮನೆ ಹುಡುಕುವುದು ಕಷ್ಟವಾದರೂ ಹುಡುಕಿ ಕಡೆಗೆ ಮನೆಯ ಮುಂದೆ ನಿಂತೆ, ಆದರೆ ಆ ಮನೆಗೆ ಕೀ ಹಾಕಿತ್ತು.

ಹಿಂದಿನ ರಾತ್ರಿಯೇ ಆ ತಂದೆ ಮಗ ಇಬ್ಬರು ಮದರಾಸಿಗೆ ಹೊರಟು ಹೋದರೇನೋ ಅನಿಸಿತು ಮನೆಗೆ ಹಾಕಿದ್ದ ಬೀಗ ನೋಡಿ. ಆದರೆ ಅಲ್ಲಿಗೆ ಹತ್ತಿರದಲ್ಲಿಯೇ ಇದ್ದ ನಲ್ಲಿಯಲ್ಲಿ ನೀರು ಹಿಡಿಯುತ್ತಿದ್ದ ಚಿಟ್ಟಿಬಾಬುವನ್ನು ನೋಡಿದೊಡನೆಯೇ ನನ್ನ ಸಂದೇಹ ಪರಿಹಾರವಾಯಿತು. ಬೇಗ ಬೇಗ ಮುಂದಕ್ಕೆ ನಡೆದ.

ನನ್ನನ್ನು ಕಂಡ ತಕ್ಷಣ ಅವನ ಕಣ್ಣು ಮಿನುಗಿತು. ಆದರೆ ಅದು ಕ್ಷಣಕಾಲ ಮಾತ್ರ ಹಿಂದೆಯೇ ದೈನ್ಯ ಗೋಚರಿಸಿತು. ಅವನು ವಿನಯದಿಂದ ಎರಡು ಕೈ ಜೋಡಿಸಿದ. ವಿನಯವೇ ಮೂರ್ತಿವೆತ್ತಂತಿದ್ದ ಆ ಬಾಲಕನ ಮುಗ್ಧ ಮುಖ ನನ್ನನ್ನು ಮತ್ತಷ್ಟು ಬಲವಾಗಿ ಆಕರ್ಷಿಸಿತು.

ಅಷ್ಟರಲ್ಲಿ "ನಿಮಗೆ ಗೊತ್ತಿಲ್ಲವೇ ಸಾರ್..... ನಮ್ಮ ತಂದೆ ಹೋಗಿಬಿಟ್ಟರು" ಎಂದ.

ಸಿಡಿಲು ಬಡಿದಂತಾಯಿತು ನನಗೆ. ಮತ್ತೆ ಅವನೇ ಹೇಳಿದ.

"ಸಾರ್, ಸಾರ್ ದೇವರು ನನಗೆ ಅನ್ಯಾಯ ಮಾಡಿದ ಸಾರ್, ನಾನೀಗ ತಂದೆ ಇಲ್ಲದ ಅನಾಥ. ದಿಕ್ಕಿಲ್ಲದ ಬಾಲಕ..... ನನ್ನ ಮೇಲೆ ಕರುಣೆ ತೋರಿಸಿ ಸಾರ್, ನನ್ನನ್ನು ಸಂತೈಸಿ....."

ನನ್ನ ಕಣ್ಣಲ್ಲಿ ನೀರು ತುಂಬಿತು. ಮೈ ಕಂಪಿಸಿತು. ಏನು ಮಾತನಾಡದೆಯೇ ಹಿಂತಿರುಗಿದೆ. ನನ್ನ ಹಿಂದೆ ಅವನ ಅಳು ಕೇಳಿಸುತ್ತಲೇ ಇತ್ತು.

ನಮ್ಮೂರಿನ ಬಸ್ಸು ಹತ್ತಿದ ನಂತರ ಅಂದುಕೊಂಡೆ.

ಅಮ್ಮಿರೆಡ್ಡಿಗೆ ನಾಟಕದಲ್ಲಿಯೇ ಅಲ್ಲ ನಿಜ ಜೀವನದಲ್ಲಿಯೂ ಅನ್ಯಾಯವೇ ನಡೆದಿತ್ತು. "ಚಿಟ್ಟಿಬಾಬೂ, ನೀನಿನ್ನು ಆ ನಾಟಕದಲ್ಲಿ ಪಾತ್ರ ವಹಿಸಬೇಡಪ್ಪಾ! ಕೇವಲ ನಾಟಕಗಳನ್ನು ಬರೆಯುವವನು ನಾನು. ಜೀವನ ಗತಿಯನ್ನು ಮಾರ್ಪಡಿಸಲು ನಾನೆಷ್ಟರವನು? ನಾನಾರನ್ನೂ ಉದ್ಧಾರ ಮಾಡಲಾರೆ..... ನಿನ್ನನ್ನು ಸಾಂತ್ವಾನಗೊಳಿಸಲಾರೆ. ನಿಜ..... ಇದು ನಿಜ....."



# ಲಾಸ್ಟ್ ಪೆರೇಡ್

ಮೂಲ : ಶ್ರೀ ಕೆ. ಸದಾಶಿವರಾವ್

ಬೆಳಿಗ್ಗೆ ಏಳುತ್ತಿದ್ದಂತೆಯೇ ಕರ್ನಲ್ ಫ್ರಾಂಕ್ಲಿನ್ ಹೋವಾರ್ಡ್‌ನ ತಲೆ ಸಿಡಿದು ಹೋಗುವಂತೆನಿಸುತ್ತಿತ್ತು. ಪಟ್ಟು ಪುಟ್ಟ ಸುತ್ತಿಗೆಗಳಿಂದ ಸಾವಿರಾರು ಮಂದಿ ತನ್ನ ತಲೆಯ ಮೇಲೆ ಒಂದೇ ಸವನೆ ಬಡಿಯುತ್ತಿದ್ದಂತೆನಿಸುವ ತಲೆನೋವು..... ಟೆರಿಬಲ್ ಹ್ಯಾಂಗೋವರ್..... ಬ್ಲಡೀಹೆಲ್.....

ಮುನ್ನಾದಿನ ರಾತ್ರಿ ಆಫೀಸರ್ಸ್ ಕ್ಲಬ್ಬಿನಲ್ಲಿ ಬ್ರಿಟಿಷ್ ಆಫೀಸರ್ಸ್ ಎಲ್ಲರೂ ಸೇರಿ, ವಿಪರೀತವಾಗಿ ಆಲ್ಕೋಹಾಲಿಕ್ ಡ್ರಿಂಕ್ಸ್ ಸೇವಿಸಿ ತಮ್ಮ ಮನಸುಗಳನ್ನು ಆವರಿಸಿದ್ದ ಆತಂಕ, ಅಭದ್ರತೆ, ಒಂಟಿತನ, ಅಸಹಾಯಕತೆ ಇವುಗಳಿಂದ ತುಂಬಿದ ಭಾವನೆಗಳನ್ನು ಮರೆಯಲು ಪ್ರಯತ್ನಿಸಿದ್ದರು – ಎಲ್ಲರೂ ಒಟ್ಟಾಗಿ, ಆದರೆ ಅದೆಲ್ಲಾ ವಿಫಲವಾಗಿತ್ತು..... ಯೂಸ್‌ಲೆಸ್..... ಬಟ್ ದೇ ಕುಡ್ ನಾಟ್ ಹೆಲ್ಪ್ ಇಟ್.....

ಮೊತ್ತ ಮೊದಲಬಾರಿ ಆಫೀಸಿನಲ್ಲಿ ಎಲ್ಲರ ನಗೆಯೂ ಅಡಗಿಹೋಗಿತ್ತು. ಜೋಕ್ಸ್ ಕಟ್ ಮಾಡುವ ಮೂಡಿನಲ್ಲಿ ಯಾರಿದ್ದರು? ಆ ಸಂಜೆ..... ಸಹಿಸಲಸಾಧ್ಯವಾದ ದುರ್ಭರ ಏಕಾಂತದ ಸಂಜೆಯಾಗಿತ್ತು. ಸೈಲೆಂಟ್ ಇವ್‌ನಿಂಗ್..... ಲಾಂಗೆಸ್ಟ್ ಇವ್‌ನಿಂಗ್ ಇನ್ ದೆಯರ್ ಲೈವ್ಸ್!!

ಬೇರರ್ಸ್ ಎಂದಿನಂತೆ ಆರ್ಡರ್ಸ್ ತೆಗೆದುಕೊಳ್ಳುತ್ತಾ ವಿನಯದಿಂದ ವರ್ತಿಸುತ್ತಿದ್ದರು. ಈ ಆಂಗ್ಲ ದೊರೆಗಳು ಈ ದಿನ ಹೀಗೇಕಿದ್ದಾರೆಂದು ಅವರಿಗೆ ಗೊತ್ತು. ನೌಕರರಿಗೆಲ್ಲಾ ಅಷ್ಟು ಹೊತ್ತಿಗೆ ಸುದ್ದಿ ತಿಳಿದುಹೋಗಿತ್ತು..... ತಮ್ಮ ದೇಶಕ್ಕೆ ಸ್ವಾತಂತ್ರ್ಯ ಬರಲಿದೆಯೆಂದೂ, ಈ ಬ್ರಿಟಿಷ್ ದೊರೆಗಳು, ಬ್ರಿಟಿಷ್

ರಾಜ, ತಮಗಿನ್ನು ಪಾಲಕರಲ್ಲವೆಂದು ಗೊತ್ತಾಗಿತ್ತು. ಅದರ ಅರ್ಥ ಏನೆಂದು ಅವರಿಗೆ ಸಂಪೂರ್ಣವಾಗಿ ತಿಳಿದಿರಲಿಲ್ಲ. ಆದರೂ ದೇಶದಲ್ಲಿನ ಎಲ್ಲಾ ಪ್ರಜೆಗಳಂತೆ ಅವರು ಸಂತೋಷವಾಗಿದ್ದರು.

ಸ್ವಾತಂತ್ರ್ಯ ಬಂದಿತೆಂಬ ಸಂಭ್ರಮ ಎಲ್ಲರಲ್ಲಿಯೂ ಇದ್ದದ್ದು ನಿಜ. ಆದರೆ ಅದರ ಅರ್ಥ ಏನೆಂದು ಅಲ್ಲಿದ್ದ ಬಹಳ ಮಂದಿಗೆ ತಿಳಿದಿರಲಿಲ್ಲ. ಪ್ರಪಂಚದಲ್ಲಿ ಭಾರತ ದೇಶದ ಪರವಾಗಿ ನಡೆಯುತ್ತಿದ್ದ ಅತಿ ಮುಖ್ಯವಾದ ಸಂಘಟನೆ ಇದೆಂದೂ, ಎಲ್ಲಾ ದೇಶಗಳೂ ಈ ಪರಿಣಾಮವನ್ನು ಜಾಗರೂಕತೆಯಿಂದ ಪರಿಶೀಲಿಸುತ್ತಿವೆಯೆಂದೂ, ಇತಿಹಾಸಕಾರರು ಇದನ್ನು ವಿಶ್ಲೇಷಣೆ ಮಾಡುತ್ತಿದ್ದಾರೆಂದು ಕೆಲವರಿಗೆ ಗೊತ್ತು. ಆದರೆ ನಿಜ ಹೇಳಬೇಕೆಂದರೆ,

ಅತಿ ಮುಖ್ಯವಾದ ಸಂಘಟನೆಯಿಂದ ದೇಶ ವಿದೇಶಗಳಲ್ಲಿನ ಪ್ರಜೆಗಳಿಗೆ ಏನು ಸಂಭವಿಸಲಿದೆ ಎಂಬುದರ ಬಗ್ಗೆ ಬಹಳಷ್ಟು ಮಂದಿಗೆ ಗೊತ್ತಾಗಿರಲಿಲ್ಲ. ಸದ್ಯಕ್ಕೆ ಅದನ್ನು ಕುರಿತು ಹೇಳಲು ಸಾಧ್ಯವಾಗುವಂತೆಯೂ ಇರಲಿಲ್ಲ.

ಬೊಂಬಾಯಿನಲ್ಲಿದ್ದ ಬ್ರಿಟಿಷರ್ಸ್ ಆರ್ಮಿ ಆಫೀಸರ್ಸ್ ಕ್ಲಬ್ಬಿನಲ್ಲಿ ಇಂಗ್ಲಿಷ್ ದೊರೆಗಳು ವಿಚಿತ್ರವಾಗಿ ವರ್ತಿಸುತ್ತಿದ್ದರು. ಸದಾ ಜೋವಿಯಲ್ಲಾಗಿರುತ್ತಾ, ಅಶ್ಲೀಲವಾದ ಜೋಕ್ಸ್ ಹೇಳಿ ಎಲ್ಲರನ್ನೂ ನಕ್ಕು ನಲಿಯುವಂತೆ ಮಾಡುತ್ತಿದ್ದ ಕ್ಯಾಪ್ಟನ್ ಮಾರ್ಷಲ್ ದೊರೆ, ಅಸಹಜವೆಂಬಂತೆ ಚಿಂತಾಕ್ರಾಂತನಾಗಿದ್ದ. ಗಂಭೀರವಾಗಿ ಕ್ರಿಕೆಟ್ ಆಟವನ್ನು ಕುರಿತು ಮಾತನಾಡುವ ಮೇಜರ್ ರೆನಾರ್ಡ್ ದೊರೆ, ದಪ್ಪಗೆ ಮುಖ ಮಾಡಿಕೊಂಡು ಕುಳಿತು ತನ್ನೆದುರಿಗಿದ್ದ ವಿಸ್ಕಿಗ್ಲಾಸಿನ ಕಡೆ ಎವೆಯಿಕ್ಕದೆ ನೋಡುತ್ತಿದ್ದ. ಅಷ್ಟು ಹೊತ್ತಿಗಾಗಲೇ ಆರು ಪೆಗ್ಗುಗಳನ್ನು ಮುಗಿಸಿ ಆಗಿತ್ತು. ಬೇರರ್ಸ್‌ಗೆ ದಿಕ್ಕು ತೋಚದಂತಾಗಿತ್ತು. ಇನ್ನೊಂದೆರಡು ಪೆಗ್ಗುಗಳನ್ನು ಹಾಕಿಕೊಂಡರೆ ಅಲ್ಲಿಯೇ ವಾಂತಿ ಮಾಡಿಕೊಂಡು ಬಿದ್ದು ಬಿಡುತ್ತಾನೇನೋ ಎಂದು ಅವರಿಗೆ ಗಾಬರಿಯಾಗಿತ್ತು. ಇನ್ನೂ ಕೆಲವರು ಬ್ರಿಟಿಷ್ ಆಫೀಸರುಗಳು ಅವರವರ ಅಭ್ಯಾಸಕ್ಕೆ ವಿರುದ್ಧವಾಗಿ ಕ್ಲಬ್ ವರಾಂಡದಲ್ಲಿ ಕುಳಿತು ಕೆಂಪು ಬಣ್ಣದಲ್ಲಿ ಅಸ್ತಮಿಸುತ್ತಿದ್ದ ಸೂರ್ಯನ ಕಡೆ ನಿಸ್ಸಹಾಯಕರಾಗಿ ನೋಡುತ್ತಿದ್ದರು.

ಕತ್ತಲು ಆವರಿಸಿ, ಲೈಟುಗಳನ್ನು ಹಾಕಿ ಕೆಲವು ಕ್ಷಣ ಕಳೆದ ಅನಂತರ ಅವರಲ್ಲಿ ಸ್ವಲ್ಪ ಚೈತನ್ಯ ಕಾಣಬಂದಿತ್ತು.

"ರಾಮ್‌ಸಿಂಗ್....."

"ಜೀ..... ಸಾಬ್....."

"ವಿಸ್ಕಿ ಆ್ಯಂಡ್ ಸೋಡಾ....."

"ಠೀಕ್ ಹೈ ಸಾಬ್....."

"ದೇಖೋ ರಾಮ್ ಸಿಂಗ್."

"ಸಾಬ್....."

"ರಮ್ ಆ್ಯಂಡ್ ವಾಟರ್."

"ಅಚ್ಛಾ ಸಾಬ್....."

ಆರ್ಡರ್ಸ್ ಪ್ರಕಾರ ಡ್ರಿಂಕ್ಸ್ ಅವರ ಟೇಬಲ್ ಬಳಿ ಬಂದು ಕುಳಿತವು.

ಕ್ಲಬ್ಬಿನ ಹೊರಗೆ ಕತ್ತಲಾವರಿಸಿತ್ತು. ಆ ದಿನ ಗಾಲ್ಫ್ ಕೋರ್ಸ್ ನಿರ್ಮಾನುಷ್ಯವಾಗಿತ್ತು. ರೆಡಿ ಬಾಯ್ಸ್ ಕೆಲಸವಿಲ್ಲದೆ ಸುಮ್ಮನೆ ಹರಟೆ ಹೊಡೆಯುತ್ತಾ ಕಾಲ ಕಳೆದಿದ್ದರು. ಟೆನಿಸ್ ಕೋರ್ಟಿನಲ್ಲಿ ಆ ದಿನ ಯಾರು ಆಡಲೇ ಇಲ್ಲ. ಕತ್ತಲಾಗುತ್ತಿದ್ದಂತೆ ಮಾರ್ಕರ್ಸ್ ನೆಟ್ಸ್ ತೆಗೆದು ಒಳಗಿಟ್ಟು ದೀಪಗಳನ್ನು ಆರಿಸಿದ್ದರು.

ಲಾನ್‌ನಲ್ಲಿ ಅಲ್ಲಲ್ಲಿ ಕೇನ್ಸ್ ಚೇರ್‌ಗಳಲ್ಲಿ ಕುಳಿತು ಕೆಲವು ದೊರೆಗಳು ಮೌನವಾಗಿ ಡ್ರಿಂಕ್ಸ್ ಮಾಡುತ್ತಿದ್ದರು.

ದೊರೆಸಾನಿಯರೆಲ್ಲಾ ಮನೆಯಲ್ಲಿದ್ದುಕೊಂಡು ಸಾಮಾನುಗಳನ್ನು ಪ್ಯಾಕ್ ಮಾಡಿಕೊಳ್ಳುತ್ತಿದ್ದರು.

ಎಲ್ಲೆಲ್ಲೂ ನೀರವ, ನಿಶ್ಶಬ್ದ!

ಆ ದಿನ ಆಗಸ್ಟ್ 14.

ನಾಳೆ ಇಂಡಿಯಾ ದೇಶಕ್ಕೆ ಸ್ವಾತಂತ್ರ್ಯ ಲಭಿಸಲಿದೆ. ನಿಜ ಹೇಳಬೇಕೆಂದರೆ ಅರ್ಧ ರಾತ್ರಿಯಲ್ಲಿ ಬರಲಿದೆ, ಸ್ವಾತಂತ್ರ್ಯ.....

ಈಗಾಗಲೇ ಲಾರ್ಡ್ ಮೌಂಟ್ ಬ್ಯಾಟನ್ ಮತ್ತು ಲೇಡಿ ಮೌಂಟ್ ಬ್ಯಾಟನ್ ದೆಹಲಿಯಲ್ಲಿ ರಂಗಸ್ಥಳ ಸಿದ್ಧಪಡಿಸಿದ್ದರು.

ಮೊದಲನೆಯ ಪ್ರಧಾನ ಮಂತ್ರಿಯಾಗಿ ಪಂಡಿತ ಜವಾಹರಲಾಲ್ ನೆಹರೂ ಆ ರಾತ್ರಿ ಅಧಿಕಾರ ವಹಿಸಿಕೊಳ್ಳಲಿದ್ದರು. ಕೋಟಿ ಕೋಟಿ ಮಂದಿ ಭಾರತೀಯರು ಬ್ರಿಟಿಷ್ ರಾಜ್ಯಪಾಲನೆಯಿಂದ ವಿಮುಕ್ತರಾಗಲಿದ್ದರು. ಮಹಾತ್ಮಾ ಗಾಂಧೀಜಿ, ಇತರ ದೇಶ ನಾಯಕರು ಎಷ್ಟೋ ಕಷ್ಟಪಟ್ಟು, ಕನಸು ಕಂಡು ಸಾಧಿಸಿದ ಸ್ವಾತಂತ್ರ್ಯ ನಾಳೆ ನಿಜವಾಗಲಿದೆ..... ಈ ಚಾರಿತ್ರಾತ್ಮಕ ಸಂಘಟನೆಯಿಂದ ಎಷ್ಟೋ ಕೋಟಿ ಮಂದಿಯ ಜೀವನ ರೀತಿಯೇ ಬದಲಾಗಿ ಹೋಗುತ್ತದೆ.

ಮುಖ್ಯವಾಗಿ ಇಷ್ಟು ದಿನ ಈ ದೇಶವನ್ನು ಪರಿಪಾಲಿಸಿದ ಆಂಗ್ಲೇಯರ ಪರಿಸ್ಥಿತಿ ತಾರುಮಾರಾಗಲಿತ್ತು.

ಒಂದು ಕಾಲದಲ್ಲಿನ ಪಾಲಕರು ನಾಳೆಯಿಂದ ಅಧಿಕಾರದಿಂದಿಳಿದು, ಸಾಮಾನ್ಯ ವಿದೇಶಿಯರಾಗಿ, ಸೋತು ಹೋದವರಂತೆ ತಮ್ಮ ದೇಶಕ್ಕೆ ಹೊರಟು ಹೋಗುತ್ತಾರೆ.....

ಹೋಗಬೇಕು!

ಹೋಗದೆ ಬೇರೆ ಮಾರ್ಗವೇ ಇಲ್ಲ.

ಕರ್ನಲ್ ಹೋವಾರ್ಡ್ ತಮ್ಮ ಕೊನೆಯ ದಿನಗಳು ಈ ರೀತಿ ಇರುತ್ತವೆ ಎಂದು ಎಂದೂ ಊಹಿಸಿರಲಿಲ್ಲ. ನಿಜವಾಗಿಯೂ ಇಂತಹ ದಿನವೊಂದು ಬರುತ್ತದೆಯೆಂದು ಆತ ಕನಸು ಕಾಣಲಿಲ್ಲ. ಆತ ತನ್ನ ಇತರ ಬ್ರಿಟಿಷ್ ಆಫೀಸರ್ಸ್ ಜತೆ ಕ್ಲಬ್ಬಿನಲ್ಲಿ, ಸ್ವಾತಂತ್ರ್ಯ ಹೋರಾಟಗಾರರಾದ ಇಂಡಿಯನ್ ನಾಯಕರ ಬಗ್ಗೆ, ಜೋಕ್ಸ್ ಹಾಕಿ ನಗುತ್ತಿದ್ದುದುಂಟು. ಆ ನಗೆಯಲ್ಲಿ ಅವಹೇಳನೆ, ವ್ಯಂಗ್ಯ, ಕೀಳು ಭಾವನೆಗಳು ವ್ಯಕ್ತವಾಗುತ್ತಿದ್ದುವು.

ಮಹಾತ್ಮಾಗಾಂಧೀಜಿಗೆ ಅವರಿಟ್ಟ ಮುದ್ದು ಹೆಸರು 'ನೇಕಡ್ ಫಕೀರ್!'

ವಂದೇಮಾತರಂ ಹಾಡನ್ನು ವಕ್ರವಾಗಿ ಬದಲಾಯಿಸಿ ಅಶ್ಲೀಲ ಪದಗಳನ್ನು ಬಳಸಿ ಡ್ರಿಂಕಿಂಗ್ ಸಾಂಗ್‌ನಂತೆ ಹಾಡುತ್ತಿದ್ದರು. ಆದರೆ ಅವರ ಕಣ್ಣ ಮುಂದೆಯೇ ನಡೆಯುತ್ತಿದ್ದ ಚರಿತ್ರೆ ಅವರ ನಂಬಿಕೆಗಳನ್ನು ಚೂರು ಚೂರು ಮಾಡಿತ್ತು. ಅವರ ನಿಶ್ಚಯಗಳನ್ನು, ದೃಢ ನಂಬಿಕೆಗಳನ್ನು ಸಮೂಲವಾಗಿ ನಾಶಮಾಡುತ್ತಾ ಇಷ್ಟು ದಿನ ಅವರು ಭದ್ರವಾಗಿ ಕಾಪಾಡಿಕೊಂಡಿದ್ದ ಅಭಿಪ್ರಾಯಗಳನ್ನು ಕಾಲಿನಿಂದ ತುಳಿದು, ನೇಕೆಡ್ ಫಕೀರ ತಾನೇ ಗೆದ್ದಿದ್ದ. ಆ ಭಯಂಕರ ಸತ್ಯ ಅವರ ಮನೋದಾರ್ಢ್ಯವನ್ನೇ ಸಡಿಲಿಸಿತ್ತು. 'ಗಾಂಧಿ ತಮ್ಮನ್ನು ಸೋಲಿಸಿದ' ಎಂಬ ವಿಷಯ ನಂಬಲೇಬೇಕಾದ ನಿಜವಾಗಿತ್ತು.

ರವಿ ಅಸ್ತಮಿಸಿದ ಬ್ರಿಟಿಷ್ ಸಾಮ್ರಾಜ್ಯಕ್ಕೆ ರಾಹು ಮುಸುಗಿದ್ದ.....

ಬ್ರಿಟಿಷ್ ರಾಜ್ಯದ ಅಂತ್ಯಕಾಲಕ್ಕಿದು ನಾಂದಿ.

ತಮ್ಮ ಸ್ವರ್ಣಯುಗದಂತಹ ಕಾಲ ಕಳೆದು ಹೋಯಿತು. ಅವು ತಮ್ಮ ಬದುಕಿನಲ್ಲಿ ಮತ್ತೆ ಬಾರದ ದಿನಗಳು.....

ಆ ರಾತ್ರಿ ಅವರಿಗೆ ಚರಮ ರಾತ್ರಿ.....

ಕಾಳ ರಾತ್ರಿ!!.....

ವಿಪರೀತವಾಗಿ ಕುಡಿದ ಆಲ್ಕೋಹಾಲ್‌ನಿಂದಾಗಿ ನಿದ್ದೆ ಬಾರದೆ, ಬಂದರೂ ಅರ್ಥವಿಲ್ಲದ ಕೆಟ್ಟ ಕನಸುಗಳಿಂದ ಅವರು ಆ ರಾತ್ರಿಯನ್ನು ಕಳೆದರು.

ಬೆಳಗ್ಗೆ ಬೇರರ್ ಕಾಲೂರಾಂ ಎಂದಿನಂತೆ ಕರ್ನಲ್ ಹೋವಾರ್ಡ್‌ನನ್ನು ಎಬ್ಬಿಸಿದ. ಟೇಬಲ್ ಮೇಲೆ ಹಬೆಯಾಡುತ್ತಿದ್ದ ಟೀ ಇತ್ತು. ಅದನ್ನು ನೋಡಿದಾಕ್ಷಣ ಅವನ ಜೀವಕ್ಕೆ ಒಂದು ಕ್ಷಣ ಹಾಯೆನಿಸಿತು. ಆದರೆ ಕಣ್ಣು ಉರಿಯುತ್ತಿತ್ತು. ಹಣೆ ಸಿಡಿಯುತ್ತಿತ್ತು. ಹೊಟ್ಟೆಯ ವಿಷಯ ಹೇಳಬೇಕಾದ್ದೇ ಇಲ್ಲ..... ಪರಿಸ್ಥಿತಿ ತುಂಬಾ ಭಯಂಕರವಾಗಿದೆ ಅನ್ನಿಸಿತು.

ಕಣ್ಣು ತೆರೆದು ಬೇರರ್ ಕಡೆ ನೋಡಿದ. ಅವನ ವರ್ತನೆಯಲ್ಲೇನಾದರೂ ಬದಲಾವಣೆ ಇದೆಯೇನೋ ಎಂದು ಹೋವಾರ್ಡ್‌ಗೆ ಅನುಮಾನ. ಅವನ ಕಣ್ಣುಗಳಲ್ಲಿ ಕಾನ್ಫಿಡೆನ್ಸಿನಿಂದ ಕೂಡಿದ ಹೊಸ ಕಾಂತಿ ಮಿಂಚಿದಂತೆನಿಸಿತು.

ಬಹುಶಃ ಅದು ತನ್ನ ಊಹೆಯಾಗಿರಲೂಬಹುದು ಎಂದುಕೊಂಡ.

ಎಷ್ಟು ದಿನ ತನಗೆ ಸರ್ವೆಂಟ್ ಆಗಿದ್ದವ, ಇಂದಿನಿಂದ ಆ ಬಾಂಧವ್ಯ ಕಡಿದು ಹೋಗುತ್ತದೆ.

"ಗುಡ್ ಮಾರ್ನಿಂಗ್ ಸಾಹೇಬ್" ಎಂದ ಬೇರರ್ ಕಾಲೂರಾಮ್.....

"ಮಾರ್ನಿಂಗ್ ಕಾಲೂ....."

ಬೇರರ್ ಹಬೆಯಾಡುತ್ತಿದ್ದ ಟೀಯನ್ನು ಮಗ್ ತುಂಬಾ ಬಗ್ಗಿಸಿ ಕೈಗೆ ಕೊಟ್ಟ ತಲೆಯಲ್ಲಿ ನಾಲ್ಕು ಬ್ರಾಸ್ ಬ್ಯಾಂಡ್‌ಗಳು ಒಂದೇ ಸಮ ಸದ್ದು ಮಾಡುತ್ತಿದ್ದಂತೆ ಅನ್ನಿಸುತ್ತಿತ್ತು. ಬಿಸಿ ಬಿಸಿ ಟೀ ಕುಡಿದು ಮತ್ತೆ ಮಂಚದ ಮೇಲೆ ವಾಲಿದ ಹೋವಾರ್ಡ್.

"ಓ..... ಲಾರ್ಡ್" ಎಂದು ನರಳಿದ, ಬಿಸಿ ಟೀ ಹೊಟ್ಟೆಯೊಳಕ್ಕೆ ಬಿದ್ದ ಮೇಲೆ ತಲೆಯಲ್ಲಿನ ಸಿಡಿತ ಸ್ವಲ್ಪ ಕಡಿಮೆಯಾದಂತೆನಿಸಿತು.

ಕಾಲೂರಾಮ್ ಮತ್ತೆ ಅರ್ಧ ಮಗ್ ಟೀ ಬಗ್ಗಿಸಿದ. ಎದ್ದು ಅದನ್ನೂ ಪೂರ್ತಿ ಕುಡಿದ ಹೋವಾರ್ಡ್.

ಕಾಲೂರಾಮ್ ತನ್ನ ಕಡೆ ನೋಡುತ್ತಾ ನಿಂತಿದ್ದನ್ನು ಕಂಡು 'ಕ್ಯಾ ಬಾತ್ ಹೈ ಕಾಲೂ' ಎಂದು ಕೇಳಿದ.

"ಈ ದಿನ ಪೆರೇಡ್ ಇದೆ ಸಾಬ್, ಅಮ್ಮಾ ಅವರು ನೆನಪು ಮಾಡು ಅಂದರು."

ಗೆಟ್ ಸ್ಕಾಟ್! ಹೌದೌದು, ಇಂಡಿಯನ್ ಆರ್ಮಿಗೆ ಬ್ರಿಟಿಷ್ ಆರ್ಮಿ ಫಾರ್ಮಲ್ ಆಗಿ ಅಧಿಕಾರ ಹ್ಯಾಂಡೋವರ್ ಮಾಡಬೇಕಾಗಿತ್ತು. ಆ ಜವಾಬ್ದಾರಿಯನ್ನು ತನ್ನ ತಲೆಯ ಮೇಲೆ ಹೊರಿಸಿರುವಂತೆ ಆರ್ಮಿ ಹೆಡ್

ಕ್ವಾರ್ಟರ್ಸ್‌ನಿಂದ ಆರ್ಡರ್ ಬಂದಿತ್ತು. ಈ ಹ್ಯಾಂಡೋವರ್‌ನಿಂದಾಗಿ ಆ ವಿಷಯ ಮರೆತೇ ಬಿಟ್ಟಿದ್ದ ಕರ್ನಲ್ ಹೋವಾರ್ಡ್. ಸದ್ಯ! ಈಗಲಾದರೂ ನೆನಪಿಸಿದಳಲ್ಲಾ!

"ಫ್ರ್ಯಾಂಕ್ ಎದ್ದನೇ?" ಕೆಳಗಿನಿಂದ ಕೂಗಿದಳು ಪೆಟ್ರೋಷಿಯಾ.

"ಎಸ್, ಡಾರ್ಲಿಂಗ್" ಉತ್ತರಿಸಿದ ಹೋವಾರ್ಡ್.

"ಈ ಪೆರೇಡ್ ಪೂರ್ತಿ ಆದ ಮೇಲೆ, ಮನೆಗೆ ಬೇಗ ಬಂದು ಬಿಡು ಡಿಯರ್. ಪ್ಯಾಕಿಂಗ್‌ಗೆ ನಿನ್ನ ಸಹಾಯ ಬೇಕು. ನನಗೆ ಸೊಂಟ ಬಿದ್ದು ಹೋಗ್ತಿದೆ ಈ ಕೆಲಸದಲ್ಲಿ. ಕೇಳ್ತಿದೀಯಾ" ಮತ್ತೆ ಕೂಗಿ ಹೇಳಿದ್ದಳು.

"ಎಸ್..... ಎಸ್..... ಕೇಳಿಸ್ತು ಬಿಡು..... ಲೆಟ್ ಮಿ ಗೆಟ್ ರೆಡಿ ಡಿಯರ್....." ಮಂಚದಿಂದ ಮೇಲೆದ್ದ ಹೋವಾರ್ಡ್.

"ಕಾಲೂ, ಪೆರೇಡ್‌ಗೆ ಸೆರೆಮೋನಿಯಲ್ ಯೂನಿಫಾರಂ ಸಿದ್ಧಮಾಡು ಅಂತ ಹೇಳು."

"ಅಚ್ಛಾ ಸಾಬ್....." ಕಾಲೂರಾಮ್ ಹೊರಟು ಹೋದ.

ಬಾತ್‌ರೂಮಿನಲ್ಲಿ ಷೇವಿಂಗ್ ಸೆಟ್ ಎಲ್ಲಾ ಸಿದ್ಧವಾಗಿತ್ತು. ಸ್ನಾನಕ್ಕೆ ಬಿಸಿ ನೀರು ಟಬ್‌ನಲ್ಲಿ ಹಬೆಯಾಡುತ್ತಾ ಸಿದ್ಧವಾಗಿತ್ತು.

ಹೋವಾರ್ಡ್ ಷೇವ್ ಮಾಡಿಕೊಳ್ಳುತ್ತಿರುವಾಗ ಆಲೋಚನೆಗಳು ಅವನ ತಲೆಯಲ್ಲಿ ಹಾದು ಹೋಗತೊಡಗಿದವು. ಇಂಡಿಯನ್ ಆರ್ಮಿಗೆ ಜವಾಬ್ದಾರಿಯನ್ನು ಒಪ್ಪಿಸಿದ ಅನಂತರ ಬಿಳಿಯರೆಲ್ಲಾ ಸೇರಿ ಪ್ಯಾಕ್ ಮಾಡಿಕೊಂಡು ಮನೆಗೆ ಹೊರಟು ಹೋಗಬೇಕು. ತಮ್ಮ ದೇಶಕ್ಕೆ ಹೊರಟು ಹೋಗಬೇಕು.....

ಯಾವ ಮನೆಗೆ.....?

ಯಾವ ದೇಶಕ್ಕೆ.....?

ಹೋವಾರ್ಡ್‌ಗೆ ಅರ್ಥವಾಗಲಿಲ್ಲ.

ಫ್ರಾಂಕ್ಲಿನ್ ಹೋವಾರ್ಡ್ ಕುಟುಂಬಿಕರು ವಂಶ ಪಾರಂಪರ್ಯವಾಗಿ ಇಂಡಿಯಾದಲ್ಲಿ ಮಿಲಿಟರಿ ಆಫೀಸರ್ಸ್ ಆಗಿ ಇದ್ದವರೇ. ತಂದೆ, ತಾತ, ಮುತ್ತಾತ ಎಲ್ಲರೂ ಇಂಡಿಯಾದೊಂದಿಗೆ ಬಾಂಧವ್ಯ ಬೆಳೆಸಿಕೊಂಡವರೇ. ಇಲ್ಲಿಯೇ ಹುಟ್ಟಿ, ಇಂಗ್ಲೆಂಡಿನಲ್ಲಿ ಓದಿಕೊಂಡು ಮತ್ತೆ ಇಂಡಿಯಾಕ್ಕೆ ವಾಪಸು ಬಂದು, ಇಲ್ಲಿಯೇ ಕೆಲಸ ಮಾಡಿ, ಇಲ್ಲಿಯೇ ಕೊನೆಯುಸಿರೆಳೆದವರು ಆತನ ಪೂರ್ವಿಕರು. ಆತನ ಬಂಧುಗಳ ಸಮಾಧಿಗಳು ಇಂಡಿಯಾದ ನಾಲ್ಕು ಮೂಲೆಗಳಲ್ಲಿಯೂ ಇದ್ದವು. ಕಲ್ಕತ್ತಾ, ಮದ್ರಾಸು, ಬೊಂಬಾಯಿ, ಲಕ್ನೋ, ದೆಹಲಿ, ಕಾನ್ಪುರ್, ಮೀರಜ್, ಇನ್ನು ಎಷ್ಟೋ ನಗರಗಳಲ್ಲಿವೆ. ಆತನ ಬಂಧುಗಳು, ಕಜಿನ್ಸ್, ಅಂಕಲ್ಸ್, ಆಂಟ್ಸ್ ಎಲ್ಲರೂ ಇಂಡಿಯಾದಲ್ಲಿ ಜೀವಿಸಿದವರೇ..... ಅವರಿಗೆ ಇಂಗ್ಲೆಂಡಿನೊಂದಿಗಿದ್ದ ಬಾಂಧವ್ಯಗಳು ಬಹಳ ಕಡಿಮೆ. ಹಾಲಿಡೇಸ್‌ಗೆ ಇಂಗ್ಲೆಂಡಿಗೆ ಹೋದಾಗ ಅವರಿಗೆ ಎಲ್ಲಾ ಹೊಸದಾಗಿ ಕಾಣುತ್ತಿತ್ತು. ಅಲ್ಲಿನ ಇವರ ಬಂಧುಗಳಿಗೆ ಇವರು ವಿಚಿತ್ರವಾಗಿ ಹಳ್ಳಿಯ ಹೈದರಂತೆ ಕಾಣುತ್ತಿದ್ದರು. ಅವರ ಸಭ್ಯತಾ ಪ್ರಪಂಚಕ್ಕೆ ದೂರವಾಗಿ, ಒರಟಾಗಿದ್ದಂತೆನ್ನಿಸುತ್ತಿತ್ತು.

"ಕೋಯಿ ಹೈ?....." ಎಂಬ ಇವರ ಕೂಗು ವಿಚಿತ್ರವಾಗಿ ಧ್ವನಿಸಿ ಇವರನ್ನು 'ಕೋಯೀಹೈಗಳು' ಎಂದೇ ಕರೆಯುತ್ತಿದ್ದರು.

ಹಿಂದಿ, ಉರ್ದು, ತೆಲುಗು, ತಮಿಳು, ಮರಾಠಿ, ಪರ್ಷಿಯನ್ ಸೇರಿದ ಇವರ ಭಾಷೆ, ಮೂಲ ಇಂಗ್ಲಿಷರಿಗೆ ಅನಾಗರಿಕವಾಗಿಯೂ, ಕಠೋರವಾಗಿ, ಗ್ರಾಮ್ಯರಾಗಿಯೂ ಕಾಣಿಸುತ್ತಿದ್ದರು. ಉಚ್ಚಾರಣೆಯಲ್ಲಿ ಎಷ್ಟೋ ಲೋಪ ದೋಷಗಳು ಕಾಣಿಸುತ್ತಿದ್ದವು. ಇವರ ಭಾಷೆಯನ್ನು ಅಲ್ಲಿನವರು 'ಛೀ ಛೀ ಇಂಗ್ಲಿಷ್' ಎಂದು ಲೇವಡಿ ಮಾಡುತ್ತಿದ್ದರು.

"ಇಂಡಿಯಾದವರು ಇವರು" ಎಂದು ಪ್ರತ್ಯೇಕವಾಗಿ ಗುರ್ತಿಸುತ್ತಿದ್ದರು.

ಹೀಗಾಗಿ ಅಲ್ಲಿನ ವಾತಾವರಣದಲ್ಲಿ ಬೆರೆಯಲಾರದೆ ಸಾಧ್ಯವಾದಷ್ಟು ಬೇಗ ವಾಪಸ್ಸಾಗಿ ಬಿಡುತ್ತಿದ್ದರು.....

ಇಂಡಿಯಾ ದೇಶದಲ್ಲಿನ ಧೂಳು ತುಂಬಿದ ವಾತಾವರಣ, ರೋಗ ರುಜಿನಗಳು, ದಾರಿದ್ರ್ಯ, ಕಾಲರಾ, ಸ್ಮಾಲ್‌ಫಾಕ್ಸ್, ಟೈಫಾಯಿಡ್, ಬಿಸಿಲು,

ಬೆವರು, ಸಾವು..... ಇವುಗಳೆಲ್ಲವನ್ನೂ ಹುಡುಕಿಕೊಂಡು ಬಂದು ಬಿಡುತ್ತಿದ್ದರು.

ಇಂಡಿಯಾದ ಹೊರತು ಅವರಿಗೆ ಬೇರೆ ದೇಶವಿರಲಿಲ್ಲ. ಇದು ಅವರದೇ ದೇಶ! ಈ ದೇಶವನ್ನು ಆಳುವುದು ಅವರ ಜವಾಬ್ದಾರಿ. ಅದು ಧ್ರುವನಿರ್ಣಯ ಸಹಾ! ಅದನ್ನು ಬದಲಾಯಿಸಲು ಯಾರಿಂದಲೂ ಸಾಧ್ಯವಾಗದು ಎಂಬುದು ಅವರ ಗಾಢನಂಬಿಕೆ.....

ಓಲ್ಡ್ ಇಂಡಿಯಾ, ಹ್ಯಾಂಡ್ಸ್ 8 ಇಂಡಿಯಾ ಕುಟುಂಬಗಳು ಸಾಕಷ್ಟಿವೆ..... ಕಾಡನ್ಸ್..... ನಿಕಾಲ್ಸನ್ಸ್..... ಥಾಂಪ್ಸನ್ಸ್..... ಹವೇಲಾಕ್ಸ್..... ಬರ್ಡ್ಸ್..... ಬ್ರೌನ್ಸ್..... ಲಾರೆನ್ಸ್ ಆನ್ಸನ್ಸ್..... ಬೆಚೆಸ್ಸ್..... ಹ್ಯಾಮಿಲ್ಟನ್ಸ್..... ಥಾಕರೇ, ಹಾಬಿನ್ಸನ್ಸ್..... ಇವರೆಲ್ಲಾ ಇಂಡಿಯಾ ದೇಶವನ್ನು ಪ್ರೀತಿಸಿ, ತಮ್ಮ ಜೀವನದ ಬಹುಭಾಗವನ್ನು ಈ ದೇಶಕ್ಕೆ ಅಂಕಿತ ಮಾಡಿದವರೇ.....

ಫ್ರಾಂಕ್ಲಿನ್ ಹೋವಾರ್ಡ್, ಪೆಟ್ರೋಷಿಯಾ ಕಾಟನ್‌ಳನ್ನು ಮದುವೆಯಾದ. ಅವರ ಮಕ್ಕಳಿಬ್ಬರೂ ಇಂಗ್ಲೆಂಡಿನಲ್ಲಿ ಓದುತ್ತಿದ್ದರು. ಅವರ ಪ್ಲಾನಿನ ಪ್ರಕಾರ ಮಗಳು ಜೇನ್, ಐ.ಸಿ.ಎಸ್. ಆಫೀಸರನನ್ನೋ, ಮಿಲಿಟರಿ ಆಫೀಸರನನ್ನೋ ಮದುವೆಯಾಗುತ್ತಾಳೆಂದೂ, ಮಗ ರಾಬರ್ಟ್ಸ್, ಆಕ್ಸ್‌ಫರ್ಡ್ ಓದು ಮುಗಿದ ಕೂಡಲೇ ಐ.ಸಿ.ಎಸ್. ಮಾಡುತ್ತಾನೆಂದು ಇದರಲ್ಲೇನೂ ಬದಲಾವಣೆ ಇರುವುದಿಲ್ಲವೆಂದೂ ನಂಬಿದ್ದರು.

ಆದರೆ..... ಈಗ ನಡೆಯುತ್ತಿರುವುದೇನು?

ಅವರು ಹಾಕಿಕೊಂಡಿದ್ದ ಪ್ಲಾನುಗಳೆಲ್ಲಾ ಅಸ್ತವ್ಯಸ್ತಗೊಂಡಿದ್ದವು. ನಡೆಯುತ್ತಿರುವುದೇನೆಂದೂ ಯಾರಿಗೂ ಗೊತ್ತಾಗುತ್ತಿಲ್ಲ.

ಗುಡ್ ಲಾರ್ಡ್.....! ವಾಟೀಸ್ ಹ್ಯಾಪೆನಿಂಗ್.....! ಪ್ರಶಾಂತ ಸರೋವರದಂತಹ ತಮ್ಮ ಬದುಕಿನಲ್ಲಿ ಯಾರೋ ಕಲ್ಲು ಬಂಡೆಯೊಂದನ್ನು ಎಸೆದು, ತರಂಗಗಳನ್ನೆಬ್ಬಿಸಿ ಅಲ್ಲೋಲ ಕಲ್ಲೋಲವನ್ನುಂಟು ಮಾಡಿದ್ದರು.

ತಾನು ಮಿಲಿಟರಿಯಿಂದ ರಿಟೈರ್ ಆದ ನಂತರ ಮುಸ್ಸೋರಿಯಲ್ಲಾಗಲೀ, ಸಿಮ್ಲಾದಲ್ಲಿಯಾಗಲೀ ಸೆಟಲ್ ಆಗಬೇಕೆಂದು ನಿರ್ಧರಿಸಿಕೊಂಡಿದ್ದ.

ಪೆಟ್ರೋಷಿಯಾ ಮನೆ ಕೊಳ್ಳೋಣವೆಂದು ಗಲಾಟೆ ಮಾಡುತ್ತಲೇ ಇದ್ದಳು. ಇನ್ನೂ ಸಮಯವಿದೆಯೆಂದು ತಾನೇ ಮುಂದೂಡುತ್ತಾ ಬಂದಿದ್ದ.

ಒಮ್ಮೆ ಇಂಡಿಯಾದಲ್ಲಿ ಹುಟ್ಟಿ ಬೆಳೆದು ಇಂಡಿಯಾದಲ್ಲಿಯೇ ಕೆಲಸ ಮಾಡಿದರೆ ಒಂದು ಪೀಳಿಗೆ ಕಳೆಯುವಷ್ಟರಲ್ಲಿ ಈ ದೇಶ ಆ ಮನುಷ್ಯನನ್ನು ಬದಲಾಯಿಸಿಬಿಡುತ್ತೆ. ಅವರನ್ನು ತನ್ನಲ್ಲಿ ಐಕ್ಯವಾಗಿಸಿಕೊಂಡು, ಅವರಲ್ಲಿನ ಪ್ರತ್ಯೇಕ ಗುಣಗಳು, ಅಭ್ಯಾಸಗಳು ಎಲ್ಲವನ್ನೂ ಅಳಿಸಿ ಹಾಕಿ, ಅವರ ಆಲೋಚನಾ ಸರಣಿಯನ್ನೇ ಗುರುತು ಹಿಡಿಯಲೂ ಸಾಧ್ಯವಿಲ್ಲದಂತೆ ಮಾಡುತ್ತದೆ. ಈ ಬದಲಾವಣೆಗಳಿಂದಾಗಿ ಭಾಷೆಯ ವಿಷಯದಲ್ಲಿಯೇ ಆಗಲಿ, ಅಭ್ಯಾಸಗಳ ವಿಷಯಗಳಲ್ಲಿಯೇ ಆಗಲಿ, ಊಟ, ತಿಂಡಿ, ಸ್ನಾನಪಾನ..... ಎಲ್ಲಾ ಬದಲಾಗಿ ಹೋಗುತ್ತವೆ. ಈ ಬದಲಾವಣೆಗಳನ್ನು ಅವರು ಅಸಹ್ಯಿಸಿಕೊಳ್ಳುತ್ತಾರೆ. ಆದರೆ ಅದಕ್ಕೆ ಹೊರತಾಗಿ ಅವೇನೂ ಮಾಡಲಾರರು. ಇವು ಜಿಯಾಗ್ರಫಿ ಮತ್ತು ಕ್ಲೈಮೇಟ್ ನಿರ್ದೇಶಿಸುವ ಅನಿವಾರ್ಯವಾದ ಬದಲಾವಣೆಗಳು.....

ಇಲ್ಲಿನ ಸೆಕೆಯ ವಾತಾವರಣದಲ್ಲಿ ಅವರು ಟ್ವೀಡ್ ಸೂಟುಗಳನ್ನು ಹಾಕಿಕೊಳ್ಳುವಂತಿಲ್ಲ. ಹೆವಿಟಫೆಗಳನ್ನೂ, ವೆಲ್ವೆಟ್ ಫ್ರಾಕುಗಳನ್ನು ಹಾಕಿಕೊಂಡರೆ ಬೆವರಿನಿಂದ ತೊಯ್ದು ಹೋಗಬೇಕಾಗುವುದು. ಮೊತ್ತಮೊದಲು ಬರುವ ಬದಲಾವಣೆ ವಸ್ತ್ರಧಾರಣೆಯಲ್ಲಿಯೇ..... ಇಲ್ಲಿ ಎಷ್ಟು ಕಡಿಮೆ ಬಟ್ಟೆ ಹಾಕಿಕೊಂಡರೆ ಅಷ್ಟು ಹಾಯಾಗಿರುತ್ತದೆ. ಕಾಟನ್ ಶರ್ಟುಗಳು, ಖಾಕಿ ನಿಕ್ಕರ್ಸ್, ಕಾಟನ್ ಫ್ರಾಕ್ಸ್..... ಮದ್ರಾಸ್ ಕಾಟನ್ ಗೌನುಗಳು..... ಮಲ್ಲಿಗ ಟಾನಿಷೂಸ್..... ಸ್ಪೈಸ್ ಹಾಕಿದ ಇಂಡಿಯನ್ ಊಟ..... ಪಲಾವ್. ಇವು ಅವರ ಜೀವನ ವಿಧಾನವನ್ನೇ ಬದಲಾಯಿಸಿ ಬಿಡುತ್ತವೆ. ಇಂಡಿಯಾದ ಕೆಲಸದಾಳುಗಳು ಅವರಿಗೆ ಸಕಲ ಸೌಕರ್ಯಗಳನ್ನೂ ಮಾಡಿಕೊಡುತ್ತಾ, ಇಂಗ್ಲಿಷ್ ದೊರೆ, ದೊರಸಾನಿಯವರನ್ನು ತಿಂಡಿಪೋತರನ್ನಾಗಿಯೂ ಸೋಮಾರಿಗಳನ್ನಾಗಿಯೂ ಮಾಡಿ ಕೂಡಿಸುತ್ತಾರೆ.

ಮನೆಯ ತುಂಬಾ ಡಜನ್ಸ್ ಲೆಕ್ಕದಲ್ಲಿ ಕೆಲಸದಾಳುಗಳು..... ಒಂದು ಲೋಟಾ ನೀರನ್ನೂ ತಮ್ಮ ಕೈಯಿಂದ ತುಂಬಿಕೊಂಡು ಕುಡಿಯಬೇಕಾದ ಅವಶ್ಯಕತೆಯಿರಲಿಲ್ಲ. ಇಂಗ್ಲೆಂಡಿಗೆ ಹೋದರೆ ಪೆಟ್ರೋಷಿಯಾ ತಮ್ಮ ಬಟ್ಟೆ

ತಾವೇ ಒಗೆದುಕೊಂಡು, ತಮ್ಮ ಅಡಿಗೆ ತಾವೇ ಮಾಡಿಕೊಳ್ಳುತ್ತಾ..... ಎಲ್ಲಾ ಮೊದಲಿಂದ ಕಲಿತುಕೊಳ್ಳಬೇಕು. ಇಷ್ಟು ವರ್ಷಗಳಿಂದ ಅಭ್ಯಾಸವಾದ ಸೋಮಾರಿತನವನ್ನು ಒಮ್ಮೆಲೆ ಕಿತ್ತೊಗೆಯಬೇಕು. ಯಾವ ಕೆಲಸವನ್ನೂ ಮಾಡದೆ ಬಲಿತ ಶರೀರಗಳು ಕರಗಬೇಕು.

ತನ್ನ ಮಿತ್ರರಲ್ಲಿ ಕೆಲವರ ಬಗ್ಗೆ ಆಲೋಚಿಸಿದರೆ ಹೋವಾರ್ಡ್‌ಗೆ ಕನಿಕರವೆನಿಸುತ್ತಿತ್ತು.....

ಇಂಗ್ಲೆಂಡಿನಲ್ಲಿ ಅವರು ಎದುರಿಸಬೇಕಾದ ತೊಂದರೆಗಳನ್ನು ಊಹಿಸುವುದೇ ಕಷ್ಟವೆನಿಸುತ್ತಿತ್ತು. ಪೂರ್ ಪೀಪಲ್! ಇಷ್ಟು ದಿನ ಅನುಭವಿಸಿದ ಸುಖಕ್ಕಾಗಿ ಅವರು ಬಡ್ಡಿ ಸಹಿತವಾಗಿ ತಮ್ಮ ಶ್ರಮವನ್ನು ಬೆವರಿನಿಂದ 'ಪೇ' ಮಾಡಬೇಕಾಗುತ್ತದೆ.

ಈ ದೇಶ..... ಈ ಮನುಷ್ಯರು..... ಈ ವಾತಾವರಣ..... ಈ ಸರ್ವೆಂಟ್ಸ್..... ಈ ಸುಖಭೋಗ..... ಎಲ್ಲಾ..... ಎಲ್ಲಾ..... ದೂರವಾಗುತ್ತದೆ.

ಈ ದೇಶದಲ್ಲಿ ಇಂಗ್ಲಿಷಿನವರು ಮುನ್ನೂರು ವರ್ಷಗಳಿಂದ ಇದ್ದಾರೆ, ಹೆಚ್ಚುಕಡಿಮೆ ಇನ್ನೂರು ವರ್ಷ ಪರಿಪಾಲಿಸಿದ್ದಾರೆ.

ಇಂಡಿಯನ್ಸ್ ಅವರನ್ನು ದೇವರಂತೆ ನೋಡಿಕೊಂಡಿದ್ದಾರೆ. ಅವರಿಗಿರುವ ಸಾವಿರಾರು ದೇವತೆಗಳೊಂದಿಗೆ ಇವರನ್ನೂ ಪೂಜಿಸಿ, ವಿಧೇಯರಾಗಿದ್ದು ಕೊಂಡು, ಅವರ ಪಾಲನೆಯಲ್ಲಿ ಆನಂದವಾಗಿ ಕಳೆದಿದ್ದಾರೆ. ಬಿಳಿಯ ದೊರೆಗಳೆಂದರೆ ಅವರಿಗೆ ಎಲ್ಲಿಲ್ಲದ ಗೌರವ, ಅವರ ಮಾತಿನ ಮೇಲೆ ಅವರ ಬುದ್ಧಿಯ ಮೇಲೆ ನ್ಯಾಯದೃಷ್ಟಿಯ ಮೇಲೆ ಅಮಿತವಾದ ನಂಬಿಕೆ ಹಿಂದೆಯೂ ಇಂದೂ ಎಂದೆಂದಿಗೂ.....

ಹೋವಾರ್ಡ್‌ಗೆ ಗೊತ್ತು – ತಾವು ಮಾಡಿದ್ದು ಏನೆಂದು, ಇಂಡಿಯನ್ನರನ್ನು ಅಂತರ್ಯುದ್ಧಗಳಿಂದ ತಪ್ಪಿಸಿದ್ದರು. ಅವರ ಚರಿತ್ರೆ ಏನೆಂದು ಅವರಿಗೆ ತಿಳಿಯ ಹೇಳಿದ್ದರು. ವಿದ್ಯೆ ಕಲಿಸಿದರು. ಸಮಾನತೆಯೆಂಬುದು ಮೌಲಿಕ, ಸಮಾಜಿಕ ಸೂತ್ರಕ್ಕೆ ಅರ್ಥ ಹೇಳಿದ್ದರು. ಒಂದಾನೊಂದು ಕಾಲದಲ್ಲಿ ಮಹೋನ್ನತವಾದ ಸಂಸ್ಕೃತಿಯನ್ನು ಹೊಂದಿದ್ದು ಸಾವಿರಾರು ವರ್ಷಗಳಿಂದ ದಂಡಯಾತ್ರೆಗಳಿಂದ

ಪೆಟ್ಟುತಿಂದು ಡಾರ್ಕ್ ಏಜೆಸ್‌ನೊಳಕ್ಕೆ ಜಾರಿಬಿದ್ದ ಅವರಿಗೆ ತಮ್ಮ ಪೂರ್ವ ವೈಭವವನ್ನು ನೆನಪು ಮಾಡಿದ್ದರು.

ಅಸಮಾನತೆಯಿಂದ ಕೂಡಿದ್ದ ಈ ದೇಶಕ್ಕೆ ಏಕತೆಯನ್ನು ತಂದುಕೊಟ್ಟು ಅದಕ್ಕೊಂದು ರೂಪ ಕೊಟ್ಟಿದ್ದರು. ಸಿವಿಲ್ ಸರ್ವೆಂಟ್ಸ್ ಮತ್ತಿತರರು ತಮ್ಮ ಜೀವನದಲ್ಲಿನ ಒಳ್ಳೆಯ ದಿನಗಳನ್ನು ಈ ದೇಶವನ್ನು ಬದಲಾಯಿಸಲು, ಪ್ರಗತಿಯೆಡೆಗೆ ಕೊಂಡೊಯ್ಯಲು ಉಪಯೋಗಿಸಿದ್ದರು.

ಬ್ರಿಟಿಷರು ಮಾಡಿದ ಸೇವೆಗೆ ಪ್ರತಿಫಲವಾಗಿ ಈ ದೇಶ ಅವರಿಗೆ ಏನು ಕೊಟ್ಟಿತು.....?

ಎಲ್ಲಾ..... ಎಲ್ಲವನ್ನೂ ಕೊಟ್ಟಿದೆ.

ಸಾಮಾನ್ಯ ಆಂಗ್ಲೇಯರು ಈ ದೇಶದಲ್ಲಿ ಜೀವಿಸಿದ ವಿಧಾನ, ಇಂಗ್ಲೆಂಡಿನಲ್ಲಿ ನೋಬಲ್ಸ್, ಡ್ಯೂಕ್ಸ್, ಡಚೆಸ್‌ರೂ..... ಏರ್ಲ್ಸ್..... ಕೆಂಟ್ಸ್..... ಲಾರ್ಡ್ಸ್ ಇವರಿಗೆ ಮಾತ್ರವೇ ಸಾಧ್ಯವಾಗುವಂತಹದು. ಲೆಕ್ಕವಿಲ್ಲದಷ್ಟು ಮಂದಿ ಸೇವಕರು..... ಇಂಗ್ಲಿಷರು ಹೆಜ್ಜೆಯಿಟ್ಟ ಸ್ಥಳವನ್ನು ಪೂಜಿಸಬೇಕೆನ್ನುವಂತಹ ಮನಃಸ್ಥಿತಿಯ ಅಮಾಯಕರು..... ಹೇಳಿದ ಮಾತನ್ನು ಚಾಚೂ ತಪ್ಪದೆ ಮಾಡುವಂತಹ ವಿನಯವಂತ ಸೇವಕರು..... ಇಂಡಿಯಾ ದೇಶವನ್ನೆಲ್ಲಾ ಆಕ್ರಮಿಸಿದ ದಾರಿದ್ರ್ಯದ ಮಹಾ ಸಮುದ್ರದಲ್ಲಿ ಮಧ್ಯದಲ್ಲಿರುವ ಲಕ್ಷುರಿ ದ್ವೀಪಗಳಂತೆ ಇಂಗ್ಲಿಷ್ ಸಮಾಜ ವೈಭವದಿಂದ ಜೀವಿಸಿತ್ತು. ಅವರ ಭೋಗ ಭಾಗ್ಯಗಳಿಗೆ ಎಣೆಯೇ ಇರಲಿಲ್ಲ. ಪ್ರತಿದಿನವೂ ಅವರಿಗೆ ಹಾಲಿಡೇಸ್..... ಪ್ರತಿದಿನವೂ ಪಾರ್ಟಿಗಳೂ! ಆರ್ಗಿಗಳಂತಹ ದಿನಗಳು..... ಕುಡಿತ..... ತಿಂಡಿ..... ಮಜಾ ಪಾರ್ಟಿಗಳು..... ಬಾರ್‌ಗಳು, ಜಿಂಖಾನಾಗಳು..... ಶೂಟಿಂಗ್ ಪಾರ್ಟಿಗಳು..... ಸೋಲೋಗೇಮ್ಸ್..... ಸಿಗ್ಸ್ ಸ್ಟಿಕಿಂಗ್..... ಬ್ರಿಡ್ಜ್..... ಟೆನ್ನಿಸ್..... ಗಾಲ್ಫ್.....

ಈಜೀಲೈಫ್..... ಲಕ್ಷುರಿ ಲೈಫ್..... ಡ್ರೀಮ್ ಲೈಫ್.....

ಜವಾಬ್ದಾರಿ ಕಡಿಮೆ. ಮಿತಿಯಿಲ್ಲದ ಅಧಿಕಾರ. ಕೈತುಂಬಾ ಹಣ. ಎಲ್ಲವನ್ನೂ ಅನುಭವಿಸಲು ಬೇಕಾದ ಸಮಯ. ಲೀಜರ್.....

ಇಂಡಿಯಾದಲ್ಲಿನ ಬಡತನದ ಬಗ್ಗೆ ಇವರು ತಲೆ ಕೆಡಿಸಿಕೊಳ್ಳಲಿಲ್ಲ. ಡ್ರಾಯಿಂಗ್ ರೂಮುಗಳಲ್ಲಿ, ಕಾಕ್‌ಟೈಲ್ ಪಾರ್ಟಿಗಳಲ್ಲಿ, ಕ್ಲಬ್ಬುಗಳಲ್ಲಿ, ಪಿಕ್ನಿಕ್ಕುಗಳಲ್ಲಿ, ಬಡತನವನ್ನು ಕುರಿತು ಮಾತನಾಡುವುದು ಅತಿ ದೊಡ್ಡ ತಪ್ಪು..... ಕ್ಷಮಿಸಲಾರದ ಅಪರಾಧ. ಫಾಕ್ಸ್‌ಪಾಸ್..... ಯಾರಾದರೂ ನೇಟೀವ್ಸ್ ಬಗ್ಗೆ, ಅನುಕಂಪ, ಕರುಣೆ, ಸಹಾನುಭೂತಿ ತೋರಿಸಿದರೆ ಸಾಕು. ಕೂಡಲೇ ಅವರ ಮೇಲೆ ಮುದ್ರೆ ಬಿದ್ದುಬಿಡುತ್ತಿತ್ತು. 'ನಿಗ್ಗರ್ ಲವರ್'..... 'ಬ್ಲೀಡಿಂಗ್ ಹಾರ್ಟ್' ಎಂದು. ಅಂತಹವರನ್ನು ಸೋಷಿಯಲ್ ಗ್ರೂಪಿನಿಂದ ಹೊರಗಿಟ್ಟು ಅಸ್ಪೃಶ್ಯರಂತೆ ಕಾಣುತ್ತಿದ್ದರು.

ಇಂಡಿಯನ್ನರ ಸಮಸ್ಯೆಗಳನ್ನು ಮೇಲೆ ಮೇಲೆ ನೋಡಿದಂತೆ ಮಾಡಿ, ಅವುಗಳಿಗೆ ಪರಿಹಾರ ಹುಡುಕುವುದು ಮಾಮೂಲೇ, ಅದರ ಆಳಕ್ಕೆ ಹೋಗಿ ಸಮಸ್ಯೆಯನ್ನು ಪರಿಹರಿಸುವುದು ಅವರ ನಿಜ ಉದ್ದೇಶವಲ್ಲ. ಆದರೆ ಯಾರಾದರೂ ಆ ದೆಸೆಯಲ್ಲಿ ಮುಂದುವರಿದರೆ ಸೀನಿಯರ್ಸ್ ಅವರಿಗೆ ಬುದ್ಧಿ ಹೇಳಿ ಸರಿಯಾದ ರೀತಿಯಲ್ಲಿ ನಡೆಯುವಂತೆ ಮಾರ್ಗದರ್ಶನ ಮಾಡುತ್ತಿದ್ದರು. ಹೀಗಿದ್ದೂ ಕೂಡಾ ಕೆಲವರು ತಾವು ನಂಬಿದ ಮಾರ್ಗದಲ್ಲಿಯೇ ನಡೆದು ತಾವು ಊಹಿಸಿದ ವಿಧದಲ್ಲಿ ಪ್ರಾಮಾಣಿಕವಾಗಿ ಸಮಸ್ಯೆಗಳಿಗೆ ಪರಿಹಾರ ಕಂಡು ಹಿಡಿಯಲು ಶ್ರಮಿಸುತ್ತಿದ್ದರು. ಚರಿತ್ರೆಯನ್ನು ಬದಲಾಯಿಸುತ್ತಿದ್ದರು. ಕಾಟನ್, ನಿಕಲ್ಸನ್, ಥಾಮಸ್ ಮನ್ರೋ..... ಹೀಗೆ ಎಷ್ಟೋ ಮಂದಿ.

ನೀನು ಬ್ಯುರೋಕ್ರಾಟ್ ಆಗಿ ಸಮಸ್ಯೆಗಳನ್ನು ಪರಿಹರಿಸುತ್ತೀಯಾ ಇಲ್ಲವೇ ಸುಸಂಸ್ಕೃತನಂತೆ ವರ್ತಿಸುತ್ತೀಯಾ ಎಂಬುದೇ ಅವರ ಮುಖ್ಯ ಪ್ರಶ್ನೆ. ಸುಸಂಸ್ಕೃತನಾಗಬೇಕಾದರೆ ಮೊದಲು ನೌಕರಿಗೆ ರಿಜೈನ್ ಮಾಡಬೇಕು, ಅನಂತರ ಸ್ಕೂಲ್ ಟೀಚರ್ ಆಗು, ಇಲ್ಲವೇ ಡ್ರೈವರ್ ಆಗು. ಆಗ ಸೇವೆ ಮಾಡು. ಅಷ್ಟೇ ಹೊರತು ನೌಕರಿಯಲ್ಲಿದ್ದು ಅಲ್ಲ. ಬ್ರಿಟಿಷ್ ಸಮಾಜ ಈ ವಿಷಯದಲ್ಲಿ ನಿರ್ದಾಕ್ಷಿಣ್ಯವಾಗಿ ವರ್ತಿಸುತ್ತಿತ್ತು.

ಸ್ನಾನ ಮಾಡಿ ಬರುವಷ್ಟರಲ್ಲಿ ಬೆಡ್ ಮೇಲೆ ಸೆರೆಮೋನಿಯಲ್ ಯೂನಿಫಾರಂ, ಟೋಪಿ, ಮೆಡಲ್ಸ್, ಸ್ವಾರ್ಡ್, ಹೊಳೆಯುವಂತೆ ಪಾಲಿಷ್ ಮಾಡಿದ ಬೂಟುಗಳು..... ಎಲ್ಲಾ ಸಿದ್ಧವಾಗಿದ್ದವು.

ಡ್ರೆಸ್ಸಿಂಗ್ ಗೌನ್ ಹಾಕಿಕೊಂಡೇ ಬ್ರೇಕ್‌ಫಾಸ್ಟ್ ಮುಗಿಸಿ, ಡ್ರೆಸ್ ಮಾಡಿಕೊಳ್ಳುತ್ತಾ ಒಂದು ಹಾಡನ್ನು ವಿಜಿಲ್ ಹಾಕಿದ – ಕರ್ನಲ್ ಫ್ರಾಂಕ್ಲಿನ್ ಹೋವಾರ್ಡ್! ಅದು ವಂದೇಮಾತರಂ ಹಾಡಿಗೆ ಪ್ಯಾರಡಿ. ಅದನ್ನು ಕ್ಲಬ್ಬಿನಲ್ಲಿ ಎಲ್ಲರನ್ನೂ ನಗಿಸಲು ಹಾಡುತ್ತಿದ್ದರು. ವಿಜಿಲ್ ಹಾಕುತ್ತಲೇ ಆಲೋಚಿಸುತ್ತಿದ್ದ ಹೋವಾರ್ಡ್.

ಆ ದಿನ ಪ್ರಾತಃಕಾಲ ಎಂಟೂವರೆ ಗಂಟೆಗೆ ಇಂಡಿಯನ್ ಆರ್ಮಿ ಯೂನಿಟ್ಸ್, ಬ್ರಿಟಿಷರಿಂದ ಮಿಲಿಟರಿ ಜವಾಬ್ದಾರಿಯನ್ನು ಅಧಿಕಾರ ರೀತ್ಯಾ ಸ್ವೀಕರಿಸಲಿತ್ತು.

ಅನಂತರ?

ಅನಂತರ ಏನು?

ಕಿಕ್ ದಿ ಇಂಗ್ಲಿಷ್ ಆ್ಯಂಡ್ ಸೆಂಡ್ ದೆಮ್ ಬ್ಯಾಕ್ ಟು ಇಂಗ್ಲೆಂಡ್, ವೇರ್ ದೇ ಬಿಲಾಂಗ್!

ಬ್ಯಾಕ್ ಹೋಮ್ ಟು ಇಂಗ್ಲೆಂಡ್ ಓಲ್ಡ್ ಬಾಯ್! ಹೋವಾರ್ಡ್ ನಿಟ್ಟುಸಿರುಬಿಟ್ಟ.

ಎಂಟು ಗಂಟೆಗೆ ಮೇಜರ್ ಬೇಟ್ಸ್ ಬಂದು ಸೆಲ್ಯೂಟ್ ಮಾಡಿ ಹೇಳಿದ. "ಗುಡ್ ಮಾರ್ನಿಂಗ್ ಸರ್, ಎಲ್ಲಾ ಸಿದ್ಧವಾಗಿದೆ."

"ವೆರಿವೆಲ್, ಮೇಜರ್ ಬೇಟ್ಸ್."

ಬೇಟ್ಸ್‌ನ ಕಣ್ಣುಗಳು ಬಾತಿದ್ದವು. ಅದನ್ನು ಗಮನಿಸಿದ ಹೋವಾರ್ಡ್. ರಾತ್ರಿ ನಿದ್ದೆ ಮಾಡಿರಲಾರ. ಕಣ್ಣುಗಳು ಕೆಂಪಗೆ ರಕ್ತದುಂಡೆಗಳಂತಿದ್ದುವು. ಕಣ್ರೆಪ್ಪೆಗಳೂ ಬಾತಿದ್ದವು. ಅತ್ತಿರಬಹುದೇ? ಪಾಪ, ಬಿಳಿಯ.....

ಹೊರಗೆ ಜೀಪ್ ಸಿದ್ಧವಾಗಿತ್ತು.

ಸೋಮರ್ಸೆಟ್ ಲೈಟ್ ಇನ್‌ಫಾಂಟ್ರೀ ಬೆಟಾಲಿಯನ್, ಯೂನಿಫಾರ್ಮಿನಲ್ಲಿ ಸ್ಮಾರ್ಟ್ ಆಗಿ ಸಿದ್ಧವಾಗಿ ನಿಂತಿತ್ತು. ಆದರೆ ಎಲ್ಲಾ ಬ್ರಿಟಿಷ್ ಸೋಲ್ಜರ್ಸ್ ಮುಖಗಳಲ್ಲಿಯೂ ನಿರಾಶೆ ತಾಂಡವವಾಡುತ್ತಿತ್ತು.

ಈ ಪೆರೇಡನ್ನು ಅರೇಂಜ್ ಮಾಡಿದ್ದು ಬೊಂಬಾಯಿನಲ್ಲಿನ ಗೇಟ್‌ವೇ ಆಫ್ ಇಂಡಿಯಾ ಬಳಿ.....

ಪೆರೇಡ್ ಪ್ರಾರಂಭವಾಯಿತು.

ಬ್ರಿಟಿಷರಿಗೆ ಇಂಡಿಯಾದಲ್ಲಿ ಇದು ಲಾಸ್ಟ್ ಪೆರೇಡ್.....

ಫೇರ್‌ವೆಲ್ ಪೆರೇಡ್.....!

ಇಂಡಿಯನ್ ಸಿಪಾಯಿಗಳು, ಬ್ರಿಟಿಷ್ ಸೋಲ್ಜರ್ಸ್ ಸೇರಿ ಎಷ್ಟೋ ಯುದ್ಧಗಳಲ್ಲಿ ಪಾಲ್ಗೊಂಡಿದ್ದರು. ಅವರ ರಕ್ತ ಫ್ರಾಂಟಿಯರ್ ಯುದ್ಧಗಳಲ್ಲಿ ಚಿಮ್ಮಿ ನೆಲ ತೋಯಿಸಿತ್ತು. ಗೂರ್ಖಾ, ಸಿಕ್, ಮದ್ರಾಸಿ, ಬೆಂಗಾಲಿ ಎಲ್ಲರೂ ಸೇರಿ ಕವಾಯತು ಮಾಡುತ್ತಿದ್ದರು.

ಅವರು ಪಾಲ್ಗೊಂಡ ಯುದ್ಧಗಳಲ್ಲಿ ಕೆಲವು ಧರ್ಮ ಯುದ್ಧಗಳು..... ಕೆಲವು ಅಧರ್ಮ ಯುದ್ಧಗಳು.....

ಆದರೆ ಸುಶಿಕ್ಷಿತನಾದ ಸೈನಿಕನಿಗೆ ಯುದ್ಧದ ಕಾರಣಗಳೊಂದಿಗೆ ಸಂಬಂಧವಿಲ್ಲ. ಮೇಲಧಿಕಾರಿಗಳ ಆಜ್ಞೆಯಂತೆ ನಡೆದುಕೊಳ್ಳಬೇಕಾದ್ದು ಅವನ ವಿಧಿ. ಈ ಡಿಸಿಪ್ಲಿನ್ ಇಲ್ಲದಿದ್ದಲ್ಲಿ, ಯಾವ ಸೈನ್ಯವಾದರೂ ನಿಲ್ಲದು.

ಧರ್ಮಾಧರ್ಮ ಸೂಕ್ಷ್ಮಗಳನ್ನು ನಿರ್ಣಯಿಸುವುದು ಕಾಲವೊಂದೇ. ಚರಿತ್ರೆ, ಆ ದಿನ ಪೆರೇಡನ್ನು ಆರ್ಮಿಯಲ್ಲಿನ ಸಿಖ್ ರೆಜಿಮೆಂಟಿಗೆ ಸೇರಿದ ಲೆಫ್ಟಿನೆಂಟ್ ಕರ್ನಲ್ ಪ್ರೀತಿಪಾಲ್ ಸಿಂಗ್ ಕಮಾಂಡ್ ಮಾಡಿದ್ದ.

ಬ್ರಿಟಿಷರ ಸೋಮರ್ಸೆಟ್ ಲೈಟ್ ಇನ್‌ಫ್ರಾಂಟಿ ಬೆಟಾಲಿಯನ್ ಜವಾನರು ಅವರ ಟೋಪಿಗಳ ಮೇಲೆ 'ಜಲಾಲಾಬಾದ್' ಎಂದು ಬರೆದಿದ್ದ ಎಂಬ್ಲೆಮನ್ನು ಧರಿಸಿದ್ದರು. ಆ ಮಾತಿನ ಹಿಂದೆ ಒಂದು ಚರಿತ್ರೆ ಅಡಗಿತ್ತು. ಬ್ರಿಟಿಷರು ಹಿಂದೂ ದೇಶದ ನೆಲದ ಮೇಲೆ ಮಾಡಿದ ಅತ್ಯಂತ ಅನ್ಯಾಯದ ಯುದ್ಧಕ್ಕೆ ಅದು ಚಿಹ್ನೆ. ಆ ಯುದ್ಧದಲ್ಲಿ ಬ್ರಿಟಿಷರು ತುಂಬಾ ಹೀನಾಯವಾಗಿ ಪೆಟ್ಟು ತಿಂದಿದ್ದರು.....

ಪೆರೇಡ್‌ನಲ್ಲಿ ಪಾಲ್ಗೊಂಡ ಇಂಗ್ಲಿಷ್ ಬೆಟಾಲಿಯನ್‌ಗೆ ಇಂಡಿಯನ್ ಆರ್ಮಿ ಒಂದು ನೆನಪಿನ ಕಾಣಿಕೆಯನ್ನು ನೀಡಿತು.

ಅದು ಗೇಟ್‌ವೇ ಆಫ್ ಇಂಡಿಯಾ ಮಾಡೆಲ್.....

ಅದರ ಮೇಲಿದ್ದ ಮಾತುಗಳು.

ಬ್ರಿಟಿಷ್ – ಇಂಡಿಯಾ ಸಹಚರ್ಯೆಯ ಗುರುತಾಗಿ ತಾರೀಖು 1754 - 1947.

ಪ್ರಪ್ರಥಮವಾಗಿ 1754ನೆಯ ವರ್ಷದಲ್ಲಿ ಇಂಗ್ಲಿಷ್ ಆರ್ಮಿ ಈ ನೆಲದ ಮೇಲೆ ಕಾಲಿಟ್ಟಿತ್ತು.

ಆ ಬೆಟಾಲಿಯನ್?

ಡಾರ್‍ಸೆಟ್ ಷೈರ್ ರೆಜಿಮೆಂಟಿನ ಫಸ್ಟ್ ಬೆಟಾಲಿಯನ್.

ಅನಂತರ ಪೆರೇಡ್ ಪ್ರಾರಂಭವಾಯಿತು.

ಸ್ಮಾರ್ಟ್ ಆಗಿ ಟರ್ನ್‌ಅವುಟ್ ಆದ ಈ ಕೆಳಗಿನ ಇಂಡಿಯನ್ ಮಿಲಿಟರಿ ಬೆಟಾಲಿಯನ್‌ಗಳು ಸಾಲಾಗಿ ಮಾರ್ಚ್ ಮಾಡಿದವು.

ಇಂಡಿಯನ್ ಗ್ರೆನೇಡಿಯರ್ಸ್,

ಮರಾಠ ಲೈಟ್ ಇನ್‌ಫಾಂಟ್ರಿ ಸೆಕೆಂಡ್, ರಾಯಲ್ ಬೆಟಾಲಿಯನ್,

ಸಿಖ್ ರೆಜಿಮೆಂಟ್,

ಐದನೆಯ ರಾಯಲ್ ಗೂರ್ಖಾ ರೈಫಲ್ಸ್.....

ಇವರೆಲ್ಲಾ ರಾಯಲ್ ಸೆಲ್ಯೂಟ್ ಮಾಡಿ ಆಯುಧಗಳನ್ನು ಪ್ರೆಸೆಂಟ್ ಮಾಡಿದರು.

ಇಂಡಿಯನ್ ಬ್ಯಾಂಡ್ಸ್ ಎಲ್ಲಾ ಸೇರಿ 'ಗಾಡ್ ಸೇವ್ ದಿ ಕಿಂಗ್' ಬಾರಿಸಿದವು.

ಅದಕ್ಕೆ ಉತ್ತರವಾಗಿ –

ಸೋಮರ್ಸೆಟ್ ಲೈಟ್ ಇನ್‌ಫಾಂಟ್ರಿ ರಾಯಲ್ ಸೆಲ್ಯೂಟ್ ಮಾಡಿ ಆಯುಧಗಳನ್ನು ಪ್ರಜೆಂಟ್ ಮಾಡಿದಾಗ – ಇಂಗ್ಲಿಷ್‌ರ ಬ್ಯಾಂಡ್ 'ವಂದೇ ಮಾತರಂ' ಅನ್ನು ಬಾರಿಸಿತು.

ಅದು ಮರೆಯಲಾಗದ ಕ್ಷಣ.....

ಇಂಗ್ಲಿಷಿನವರ ಕಣ್ಣುಗಳಲ್ಲಿ ನೀರು ಚಿಮ್ಮಿತು.

ರವಿ ಅಸ್ತಮಿಸಿದ ಬ್ರಿಟಿಷ್ ಸಾಮ್ರಾಜ್ಯದ ಅಸ್ತಮಯ ಆ ಕ್ಷಣದಲ್ಲಿ ನಡೆಯುತ್ತಿದ್ದಂತೆ ಅವರಿಗೆ ಅನ್ನಿಸಿತು. ಅವರ ಎದೆಯಲ್ಲಿ ಗೂಡು ಕಟ್ಟಿದ್ದ ವ್ಯಥೆಯೆಲ್ಲಾ ಒಮ್ಮೆಗೇ ಹೊರಹೊಮ್ಮಿ ಅವರಿಗೆ ಅನಿರ್ವಚನೀಯವಾದ ಮನೋವೇದನೆಯನ್ನುಂಟು ಮಾಡಿತು.

"ವಂದೇಮಾತರಂ!"

ಒಮ್ಮೆ ತಾವು ನಿಷೇಧಿಸಿದ್ದ ಹಾಡು!!

ಗೇಲಿಮಾಡುತ್ತಾ, ಪಾರಡಿ ಮಾಡಿ ನಕ್ಕು, ಅವಹೇಳನ ಮಾಡಿದ ಕಾಬೆಡಿ ಸಾಂಗ್.....!!

ಎಂದೋ ಒಂದು ದಿನ ಅದು ಭಾರತ ದೇಶದ 'ರಾಷ್ಟ್ರಗೀತೆ' ಯಾಗುತ್ತದೆಂದು ಆಂಗ್ಲೇಯರು ಯಾರೂ ಕನಸಿನಲ್ಲಿಯೂ ಊಹಿಸಿರಲಿಲ್ಲ. ಆಗ, ಆ ಹಾಡು ಸ್ವಾತಂತ್ರ್ಯ ಸಮರ ಯೋಧರಿಗೆ ಪಥಗೀತವಾಗುತ್ತದೆಯೆಂದೂ ಆ ಗೀತೆಯಲ್ಲಿದ್ದ ಭಾವನೆಗಳಲ್ಲಿ ಬೆರೆತು ಹೋಗಿ, ಕೋಟಿ ಕೋಟಿ ಭಾರತೀಯರು ಪ್ರತಿದಿನವೂ ಆ ಗೀತೆಯನ್ನು ತಲೆಯೆತ್ತಿ, ಕಂಠ ಹೆಚ್ಚಿಸಿ ಹಾಡಿಕೊಳ್ಳುತ್ತಾರೆಂದೂ ಬ್ರಿಟಿಷ್ ಪಾಲಕರು ಊಹಿಸಿರಲಿಲ್ಲ.....

ಪಾಲಕರಿಗೂ, ಪಾಲಿಸಲ್ಪಡುವವರಿಗೂ ಮಧ್ಯೆ ಇರುವ ಘರ್ಷಣೆಯಲ್ಲಿ ಇಂತಹ ಘಟನೆಗಳು ನಡೆಯುವುದು ಮಾಮೂಲೇ.....

ಎಲ್ಲಾ ರೆಜಿಮೆಂಟ್ಸ್, ಎಲ್ಲಾ ಬಣ್ಣಗಳ ಯೂನಿಫಾರಂಗಳಲ್ಲಿದ್ದ ಜವಾನರು, ಆಫೀಸರುಗಳು ಗೇಟ್ ವೇ ಆಫ್ ಇಂಡಿಯಾ ಕೆಳಗಿನಿಂದ ಮಾರ್ಚ್ ಮಾಡುತ್ತಿರುವಾಗ ಸಹೃದ್ಭಾವನೆಗೆ, ಸ್ನೇಹಕ್ಕೆ, ಸಮಶೀಲತೆಗೆ ಪ್ರತೀಕವಾದ ಸೆಂಟಿಮೆಂಟಲ್ ಸಾಂಗ್ "ಆಲ್ಡ್ ಲಾಂಗ್ ಸೈನ್" ಬಾರಿಸಿದರು. ಎಲ್ಲಾ ಬ್ಯಾಂಡ್ಸ್ ಒಂದೇ ಸಲ –

ಶುಡ್ ಆಲ್ಡ್ ಅಕ್ವೈಂಟೆನ್ಸ್ ಬಿ ಫರ್‌ಗಾಟನ್, ಆ್ಯಂಡ್ ನೆವರ್ ಬ್ರಾಟ್ ಟು ಮೈಂಡ್.

ಎರಡೂ ದೇಶಗಳ ಮಿಲಿಟರಿಗಳೂ ಸೇರಿ ಮಾರ್ಚ್ ಮಾಡಿದವು. ಒಂದೇ ಬೀಟ್‌ಗೆ ಹೆಜ್ಜೆ ಹಾಕುತ್ತಾ ಒಂದೇ ಹಾಡಿಗೆ ಸ್ಪಂದಿಸುತ್ತಾ –

ಆಗ ನಿಜವಾಗಿ ಎಲ್ಲಾ ಮುಗಿದು ಹೋಗಿತ್ತು.

ಎಂಡ್ ಆಫ್ ಬ್ರಿಟಿಷ್ ಎಂಪೈರ್ ಇನ್ ಇಂಡಿಯಾ.....

ಕರ್ನಲ್ ಫ್ರಾಂಕ್ಲಿನ್ ಹೋವಾರ್ಡ್‌ನ ನೀಲಿಗಣ್ಣಿನ ತುಂಬಾ ನೀರು ನಿಂತಿತ್ತು. ಪೆರೇಡ್‌ನಲ್ಲಿ, ಅಳುವುದೇ? ಅಬ್ಸರ್ಡ್.....! ಘುಲ್ ಯುವರ್ ಸೆಲ್ಫ್ ಟು ಗೆದರ್ ಓಲ್ಡ್ ಬಾಯ್!

ಪೂರ್ ಹೋವಾರ್ಡ್! ಬದಲಾವಣೆಯಾಗುವ ಸಮಯದಲ್ಲಿ ಚರಿತ್ರೆಯನ್ನು ಸೃಷ್ಟಿಸುವ ಶಕ್ತಿಗಳು ನಿರ್ದಾಕ್ಷಿಣ್ಯವಾಗಿ ವರ್ತಿಸುತ್ತವೆ. ಅದೇ ಸಮಯದಲ್ಲಿ ರಕ್ತಪಾತವೂ ನಡೆಯುತ್ತಿತ್ತು. ಸೋದರರೆನ್ನಿಸಿಕೊಂಡವರು ಒಬ್ಬರನ್ನೊಬ್ಬರು ಕಡಿದುಕೊಳ್ಳುತ್ತಾ ಮಾರಣ ಹೋಮದಿಂದ ಉತ್ತರ ಭಾರತವನ್ನು ರಕ್ತದ ಪ್ರವಾಹದಲ್ಲಿ ತೋಯಿಸುತ್ತಿದ್ದರು.

ಈ ಸ್ವಾತಂತ್ರ್ಯದ ರಥ ಸಾರಥಿಯಾದ 'ಮಹಾತ್ಮಾಗಾಂಧಿ' ಈ ಸಮಯದಲ್ಲಿ ದೆಹಲಿಯಲ್ಲಿರಲಿಲ್ಲ. ಕಲ್ಕತ್ತಾದಲ್ಲಿದ್ದುಕೊಂಡು ನೌಕಾಲಿ ದುರಂತವನ್ನು ತಡೆಗಟ್ಟಲು ಪ್ರಯತ್ನಿಸುತ್ತಿದ್ದರು.

ಸೀಳಿ ಹೋಗುತ್ತಿದ್ದ, ಇಬ್ಭಾಗವಾಗುತ್ತಿದ್ದ ದೇಶದ ಮೇಲೆ ರಕ್ತದ ಕಲೆಗಳು ರೂಪುಗೊಳ್ಳುತ್ತಿದ್ದವು. ಲಕ್ಷಗಟ್ಟಲೆ ಜನ ಮನೆಮಠ ತೊರೆದು, ಉಟ್ಟ ಬಟ್ಟೆಯಲ್ಲಿ ದಿಕ್ಕು ತೋಚದೆ ತಮಗೇ ತಿಳಿಯದ ಸ್ಥಳಕ್ಕೆ ವಲಸೆ ಹೊರಟಿದ್ದರು. ಅನಾಥರಾಗಿ, ಭಿಕ್ಷುಕರಾಗಿ ಹೊರಟಿದ್ದರು.....

ಮತಾಂಧತೆಯ ಭಯಂಕರ ಶಕ್ತಿ, ವಿಕೃತವಾಗಿ ನಾಟ್ಯವಾಡುತ್ತಿತ್ತು. ಸಮಯ ಸಿಕ್ಕಿತೆಂದು ತಮ್ಮ ಭಯಂಕರ ರೂಪವನ್ನು ತೋರಿಸುತ್ತಾ, ನರಮೇಧದ ಜ್ವಾಲೆಯಲ್ಲಿ ಅಮಾಯಕರ ಪ್ರಾಣಗಳನ್ನು ಬಲಿ ತೆಗೆದುಕೊಳ್ಳುತ್ತಾ ಸ್ವಪ್ರಯೋಜನಕ್ಕಾಗಿ ಬಳಸಿಕೊಳ್ಳುತ್ತಿತ್ತು. ಇದಕ್ಕೆಲ್ಲಾ ಕಾರಣ ಬ್ರಿಟಿಷರ ಪಾಲನೆ! ವಿಭಜಿಸಿ ಪಾಲಿಸು ಎಂಬ ಸೂತ್ರ. ಚರಿತ್ರೆಯ ವಾರಸತ್ವದಿಂದ ಉಂಟಾದ

ಇನ್ನೂ ಎಷ್ಟೋ ಕಾರಣಗಳೂ ಇವೆ. ಅದು ಅಷ್ಟು ಸುಲಭವಾಗಿ ಅರ್ಥವಾಗುವುದಿಲ್ಲ..... ಒಂಟಿ ಮನುಷ್ಯರ ಸಮಸ್ಯೆಗಳನ್ನು ತೀರಿಸುವುದೂ ಇಲ್ಲ.

ತಲೆಯೆತ್ತಿ ಸೂರ್ಯನ ಕಡೆ ನೋಡುತ್ತಾ ಸ್ಮಾರ್ಟಾಗಿ ಸ್ಟೆಪ್ಸ್ ಹಾಕುತ್ತಿದ್ದ ಕರ್ನಲ್ ಫ್ರಾಂಕ್ಲಿನ್ ಹೋವಾರ್ಡ್..... ಅವನ ಕಣ್ಣುಗಳಲ್ಲಿನ ನೀರು ಆವಿಯಾಗಿ ಹೋಗುತ್ತಿತ್ತು.

ಅವನ ಮನಸ್ಸಿನಲ್ಲಿ ಪೆಟ್ರೋಷಿಯಾ..... ಮನೆಯಲ್ಲಿ ಸಾಮಾನುಗಳನ್ನು ಪ್ಯಾಕ್ ಮಾಡುತ್ತಿರುತ್ತಾಳೆ ಎಂದುಕೊಂಡ, ಬಂಡಿ, ಬಂಡಿ ಸಾಮಾನು. ಯಾವುದನ್ನು ಒಯ್ಯಬೇಕೋ ಯಾವುದನ್ನು ಬಿಟ್ಟು ಹೋಗಬೇಕೋ ನಿಶ್ಚಯಿಸಲೂ ಸಮಯ ಸಾಲದು.

ಕ್ವಿಕ್ ಡಿಸಿಷನ್ಸ್.....!

ಓ ಗಾಡ್.....!

ಸಮಸ್ಯೆಗಳ ವಲಯದಲ್ಲಿ ಸಿಕ್ಕಿಕೊಂಡ ಹೋವಾರ್ಡ್‌ನ ಮೈಂಡ್ ಎಲ್ಲಿಯೋ ಇತ್ತು.

ಆದರೆ ಅವನ ಕಾಲುಗಳು ಲಯತಪ್ಪದಂತೆ ಮಾರ್ಚ್ ಮಾಡುತ್ತಿದ್ದವು.

ಒನ್..... ಟೂ

ಒನ್..... ಟೂ

ಚರಿತ್ರೆ ಬದಲಾಗುತ್ತಿತ್ತು.

ಪೆರೇಡ್ ಪೂರ್ತಿಯಾಗಿತ್ತು.....

ಬಳಲಿಕೆಯಿಂದ ಮನೆ ಸೇರಿದ ಹೋವಾರ್ಡ್..... ಬಿಸಿಲಿನಿಂದಾಗಿ ಚರ್ಮ ಉರಿಯುತ್ತಿತ್ತು. ಯೂನಿಫಾರಂ ಬೆವರಿನಿಂದ ಒದ್ದೆ – ಮುದ್ದೆಯಾಗಿತ್ತು.

ಡ್ರಾಯಿಂಗ್ ರೂಮಿನಲ್ಲಿ ಕಾಲಿಟ್ಟ ಕೂಡಲೇ, ಮುಖ ಮುಚ್ಚಿಕೊಂಡು ಸೈಲೆಂಟಾಗಿ ಅಳುತ್ತಿದ್ದ ಪೆಟ್ರೋಷಿಯಾ ಕಾಣಿಸಿದಳು. ಆಕೆ ಹಾಕಿಕೊಂಡಿದ್ದ

ಫ್ರಾಕ್ ಧೂಳಿನಿಂದ ಕೊಳೆಯಾಗಿತ್ತು. ಅಳುವಿನ ತೀವ್ರತೆಯಿಂದಾಗಿ ಅವಳ ಭುಜಗಳು ಅಲುಗಾಡುತ್ತಿದ್ದವು.

ಪೂರ್ ಪ್ಯಾಟ್.....

ಸಾಮಾನುಗಳನ್ನು ಪ್ಯಾಕ್ ಮಾಡಲಾರದೆ ಅಳುತ್ತಿದ್ದಾಳೆ ಅಂದುಕೊಂಡ. ಅನುರಾಗದಿಂದ ಅವನ ಎದೆ ತುಂಬಿಬಂತು.

ಅವನ ಬೂಟಿನ ಸದ್ದಿಗೆ ಆಕೆ ಮೆಲ್ಲನೆ ತಲೆಯೆತ್ತಿದ್ದಳು. ಆಕೆ ಕಣ್ಣು ಉಬ್ಬಿತ್ತು..... ಧಾರಾಕಾರವಾಗಿ ಸುರಿದ ಕಣ್ಣೀರಿನಿಂದ ಆಕೆಯ ಫ್ರಾಕ್‌ನ ಮುಂಭಾಗ ಒದ್ದೆಯಾಗಿತ್ತು. ಬೆವರಿನಿಂದ ತೊಯ್ದ ಮುಂಗುರುಳು ಫಾಲ ಭಾಗವನ್ನು ಆವರಿಸಿತ್ತು.

“ಡಾರ್ಲಿಂಗ್, ಪ್ಯಾಟ್, ಯಾಕೆ ಅಳುತ್ತಿದ್ದೀ?”

ತತ್‌ಕ್ಷಣ ಬಿರುಗಾಳಿಯಂತೆ ಮೇಲೆದ್ದಳು, ಪೆಟ್ರೋಷಿಯಾ..... ಮೈಮೇಲೆ ಬಂದವರಂತೆ ತೂರಾಡುತ್ತಾ ಮುಂದಕ್ಕೆ ಬಂದಳು.

“ಫ್ರಾಂಕ್, ನಾನು ಇಲ್ಲಿಂದ ಇಂಗ್ಲೆಂಡ್‌ಗೆ ಬರೋಲ್ಲ..... ಏಕೆ ಬರಬೇಕು ಅಂತೀನಿ? ಈ ಬಂಧಗಳನ್ನೆಲ್ಲಾ ಕಡಿದುಕೊಂಡು ಈ ಗಂದರಗೋಳದಲ್ಲಿ ಅರ್ಧಾಂತರವಾಗಿ ನಾವು ಏಕೆ ಹೋಗಬೇಕು? ಹಾಗೆ ಕಳುಹಿಸಲು ಯಾರಿಗೆ ಹಕ್ಕು ಇದೆ? ಆ ಹಕ್ಕನ್ನು ಯಾರು ಕೊಟ್ಟವರು? ಫ್ರಾಂಕ್, ನಿನಗೆ ಗೊತ್ತೇ? ನಮ್ಮ ಅಜ್ಜಿ, ತಾಯಿ, ನಾನು, ನನ್ನ ಮಗಳು ಎಲ್ಲರೂ ಇಲ್ಲಿಯೇ ಹುಟ್ಟಿದ್ದು. ನಮ್ಮನ್ನು ಇಲ್ಲಿಂದ ಹೋಗು ಎನ್ನುವ ಅಧಿಕಾರ ಯಾರಿಗಿದೆ? ವಂಶಪಾರಂಪರ್ಯವಾಗಿ ಈ ದೇಶದಲ್ಲಿಯೇ ಹುಟ್ಟಿ ಬೆಳೆಯುತ್ತಿರುವ ನಮಗೆ ಹಕ್ಕುಗಳು ಏನೂ ಇಲ್ಲವೇನು? ಈ ಕ್ಷಣದಲ್ಲಿ ಅವುಗಳೆಲ್ಲಾ ಮಾಯವಾಗಿ ಹೋದುವೆ? ಫ್ರಾಂಕ್..... ಫ್ರಾಂಕ್ ನಾನು ಇಂಡಿಯಾ ಬಿಟ್ಟು ಹೋಗಲಾರೆ..... ನಾನು ಇಂಗ್ಲೆಂಡಿನಲ್ಲಿ ಇರಲಾರೆ. ನನಗೆ ಅಲ್ಲಿ ಯಾರೂ ಗೊತ್ತಿಲ್ಲ. ಅಲ್ಲಿ, ನಾನು..... ಯಾರು? ಯಾರೂ ಅಲ್ಲ.....”

ಹೋವಾರ್ಡ್‌ನ ಎದೆಯ ಮೇಲೆ ತಲೆಯಿಟ್ಟು ರೋದಿಸತೊಡಗಿದಳು ಪೆಟ್ರೋಷಿಯಾ.....

ಅವರ ಸುತ್ತಲೂ ಸಾಮಾನೆಲ್ಲಾ ಅಸ್ತವ್ಯಸ್ತವಾಗಿ ಕೋಣೆಯ ತುಂಬಾ ಬಿದ್ದಿತ್ತು. ಕುರ್ಚಿ, ಮೇಜು, ಪೆಟ್ಟಿಗೆಗಳು, ಎಷ್ಟೋ ಬಗೆಯ ಬಟ್ಟೆಗಳು, ಚಪ್ಪಲಿಗಳು, ಬೂಟುಗಳು..... ರೈಡಿಂಗ್ ಷೂಸ್, ಡಾನ್ಸಿಂಗ್ ಷೂಸ್, ಪ್ಲೇಟ್ಸ್..... ಸ್ಪೂನ್ಸ್..... ಟಿನ್ಡ್‌ಫುಡ್..... ಮುರಿದ ಟಾಯ್ಸ್, ಗನ್ಸ್, ಪಿಸ್ಟಲ್ಸ್..... ಬೀರು ಸೀಸೆಗಳು..... ಅವರ ಬದುಕಿಗೆ ಸಂಬಂಧಪಟ್ಟ ಎಂತೆಂತಹವೊ ವಸ್ತುಗಳು..... ಅವರು ಬಳಸಿದ್ದು, ಅವರ ಮಕ್ಕಳು ಆಡಿ ಮೂಲೆಗೆಸೆದವು..... ಪುಸ್ತಕಗಳು..... ಮ್ಯಾಗ್‌ಜೈನುಗಳು, ಲಂಡನ್ ಸ್ಟೋರ್ ಕ್ಯಾಟ್‌ಲಾಗುಗಳು..... ಏನೇನೋ ಇದ್ದುವು. ಪ್ಯಾಕೇಜಿಂಗ್ ಕೇಸಸ್, ಸೂಟ್‌ಕೇಸಸ್, ಟ್ರಂಕು – ಪೆಟ್ಟಿಗೆಗಳು..... ಡೀಲ್‌ವುಡ್ ಬಾಕ್ಸ್..... ಅಲ್ಲೋಲ ಕಲ್ಲೋಲವಾಗಿದ್ದ ಉತ್ತರ ಭಾರತದಂತೆ..... ಚೆಲ್ಲಾಪಿಲ್ಲಿಯಾಗಿ, ಚೂರು ಚೂರಾಗಲಿದ್ದ ಬ್ರಿಟಿಷ್ ಸಾಮ್ರಾಜ್ಯದಂತೆ.....

ಅದರ ಮಧ್ಯದಲ್ಲಿ ಅವರಿಬ್ಬರೂ ಅಸಹಾಯಕರಾಗಿ ನಿಂತಿದ್ದರು.



# ನಾನು ದೊಡ್ಡವನಾದ್ಮೇಲೆ ದೇವರಾಗ್ತೇನೆ

ಮೂಲ : ಶ್ರೀ ಕೆ. ಆದರ್ಶ ಸಾಮ್ರಾಟ್

ದೇವಾಲಯದೊಳಗಿನಿಂದ ಸ್ವಾಮೀಜಿಯವರ ಉಪನ್ಯಾಸ ಕೇಳಿ ಬರುತ್ತಿತ್ತು.

"ದೇವರು ಸರ್ವಶಕ್ತ. ಯಾರು ಒಪ್ಪಿಕೊಂಡರೂ, ಒಪ್ಪಿಕೊಳ್ಳದಿದ್ದರೂ ದೇವರನ್ನು ಮೀರಿಸುವ ಶಕ್ತಿ ಈ ಪ್ರಪಂಚದಲ್ಲಿ ಮತ್ತೊಂದಿಲ್ಲ. ಆತನೇ ಸಮಸ್ತ ಲೋಕಗಳಿಗೂ ಅಧಿಕಾರಿ. ಸಕಲ ಚರಾಚರ ಜಗತ್ತಿಗೂ ಸೃಷ್ಟಿಕರ್ತನೂ, ಪಾಲಕನೂ, ಪೋಷಕನೂ ಅವನೇ. ದೇವರು ಬೇಕೆಂದರೆ ಈ ಕ್ಷಣದಲ್ಲಿ ಪ್ರಪಂಚವನ್ನು ಬೂದಿಯಾಗಿಸಬಲ್ಲ. ಮರುಕ್ಷಣವೇ ಹೊಸ ಲೋಕವನ್ನೂ ಸೃಷ್ಟಿಸಬಲ್ಲ. ಲಕ್ಷಾಧಿಕಾರಿಯನ್ನು ಭಿಕಾರಿಯನ್ನಾಗಿಯೂ, ಭಿಕಾರಿಯನ್ನು ಲಕ್ಷಾಧಿಕಾರಿಯನ್ನಾಗಿಯೂ ಮಾಡಬಲ್ಲ....."

ನಾಲ್ಕನೆಯ ತರಗತಿಯಲ್ಲಿ ಓದುತ್ತಿದ್ದ ವಿನೀತ, ಸ್ಕೂಲಿನಿಂದ ಹಿಂತಿರುಗಿ ಬರುತ್ತಿರುವಾಗ ಸ್ವಾಮೀಜಿಯ ಪ್ರಸಂಗದಲ್ಲಿನ ಈ ಮಾತುಗಳನ್ನು ಕೇಳಿಸಿಕೊಂಡ. ಅವು ನೇರವಾಗಿ ಅವನ ಮನಸ್ಸನ್ನು ಮುಟ್ಟಿದವು. ಒಂಬತ್ತು ವರ್ಷ ತುಂಬದ ಈ ಹಸುಳೆಗೆ ಆ ಪ್ರಸಂಗದಲ್ಲಿನ ಬಹಳಷ್ಟು ಮಾತುಗಳು ಅರ್ಥವಾಗಲಿಲ್ಲ. ಆದರೆ ದೇವರು ಎಲ್ಲವನ್ನೂ ಮಾಡಬಲ್ಲ. ಅವನಿಗೆ ಕೈಲಾಗದ ಕೆಲಸ ಈ ಪ್ರಪಂಚದಲ್ಲಿ ಯಾವುದೂ ಇಲ್ಲ ಎಂಬ ವಿಷಯ ಮಾತ್ರ ಚೆನ್ನಾಗಿ ಅರ್ಥವಾಯಿತು.

ಆಲೋಚಿಸುತ್ತಾ ಮುಂದಕ್ಕೆ ಹೆಜ್ಜೆ ಹಾಕಿದ ವಿನೀತ್, ಆಗ ಅವನಿಗೆ ರಾಧಳ ನೆನಪಾಯಿತು. ಪಾಪ, ರಾಧಿ! ಈ ದಿನ ಸಹ ಲೆಕ್ಕದ ಮೇಷ್ಟರ

ಕೈಯಿಂದ ಪೆಟ್ಟು ತಿಂದಿದ್ದಳು. ಆ ಲೆಕ್ಕದ ಮೇಷ್ಟರಿಗೆ ರಾಧಳ ಬಗ್ಗೆ ಸ್ವಲ್ಪವೂ ಕರುಣೆಯಿರಲಿಲ್ಲ. ಹೋಂವರ್ಕ್ ಮಾಡಲಿಲ್ಲ ಅಂದ ಕೂಡಲೇ ಕೈಗಳ ಮೇಲೆ ಬೊಕ್ಕೆ ಏಳುವಂತೆ ಹೊಡೆದಿದ್ದರು. ತನ್ನಿಂದ ನೋಡಲಾಗದೆ ಗಟ್ಟಿಯಾಗಿ ಕಣ್ಣು ಮುಚ್ಚಿಕೊಂಡಿದ್ದ. 'ಬೇಡ, ಬೇಡ' ಎಂದು ಗಟ್ಟಿಯಾಗಿ ಕೂಗಬೇಕೆನಿಸಿತ್ತು ತನಗೆ. ಮೇಷ್ಟ್ರ ಕೈಯಿಂದ ಬೆತ್ತವನ್ನು ಕಸಿದುಕೊಂಡು ಮುರಿದು ಬಿಸುಡಬೇಕೆನಿಸಿತ್ತು.

ಹತ್ತು ದಿನಗಳಿಂದ ರಾಧ ಪ್ರತಿದಿನವೂ ಪೆಟ್ಟು ತಿನ್ನುತ್ತಲೇ ಇದ್ದಳು. ಒಟ್ಟು ಏಳು ಅಭ್ಯಾಸಗಳನ್ನು ಮಾಡಿಯೇ ಇರಲಿಲ್ಲ. ಆದ್ದರಿಂದಲೇ ಆ ದಿನ ಲೆಕ್ಕದ ಮೇಷ್ಟರು ಇನ್ನೂ ಗಟ್ಟಿಯಾಗಿ ಹೊಡೆದಿದ್ದರು. ಎಷ್ಟು ಗಟ್ಟಿಯಾಗಿ ಹೊಡೆದಿದ್ದರೆಂದರೆ, ಎಂದೂ ಅಳದೆ ನೋವನ್ನು ತಡೆದುಕೊಳ್ಳುತ್ತಿದ್ದ ರಾಧಳ ಕಣ್ಣಿನಲ್ಲಿಯೂ ಆ ದಿನ ನೀರು ಬಂದಿತ್ತು. ಆದರೂ ಸರಿ, ಗಟ್ಟಿಯಾಗಿ ಮಾತ್ರ ಅಳಲಿಲ್ಲ.

"ನಿನಗೆ ನೋವಾಗುವುದಿಲ್ಲವೇ ರಾಧಾ?" ಎಂದು ತಾನೊಮ್ಮೆ ಕೇಳಿದಾಗ ತನ್ನ ಕಡೆ ದಿಟ್ಟಿಸಿ ನೋಡಿ ತಲೆ ಬಗ್ಗಿಸಿಕೊಂಡು ಸುಮ್ಮನಾಗಿದ್ದಳು. ಉತ್ತರ ಕೊಟ್ಟಿರಲಿಲ್ಲ.

ವಿಚಿತ್ರವಾದ ವಿಷಯವೆಂದರೆ ಎಷ್ಟು ಪೆಟ್ಟು ತಿಂದರೂ ರಾಧ ಅಳುತ್ತಿರಲಿಲ್ಲ. ಕೈಚಾಚಿ, ಗಟ್ಟಿಯಾಗಿ ಕಣ್ಣುಮುಚ್ಚಿಕೊಂಡು ಕದಲದೆ ನಿಂತು ಬಿಡುತ್ತಿದ್ದಳು.

"ನೀನೇಕೆ ಹೋಂವರ್ಕ್ ಮಾಡೊಲ್ಲ?" ಎಂದೊಮ್ಮೆ ಕೇಳಿದ್ದ ವಿನೀತ. ಅದಕ್ಕೂ ರಾಧ ಉತ್ತರ ಕೊಟ್ಟಿರಲಿಲ್ಲ.

ಅವಳ ಸ್ವಭಾವವೇ ಹಾಗೆ, ಯಾರೊಂದಿಗೂ ಹೆಚ್ಚಾಗಿ ಮಾತನಾಡುತ್ತಿರಲಿಲ್ಲ. ಸದಾ ಮಂಕಾಗಿರುತ್ತಿದ್ದಳು. ಮಿಕ್ಕ ಎಲ್ಲಾ ಹುಡುಗ – ಹುಡುಗಿಯರಂತೆ ಆಟವಾಡುತ್ತಿರಲಿಲ್ಲ, ನಗುತ್ತಿರಲಿಲ್ಲ.

ಯಾವಾಗಲಾದರೊಮ್ಮೆ ಮಾತನಾಡಿದರೆ ತನ್ನೊಂದಿಗೆ ಮಾತ್ರವೇ ಮಾತನಾಡುತ್ತಿದ್ದುದು. ಅದೂ ಸ್ವಲ್ಪವೇ. ಆದರೂ ಅವಳ ಮಾತು ಮುದ್ದಾಗಿ, ಇನ್ನೂ ಇನ್ನೂ ಕೇಳಬೇಕೆನಿಸುವಂತೆ ಇರುತ್ತಿತ್ತು.....

ಆ ದಿನ ಮನೆಗೆ ಹೋಗುವುದಕ್ಕೆ ಮುಂಚೆ, "ವಿನೀತ್, ನಿನ್ನ ಲೆಕ್ಕದ ಪುಸ್ತಕ ಒಂದು ಸಲ ಕೊಟ್ಟಿರ್ತೀಯಾ? ಸೋಮವಾರ ತಂದುಕೊಡ್ತೀನಿ" ಎಂದು ಕೇಳಿದಳು.

ತಾನು ಕೂಡಲೇ ಬ್ಯಾಗಿನಲ್ಲಿ ಕೈ ಹಾಕಿ 'ಅಯ್ಯೋ' ಎಂದ. ತಾನೀದಿನ ಲೆಕ್ಕದ ಪುಸ್ತಕ ತಂದಿರಲಿಲ್ಲ. ಆ ವಿಷಯ ಹೇಳಿದ ಕೂಡಲೇ ರಾಧ 'ಹೋಗಲಿ ಬಿಡು' ಎಂದಳು.

ತನಗೆ ತುಂಬಾ ನೋವಾಯಿತು. ಅಷ್ಟರಲ್ಲಿ ರಾಧ ಸೋಮವಾರ ಸಹ ಪೆಟ್ಟು ತಿನ್ನುತ್ತಾಳೆಂಬ ವಿಷಯ ನೆನಪಾಗಿ, "ನಿಮ್ಮ ಮನೆ ಎಲ್ಲಿದೆ ಅಂತ ಹೇಳು. ನಾಳೆ ಬೆಳಿಗ್ಗೆ ತಂದು ಕೊಡ್ತೀನಿ" ಎಂದ. ರಾಧ ಉತ್ತರ ಹೇಳಿ ಎಂದಿನಂತೆ ವೇಗವಾಗಿ ನಡೆಯುತ್ತಾ ಹೊರಟು ಹೋದಳು. ಅಷ್ಟು ಸ್ಪೀಡಾಗಿ ಏಕೆ ನಡೆಯುತ್ತಾಳೋ ಎಂದುಕೊಂಡ ವಿನೀತ್.

ಪಾಪ, ರಾಧಳ ಕೈಗಳು ಕೆಂಪಾಗಿದ್ದುವು. ಒಂದು ದಿನದಲ್ಲಿ ಅಷ್ಟು ಅಭ್ಯಾಸಗಳನ್ನು ಹೇಗೆ ಮಾಡುತ್ತಾಳೋ ಏನೋ? ಸೈನ್ಸ್‌ನಲ್ಲಿ ಸಹ ಐದು ಪಾಠಗಳನ್ನು ಬರೆಯಬೇಕು.

ಎಂದಿನಂತಿಲ್ಲದೆ, ಚಿಂತೆಯ ಮುಖ ಹೊತ್ತು ಬಂದ ಮಗನನ್ನು ನೋಡಿ, "ಯಾಕಪ್ಪಾ ಹಾಗಿದೀಯ?" ಎನ್ನುತ್ತಾ ಅವನ ಹಣೆಮುಟ್ಟಿ ನೋಡಿದಳು ನೀರಜ.

ವಿನೀತ್, "ಏನಿಲ್ಲಮ್ಮಾ" ಎಂದ.

"ಮಧ್ಯಾಹ್ನ ಟಿಫಿನ್ ತಿಂದೆಯಾ?"

"ಹೂಂ....." ಎಂದು ವಿನೀತ್ ಉಡುಪು ಬದಲಿಸಿ ಕೈಕಾಲು ತೊಳೆದು ಕೊಂಡು ಮಂಚದ ಮೇಲೆ ಬಿದ್ದುಕೊಂಡ.

ನಿಜ ಹೇಳಬೇಕೆಂದರೆ ಆದಿನ ಮಧ್ಯಾಹ್ನ ಅವನು ಟಿಫಿನ್ ತಿಂದಿರಲಿಲ್ಲ. ಕಾರಣ ತನ್ನ ಬಾಕ್ಸನ್ನು ರಾಧಾಳಿಗೇ ಕೊಟ್ಟುಬಿಟ್ಟಿದ್ದ. ರಾಧ ಸಾಧಾರಣವಾಗಿ ಟಿಫಿನ್ ತರುತ್ತಲೇ ಇರಲಿಲ್ಲ.....

ಮೂರು ತಿಂಗಳ ಹಿಂದೆ ಒಂದು ದಿನ ಲಂಚ್ ಟೈಮಿನಲ್ಲಿ ಟಿಫಿನ್ ತಿನ್ನೋಣವೆಂದು ಕುಳಿತ ವಿನೀತ್ ರಾಧಳ ಕಡೆ ನೋಡಿದ. ಅನಂತರ ತರಗತಿಯಲ್ಲಿ ಕಣ್ಣಾಡಿಸಿದ. ಹೊರಕ್ಕೆ ಹೋದವರು ಕೆಲವರಾದರೆ ಮಿಕ್ಕವರೆಲ್ಲಾ ಜತೆ ಜತೆಯಾಗಿ ಕುಳಿತು ಟಿಫಿನ್ ತಿನ್ನುತ್ತಿದ್ದರು. ರಾಧ ಒಬ್ಬಳೇ ಒಂದು ಮೂಲೆಯಲ್ಲಿ ಸುಮ್ಮನೆ ಕುಳಿತಿದ್ದಳು. ವಿನೀತನಿಗೆ ಅಯ್ಯೋ ಪಾಪ ಅನ್ನಿಸಿತು. ತನ್ನ ಬಾಕ್ಸನ್ನು ತೆಗೆದುಕೊಂಡು ರಾಧಳ ಬಳಿ ಹೋದ.

"ನೀನು ಟಿಫಿನ್ ತರಲಿಲ್ಲವೇ?" ಎಂದು ಎಷ್ಟೋ ಸಲಿಗೆಯಿದ್ದವನಂತೆ ಕೇಳಿದ. ಅದೇ ಅವನು ಅವಳೊಡನೆ ಮೊದಲ ಸಲ ಮಾತನಾಡಿದ್ದು.

ರಾಧ ಇಲ್ಲವೆಂಬಂತೆ ಅಡ್ಡವಾಗಿ ತಲೆಯಾಡಿಸಿದಳು. ಕೂಡಲೇ ವಿನೀತ್ "ಹಾಗಾದರೆ ತಗೋ" ಎಂದು ತನ್ನ ಬಾಕ್ಸನ್ನು ಕೊಟ್ಟ.

"ಮತ್ತೆ ನಿನಗೋ!" ರಾಧ ಆಶ್ಚರ್ಯದಿಂದ ಕಣ್ಣರಳಿಸಿ ಕೇಳಿದಳು.

"ನನಗ್ಯಾಕೋ ಈ ದಿನ ಹಸಿವೇ ಇಲ್ಲ. ನೀನು ತಿನ್ನು" ಎಂದು ಸುಳ್ಳು ಹೇಳಿದ. ಕಣ್ಣಿನಲ್ಲಿಯೇ ಕೃತಜ್ಞತೆಗಳನ್ನು ಹೇಳಿ ಅವನು ಕೊಟ್ಟ ಟಿಫಿನನ್ನು ರಾಧ ಗಬಗಬನೆ ತಿಂದಿದ್ದಳು.

ಪಾಪ, ಎಷ್ಟು ಹಸಿವಾಗಿತ್ತೋ ಏನೋ ಎಂದುಕೊಂಡ ತಾನು, ಸಾಯಂಕಾಲದವರೆಗೂ ಏನನ್ನೂ ತಿನ್ನದೆಯೇ ಕಳೆದ. ಆದರೆ ಹಸಿದಿದ್ದ ರಾಧಳಿಗೆ ಟಿಫಿನ್ ಕೊಟ್ಟಿದ್ದು ಅವನಿಗೆ ತುಂಬಾ ತೃಪ್ತಿಯನ್ನುಂಟು ಮಾಡಿತ್ತು. ನನಗೆ ಹಸಿವು ಅನ್ನಿಸಲೇ ಇಲ್ಲ. ಆ ದಿನ ಸಾಯಂಕಾಲ ಮನೆಗೆ ಬರುವ ವೇಳೆಗೆ ಅವನು ಎಂದಿಗಿಂತ ಸಂತೋಷವಾಗಿಯೂ, ಉತ್ಸಾಹವಾಗಿಯೂ ಇದ್ದ.

ಅಂದಿನಿಂದಲೇ ಅವರಿಬ್ಬರೂ ಸ್ನೇಹಿತರಾಗಿದ್ದರು. ಅಂದಿನಿಂದಲೇ ರಾಧ ಟಿಫಿನ್ ಬಾಕ್ಸ್ ತರದಿದ್ದಾಗಲೆಲ್ಲಾ ವಿನೀತ್ ತನ್ನ ಬಾಕ್ಸನ್ನು ಅವಳಿಗೆ ಕೊಟ್ಟು ಬಿಡುತ್ತಿದ್ದ. ರಾಧ ಬೇಡವೆಂದರೂ ಕೇಳುತ್ತಿರಲಿಲ್ಲ. ಹೇಗೋ ಮಾಡಿ, ಒತ್ತಾಯಿಸಿ ಅವಳು ತಿನ್ನುವಂತೆ ಮಾಡುತ್ತಿದ್ದ. ತನಗೆ ಹಸಿವಿಲ್ಲವೆಂದು ನಂಬಿಸಲು ಬ್ರೇವ್ ಎಂದು ತೇಗಿ ಅವಳನ್ನು ನಂಬಿಸುತ್ತಿದ್ದ. ಬರಬರುತ್ತಾ ರಾಧಳಲ್ಲೂ ಬದಲಾವಣೆ ಕಾಣಬಂತು. ಅವಳು ಎಂದಾದರೂ ತನಗೆ ಪೆನ್ಸಿಲ್, ರಬ್ಬರ್, ಪುಸ್ತಕ

ಏನಾದರೂ ಬೇಕಿದ್ದರೆ ವಿನೀತನನ್ನು ಕೇಳುತ್ತಿದ್ದಳು. ವಿನೀತನಂತೆ ಪ್ರತಿದಿನವೂ ಏನನ್ನಾದರೂ ಕೊಡದಿದ್ದರೂ, ಆಗಾಗ ತಾನು ಕೂಡ ಪ್ರೀತಿಯಿಂದ ಏನಾದರೂ ತಂದುಕೊಡುತ್ತಿದ್ದಳು.

ಮುಖ ಚಿಕ್ಕದು ಮಾಡಿಕೊಂಡು ಮಂಚದ ಮೇಲೆ ಮಲಗಿದ್ದ ಮಗನನ್ನು ಕಂಡು ನೀರಜಳಿಗೆ ತುಂಬಾ ಗಾಬರಿಯಾಯಿತು. ಕರುಳು ಹಿಂಡಿದಂತಾಯಿತು. ಅವನು ಅವಳ ಪ್ರಾಣವಾಗಿದ್ದ, ಅವನಿಗೇನಾದರೂ ಆದರೆ ಸಹಿಸ ಲಾಗುತ್ತಿರಲಿಲ್ಲ – ಅವಳಿಂದ.

ಮಗನ ಪಕ್ಕದಲ್ಲಿಯೇ ಕುಳಿತು, ಅವನ ತಲೆಯ ಮೇಲೆ ಕೈಯಿರಿಸಿ, "ಏಕೆ ಮಗೂ ಹಾಗಿದೀಯ?" ಎಂದು ಕಕ್ಕುಲತೆಯಿಂದ ಕೇಳಿದಳು.

ವಿನೀತ ಸ್ವಲ್ಪ ಹೊತ್ತು ತಾಯಿಯ ಮುಖವನ್ನೇ ತದೇಕವಾಗಿ ನೋಡಿ, "ಅಪ್ಪ ಯಾವಾಗ ಬರ್ತಾರಮ್ಮ?" ಎಂದ.

ನೀರಜಳ ಮೈ ಕಂಪಿಸಿತು.

ವಿನೀತ ಹುಟ್ಟಿದ ಎರಡು ವರ್ಷಕ್ಕೆಲ್ಲಾ ಅವಳ ಪತಿ ಯುದ್ಧದಲ್ಲಿ ಮರಣಿಸಿದ್ದ, ಆ ವಿಷಯವನ್ನು ಈಗಾಗಲೇ ಹೇಳಿ ಆ ಮಗುವಿನ ಮನಸ್ಸನ್ನು ನೋಯಿಸಲು ಇಷ್ಟವಿಲ್ಲದೆ ನಾಲ್ಕು ವರ್ಷದಿಂದ ಅವನ ತಂದೆ ಬದುಕಿಯೇ ಇದ್ದಾರೆಂದು ಅವನಿಗೆ ಹೇಳುತ್ತ ಬಂದಿದ್ದಳು. ಆದರೆ ಈ ಮಧ್ಯೆ ಒಂದು ಸಲ ಸ್ಕೂಲಿನಿಂದ ಬರುತ್ತಲೇ ವಿನೀತ, "ಅಮ್ಮಾ, ಅಪ್ಪ ಸತ್ತು ಹೋದರಂತಲ್ಲಾ? ನೀನೇಕೆ ನನಗೆ ಸುಳ್ಳು ಹೇಳಿದೆ?" ಎಂದು ತಾಯಿಯನ್ನು ನಿಲ್ಲಿಸಿ ಕೇಳಿದ್ದ. ನಾನು ಹೇಳಿದ್ದೇ ನಿಜ, ಅವನು ಕೇಳಿದ್ದು ಸುಳ್ಳು ಎಂದು ಅವನನ್ನು ನಂಬಿಸಬೇಕಾದರೆ ಅವಳಿಗೆ ಸಾಕುಸಾಕಾಗಿತ್ತು. ಮತ್ತೆ ಈ ದಿನ ಏಕೆ ಹೀಗಿದ್ದಾನೋ ಎಂಬ ಸಂದೇಹ ಅವಳನ್ನು ಕಾಡಿತು.

ಉತ್ತರಕ್ಕಾಗಿ ಕಾಯುತ್ತಾ ತನ್ನ ಮುಖವನ್ನೇ ನೋಡುತ್ತಿದ್ದ ಮಗನಿಗೆ, "ಬಂದು ಬಿಡ್ತಾರಪ್ಪ ಇನ್ನೇನು ಸುಮಾರು ಮೂರು ನಾಲ್ಕು ತಿಂಗಳಲ್ಲಿ ಬಂದು ಬಿಡಬಹುದು" ಎಂದಳು ನೀರಜ.

"ಯುದ್ಧ ಮುಗಿದು ಹೋಯಿತೇ?" ಸಂಭ್ರಮದಿಂದ ಕೇಳಿದ ವಿನೀತ.

"ಓ, ಯುದ್ಧ ಯಾವಾಗಲೊ ಮುಗಿದು ಹೋಯಿತು. ಸದ್ಯಕ್ಕೆ ನಿಮ್ಮ ತಂದೆ ಹೊರಡಲು ಸಿದ್ಧವಾಗ್ತಾ ಇರ್ತಾರೆ."

ವಿನೀತ ಮತ್ತೇನೂ ಪ್ರಶ್ನಿಸದೆ ಕಣ್ಣುಮುಚ್ಚಿಕೊಂಡ. 'ಹಮ್ಮಯ್ಯ' ಎಂದು ನೀರಜ ನಿಟ್ಟುಸಿರುಬಿಟ್ಟಳು.

ಆ ದಿನ ರಾತ್ರಿ ನಿದ್ದೆ ಮಾಡುವ ಮೊದಲು ವಿನೀತ ತಾಯಿಯನ್ನು ಎಷ್ಟೋ ವಿಧವಾದ ಪ್ರಶ್ನೆಗಳನ್ನು ಕೇಳಿದ.

"ಅಮ್ಮಾ, ಸರ್ವಶಕ್ತನೆಂದರೆ ಏನು?"

"ಎಲ್ಲವನ್ನೂ ಮಾಡಲು ಶಕ್ತಿಯುಳ್ಳವನು ಎಂದರ್ಥ ಕಣಪ್ಪಾ."

"ಸಕಲ ಚರಾಚರ ಜಗತ್ತಿಗೆ ಅಂದರೆ....." ಸ್ವಾಮೀಜಿಯ ಪ್ರಸಂಗದಲ್ಲಿ ತನಗೆ ಅರ್ಥವಾಗದ ಮಾತುಗಳನ್ನೆಲ್ಲಾ ವಿನೀತ ತಾಯಿಯನ್ನು ಕೇಳಿ ತಿಳಿದು ಕೊಂಡ. ಆ ನಂತರ ದೇವರು ಎಲ್ಲಿರುತ್ತಾನೆ, ಏನು ಮಾಡುತ್ತಾನೆ ಎಂದೆಲ್ಲಾ ಕೇಳಿದ. ನೀರಜ ಎಲ್ಲಕ್ಕೂ ಸಹನೆಯಿಂದ ಉತ್ತರ ಕೊಟ್ಟಳು. ಉತ್ತರ ಹೇಳ ಹೇಳುತ್ತಲೇ ಅವಳಿಗೆ ನಿದ್ದೆ ಬಂದುಬಿಟ್ಟಿತ್ತು. ಆದರೆ ವಿನೀತ ಮಾತ್ರ ಬಹಳ ಹೊತ್ತು ನಿದ್ದೆ ಮಾಡಲಿಲ್ಲ. ಅವನ ಮನಸ್ಸೆಲ್ಲಾ ಕಲಕಿದಂತಾಗಿ ನಿದ್ದೆಯೇ ಬರಲಿಲ್ಲ.

ಮರುದಿನ ಬೆಳಿಗ್ಗೆ ತನ್ನ ಹೋಂವರ್ಕ್ ಪುಸ್ತಕ ತೆಗೆದುಕೊಂಡು ರಾಧಳ ಮನೆಗೆ ಹೊರಟ ವಿನೀತ. ರಾಧ ಹೇಳಿದ ಗುರ್ತಿನಂತೆ ಮರದ ಎದುರುಗಡೆ ನೋಡಿದಾಗ ಅಲ್ಲಿ ಮನೆಗೆ ಬದಲಾಗಿ ಒಂದು ಗುಡಿಸಿಲಿತ್ತು. ಆಶ್ಚರ್ಯದಿಂದಲೇ, "ರಾಧಾ" ಎಂದು ಕೂಗಿದ.

ಕೂಡಲೇ, "ಒಳಗೆ ಬಾ ಮಗೂ" ಎಂಬ ಮಾತು ಕೇಳಿಸಿತು. ಅವನು ಮೆಲ್ಲನೆ ಒಳಕ್ಕಡಿಯಿಟ್ಟ. ಅಲ್ಲಿ ನಾರಿನ ಮಂಚದ ಮೇಲೆ ಮಲಗಿದ್ದ ಒಂದು ಸ್ತ್ರೀ ಮೂರ್ತಿ ಕಾಣಿಸಿತು. ಅವಳ ಮುಖ ಬಿಳಿಚಿಕೊಂಡಿತ್ತು. ಮೈಮೂಳೆ ಎದ್ದು ಕಾಣುವಂತಿದ್ದು ವಿಕಾರವಾಗಿ ಕಾಣಿಸುತ್ತಿದ್ದಳಾಕೆ. ವಿನೀತನ ಹೆಸರನ್ನು

ಕೇಳಿ ತಿಳಿದುಕೊಂಡ ಆಕೆ, ಅವನನ್ನು ತನ್ನ ಬಳಿ ಕೂರಿಸಿಕೊಂಡು ಆದರದಿಂದ, "ನಮ್ಮ ರಾಧ ನಿನ್ನನ್ನು ಕುರಿತು ತುಂಬಾ ತುಂಬಾ ಹೇಳ್ತಿರ್ತಾಳೆ ಮಗೂ, ಎಷ್ಟೋ ಸಲ ಅವಳಿಗೆ ಟಿಫಿನ್ ಕೊಟ್ಟಿದ್ದೀಯಂತೆ. ಪುಸ್ತಕ – ಪೆನ್ಸಿಲ್ ಎಲ್ಲಾ ಕೊಡ್ತೀಯಂತೆ..... ದಿನಾ ನಿನ್ನ ಮಾತೇ ಅವಳಿಗೆ. ದೇವರು ನಿನ್ನನ್ನು ಚೆನ್ನಾಗಿಟ್ಟಿರಲಿ ಮಗೂ" ಎಂದಳು.

ವಿನೀತನಿಗೆ ತುಂಬಾ ಸಂತೋಷವಾಯಿತು. "ರಾಧ ಎಲ್ಲಿ ಆಂಟೀ?" ಎಂದು ಕೇಳಿದ.

"ತರಕಾರಿ ಮಾರೋಕೆ ಹೋಗಿದ್ದಾಳೆ ಕಣಪ್ಪಾ, ಇನ್ನರ್ಧ ಗಂಟೇಲಿ ಬಂದುಬಿಡ್ತಾಳೆ."

ವಿನೀತನ ಆಶ್ಚರ್ಯಕ್ಕೆ ಪಾರವೇ ಇಲ್ಲದಾಯಿತು. "ತರಕಾರಿ ಮಾರಲು ಹೋಗಿದ್ದಾಳೆಯೇ ರಾಧ?"

"ಹೌದು ಮಗೂ, ನಿನ್ನೊಂದಿಗೆ ಯಾವಾಗಲೂ ಹೇಳಲೇ ಇಲ್ಲವೇ? ಅವಳೊಬ್ಬಳು ಹುಚ್ಚುಹುಡುಗಿ, ಯಾರೊಂದಿಗೂ ಏನೂ ಹೇಳಿಕೊಳ್ಳಲ್ಲ. ಇಷ್ಟು ಚಿಕ್ಕ ವಯಸ್ಸಿನಲ್ಲಿಯೇ ಬೆಟ್ಟದಷ್ಟು ಕಷ್ಟ ಅವಳ ತಲೆಯ ಮೇಲೆ ಬಿದ್ದಿದೆ. ತರಕಾರಿ ಮಾರ್ತಾಳೆ, ಚುಟ್ಟಾ ಸುತ್ತುತ್ತಾಳೆ, ಮುಸುರೆ ತೊಳೀತಾಳೆ. ಇದಿಷ್ಟೇ ಸಾಲದೂಂತ ಈ ಸ್ಕೂಲೊಂದು ಅವಳ ಪ್ರಾಣಕ್ಕೆ. ಬಿಟ್ಟುಬಿಡಮ್ಮಾ ಅಂದರೆ ಕೇಳೊಲ್ಲ. 'ನಾನು ಚೆನ್ನಾಗಿ ಓದಿ ಡಾಕ್ಟರ್ ಆಗಬೇಕಮ್ಮಾ. ಇಲ್ಲದಿದ್ದರೆ ಅಪ್ಪ ನೊಂದುಕೋತಾರೆ' ಅಂತಾಳೆ. ದಿನಾ ಅವಳು ಪಡೋ ಕಷ್ಟ ನೋಡಲಾರೆ. ಒಂದು ಕ್ಷಣ ಸಹ ಆಡಿಕೊಳ್ಳಲ್ಲ....."

ಆಕೆಯ ಮಾತು ಕೇಳುತ್ತಿದ್ದಂತೆ ವಿನೀತನಿಗೆ ತನ್ನ ಹೃದಯ ಭಾರವಾಗುತ್ತಿದ್ದಂತೆ ಅನ್ನಿಸಿತು.

"ಆಂಟೀ..... ಮತ್ತೆ ಅಂಕಲ್....." ಎಂದ ಸಂದೇಹದಿಂದ.

"ಇನ್ನೆಲ್ಲಿಯ ಅಂಕಲ್ ಮಗೂ, ಅವರನ್ನ ಎಂದೋ ಪೋಲೀಸರು ಹಿಡಿದುಕೊಂಡು ಹೋದರು. ಹಣ ಇದ್ದವರು ಬಡವರಿಗೆ ಮೋಸ

ಮಾಡ್ತಿದ್ದಾರೆಂದೂ. ಅದಕ್ಕಾಗಿ ಬಡವರೆಲ್ಲಾ ಒಂದಾಗಿ ತಿರುಗಿ ಬೀಳಬೇಕೆಂದೂ ಉಪನ್ಯಾಸ ಕೊಡ್ತಿದ್ದರು. ಸದಾ ಅವರು ಬಡವರಿಗಾಗಿಯೇ ಚಿಂತಿಸುತ್ತಿದ್ದರು. ಮೈ ತುಂಬಾ ಬಟ್ಟೆ, ಹೊಟ್ಟೆ ತುಂಬಾ ತಿಂಡಿ ಇಲ್ಲದ ಬಡವರಿಗಾಗಿ ಅವರ ಒಳ್ಳೆಯದಕ್ಕಾಗಿ ದುಡಿಯುತ್ತಿದ್ದರು..... ಪ್ಚ್..... ಅವರ ಕನಸು ನನಸಾಗಲೇ ಇಲ್ಲ."

ಆಕೆ ಒಂದು ಕ್ಷಣ ಸುಮ್ಮನಿದ್ದು ದುಃಖದಿಂದ ಬಿಗಿದ ಕಂಠದಿಂದ "ಅವರು ಇದ್ದಿದ್ದರೆ ನನ್ನ ಈ ಮಗುವನ್ನು ಕಷ್ಟಗಳ ಪಾಲು ಮಾಡುತ್ತಿರಲಿಲ್ಲ. ಅವರೇನೋ ಜೈಲಿನಲ್ಲಿದ್ದಾರೆ..... ನಾನಾದರೋ ಕಾಯಿಲೆಯಿಂದ ಹಾಸಿಗೆ ಹಿಡಿದಿದೀನಿ. ಇವತ್ತೋ ನಾಳೇನೋ ನನ್ನ ಪ್ರಾಣ ಹೋಗಲೂಬಹುದು. ಆ ನಂತರ ನನ್ನ ಈ ರಾಧಳ ಗತಿಯೇನು ಎಂಬುದೇ ನನ್ನ ಚಿಂತೆ....." ಎನ್ನುವಷ್ಟರಲ್ಲಿ ಅವಳಿಗೆ ವಿಪರೀತವಾದ ಕೆಮ್ಮು ಬಂತು. ಖಳ್, ಖಳ್ ಎಂದು ಕೆಮ್ಮುತ್ತಾ, ಆಯಾಸದಿಂದ ಏದುಸಿರು ಬಿಡತೊಡಗಿದಳು. ಮತ್ತೆ ಕೆಮ್ಮು ಬಂದು ಹಠಾತ್ತಾಗಿ ರಕ್ತವಾಂತಿಯಾಗಿ ಜ್ಞಾನ ತಪ್ಪಿಹೋಯಿತು.

ವಿನೀತನಿಗೆ ದಿಕ್ಕೇ ತೋಚಲಿಲ್ಲ. ಮನಸ್ಸೆಲ್ಲಾ ವಿಕಲವಾಗಿ ಏನು ಮಾಡಲೂ ತೋರದೆ ಮರಗಟ್ಟಿದಂತೆ ಕುಳಿತುಬಿಟ್ಟ..... ರಾಧಳ ಕಂಠ ಕೇಳಿಸಿದ ನಂತರವೇ ಅವನಲ್ಲಿ ಚಲನೆ ಕಾಣಿಸಿದ್ದು. ರಾಧಳನ್ನು ನೋಡಿದಾಕ್ಷಣ ಅವನಿಗೆ ದುಃಖ ಉಕ್ಕಿ ಬಂದಿತ್ತು. ಎಂದೂ ಇಲ್ಲದ್ದು ಬಿಕ್ಕಿ ಬಿಕ್ಕಿ ಅಳಲಾರಂಭಿಸಿದ.

ರಾಧ ಗಾಬರಿಯಿಂದ, "ಏನಾಯಿತು ವಿನೀತ್?" ಎಂದು ಕೇಳಿದಳು. ಆದರೆ ಅವನೇನೂ ಉತ್ತರ ಕೊಡದೆ ಪುಸ್ತಕವನ್ನು ರಾಧಳ ಕೈಯಲ್ಲಿಟ್ಟವನೇ ಮನೆಗೆ ಓಡಿಬಂದು ಬಿಟ್ಟ. ಬಂದವನೇ ತಾಯಿಯನ್ನು ತಬ್ಬಿ ಹಿಡಿದು ಅಳಲಾರಂಭಿಸಿದ.

ಈ ಸಂಘಟನೆಯ ನಂತರ ಒಂದು ವಾರ ತೀವ್ರವಾದ ಜ್ವರದಿಂದ ಮಲಗಿದ ವಿನೀತ. ಜ್ವರದಲ್ಲಿಯೂ ಏನೇನೋ ಕನವರಿಸುತ್ತಿದ್ದ. ಜ್ವರ ಕಡಿಮೆಯಾದ ನಂತರವೂ ಗಂಭೀರವಾದ ಮುಖಮುದ್ರೆಯಿಂದ, ಏನನ್ನೋ ಆಲೋಚಿಸುತ್ತಿರುವಂತೆ ಕಾಣಿಸುತ್ತಿದ್ದ ಮಗುವನ್ನು ನೋಡಿ ನೀರಜಳಿಗೆ

. ಅವನಿಗೇನೋ ಆಗಿದೆಯೆಂಬ ಹೆದರಿಕೆ ಅವಳಲ್ಲಿ ಅವನ ಪಕ್ಕದಲ್ಲಿ ಕುಳಿತು ಎದೆಯ ಮೇಲೆ ಕೈಯಿಟ್ಟು ಂದು ಪ್ರೀತಿಯಿಂದ ಕೂಗಿದಳು.

"ಏನು ... ೀಚಿಸುತ್ತಿದ್ದೀಯಾ ಮಗೂ?"

ವಿನೀತ ತನ್ನ ದೃಷ್ಟಿಯನ್ನು ಸೂರಿನಲ್ಲಿ ನೆಟ್ಟು "ಅಮ್ಮ" ಎಂದ.

"ಹೇಳು ಮಗೂ"

"ದೇವರು ಸರ್ವಶಕ್ತಿ ಸಂಪನ್ನನಲ್ಲವೇ?"

"ಹೌದು ಮಗೂ."

"ಅವನು ಏನು ಮಾಡಬೇಕೆಂದು ಇಚ್ಛಿಸಿದರೆ ಅದನ್ನು ಮಾಡಬಲ್ಲ, ಅಲ್ಲವೇ?"

"ಮಾಡಬಲ್ಲ ಮಗೂ, ಅವನು ಇಚ್ಛಿಸಿದಲ್ಲಿ ಏನಾದರೂ ಮಾಡಬಲ್ಲ."

"ಯುದ್ಧದಲ್ಲಿರುವ ಅಪ್ಪನನ್ನು ಈ ಕ್ಷಣ ಬೇಕಾದರೆ ಇಲ್ಲಿಗೆ ಬರುವಂತೆ ಮಾಡಬಲ್ಲನಲ್ಲವೇ?"

ನೀರಜಳಿಗೆ ಗಂಟಲಲ್ಲಿ ಏನೋ ಸಿಕ್ಕಿಹಾಕಿಕೊಂಡಂತಾಯಿತು. ಕಷ್ಟಪಟ್ಟು ತನ್ನನ್ನು ತಾನು ಸಾವರಿಸಿಕೊಂಡು "ತಪ್ಪದೆ ಮಾಡಬಲ್ಲ ಮಗೂ" ಎಂದಳು.

"ರಾಧಳ ತಂದೆಯನ್ನು ಜೈಲಿನಿಂದ ಬಿಡಿಸಬಲ್ಲ ಅಲ್ಲವೇ?"

ವಿನೀತ ತನ್ನ ತಾಯಿಯ ಬಳಿ ಯಾವ ವಿಷಯವನ್ನೂ ಮರೆಮಾಚುತ್ತಿರಲಿಲ್ಲ. ರಾಧಳನ್ನು ಕುರಿತು ಅಂದಿನ ವಿಷಯ ಅಂದೇ ಹೇಳುತ್ತಿದ್ದ.

"ಬಿಡಿಸಬಲ್ಲ" ನಿರ್ಲಿಪ್ತಳಾಗಿ ಹೇಳಿದಳು ನೀರಜ. ರಾಧಳ ಮೇಲೂ ಅವಳ ತಾಯಿಯ ಮೇಲೂ ಅವಳಿಗೆ ಸ್ವಲ್ಪ ಸಿಟ್ಟು ಬಂದಿತ್ತೆಂದರೂ ಆಶ್ಚರ್ಯವಿಲ್ಲ.

"ರಾಧಳ ತಾಯಿಯ ಕಾಯಿಲೆ ವಾಸಿ ಮಾಡಬಲ್ಲ ಅಲ್ಲವೇ?"

ವಿನೀತ ತಾನು ಕೇಳಬೇಕೆಂದಿರುವ ಒಂದೇ ಒಂದು ಪ್ರಶ್ನೆಗಾಗಿ ಇಷ್ಟು ಪ್ರಶ್ನೆಗಳನ್ನು ಕೇಳುತ್ತಿದ್ದಾನೆಂದು ನೀರಜಳಿಗೆ ತಿಳಿಯದು.

"ಓ..... ಒಂದು ಕ್ಷಣದಲ್ಲಿ ಮಾಡಬಲ್ಲ....."

"ರಾಧ ಸ್ಕೂಲಿನಲ್ಲಿ ಪೆಟ್ಟು ತಿನ್ನದಂತೆ ಮಾಡಬಲ್ಲ ಅಲ್ಲವೇ?"

"ಹೂಂ....."

"ಪ್ರಪಂಚದಲ್ಲಿನ ಬಡವರಿಗೆಲ್ಲಾ ದುಡ್ಡು ಕೊಡಬಲ್ಲ ಅಲ್ಲವೇ?"

"ಓ..... ತತ್‌ಕ್ಷಣ ಕೊಡುತ್ತಾನೆ."

ಹಾಗೆಂದ ಕೂಡಲೇ ನೀರಜ ಕನಸಿನಲ್ಲಿಯೂ ಊಹಿಸದ ವಿಧವಾಗಿ, ಮಲಗಿದ್ದ ವಿನೀತ್ ತತ್‌ಕ್ಷಣ ಎದ್ದು ಕುಳಿತು ಸುತ್ತಮುತ್ತಲೂ ಹತ್ತು ಮನೆಗಳಿಗೂ ಕೇಳಿಸುವಂತೆ ಗಟ್ಟಿಯಾಗಿ ಕೂಗಿದ.

"ಮತ್ತೆ ದೇವರು ಇದನ್ನೆಲ್ಲಾ ಏಕೆ ಮಾಡುತ್ತಿಲ್ಲ? ಏನು ಮಾಡ್ತಿದಾನೆ?"

ನೀರಜಳ ಬಾಯಿಂದ ಒಂದು ಕ್ಷಣ ಮಾತೇ ಹೊರಡಲಿಲ್ಲ. ಮಗ ಅಷ್ಟು ಗಟ್ಟಿಯಾಗಿ ಕೂಗಾಡುವುದೊಂದು ವಿಧವಾದ ಆಶ್ಚರ್ಯವನ್ನುಂಟು ಮಾಡಿದರೆ, ಅವನು ಕೇಳಿದ ಪ್ರಶ್ನೆಗಳು ಮತ್ತಷ್ಟು ಆಶ್ಚರ್ಯವನ್ನುಂಟು ಮಾಡಿದುವು. ಅವನಿಗೇನುತ್ತರ ಕೊಡಬೇಕೆಂದೇ ಒಂದು ಕ್ಷಣ ತೋಚಲಿಲ್ಲ ಅವಳಿಗೆ. ಮನಸ್ಫೂರ್ತಿಯಾಗಿ ಪ್ರಾರ್ಥಿಸಿದರೆ ದೇವರು ನಮ್ಮ ಬಯಕೆಯನ್ನು ನೆರವೇರಿಸುತ್ತಾನೆಂದು ಹೇಳೋಣವೆಂದುಕೊಂಡಳು.

"ನೀನು ಪ್ರಾರ್ಥಿಸುತ್ತಿಲ್ಲವೇ, ರಾಧಳ ತಾಯಿ ಪ್ರಾರ್ಥಿಸುತ್ತಿಲ್ಲವೇ?" ಎಂದು ಕೇಳುತ್ತಾನೇನೋ ಎಂದು ಹೆದರಿಕೆಯಾಯಿತು.

"ನನಗೆ ಉತ್ತರ ಬೇಕಮ್ಮಾ, ಉತ್ತರ ಬೇಕು" ವಿನೀತ್ ಮತ್ತೆ ಗಟ್ಟಿಯಾಗಿ ಕೂಗಿದ.

ನೀರಜ ಸ್ವಲ್ಪ ಚೇತರಿಸಿಕೊಂಡು ಒಂದು ಕ್ಷಣ ಆಲೋಚಿಸಿ "ಕಣ್ಣಾ, ನೀನು ಹೇಳಿದ್ದನ್ನೆಲ್ಲಾ ಆತ ಮಾಡಬಲ್ಲ. ಅದಕ್ಕಿಂತಲೂ ದೊಡ್ಡ ದೊಡ್ಡ ಕೆಲಸಗಳನ್ನೇ ಮಾಡಬಲ್ಲ..... ಆದರೆ ಇವೆಲ್ಲಾ ಅವನಿಗೆ ಗೊತ್ತಿಲ್ಲವಲ್ಲಾ!" ಎಂದಳು.

"ಏಕೆ ಗೊತ್ತಿಲ್ಲ? ಆಕಾಶದಲ್ಲಿ ಕುಳಿತು ಎಲ್ಲವನ್ನೂ ನೋಡುತ್ತಿರುತ್ತಾನೆಂದು ನೀನೇ ಹೇಳಿದೆಯಲ್ಲಾ" ಮತ್ತೊಂದು ಮಾತು ಬಾಣದಂತೆ ತೂರಿ ಬಂದಿತ್ತು.

"ಅದು ನಿಜಾಂತಿಟ್ಟುಕೋ..... ಸದ್ಯಕ್ಕೆ ಇದಾವುದನ್ನೂ ಆತ ನೋಡಲಾರ....."

"ಏಕೆ? ಏಕೆ ನೋಡಲಾರ?"

ಈ ಪ್ರಶ್ನೆಗಳ ಪರಂಪರೆಯಿಂದ ತನ್ನನ್ನು ಕಾಪಾಡುವಂತೆ ದೇವರನ್ನು ಪ್ರಾರ್ಥಿಸುತ್ತಾ "ಏಕೆಂದರೆ..... ಏಕೆಂದರೆ..... ದೇವರು ಈಗ ನಿದ್ದೆ ಮಾಡುತ್ತಿದ್ದಾನೆ" ಎಂದು ತತ್‌ಕ್ಷಣ ಮನಸ್ಸಿಗೆ ಬಂದ ಉತ್ತರ ಹೇಳಿದಳು.

"ನಿದ್ದೆ ಮಾಡುತ್ತಿದ್ದಾನೆಯೇ?" ವಿಸ್ಮಿತನಾಗಿ ಕೇಳಿದ ವಿನೀತ್..... ಅವನ ಕಂಠದಲ್ಲಿನ ಕೋಪ ಸ್ವಲ್ಪ ಕಡಿಮೆಯಾದುದನ್ನು ಗಮನಿಸಿ ಅವಳಿಗೆ ಸ್ವಲ್ಪ ಧೈರ್ಯ ಬಂತು.

"ಹೌದಣ್ಣಾ, ಇಷ್ಟು ದೊಡ್ಡ ಪ್ರಪಂಚವನ್ನು ಸೃಷ್ಟಿಸಿ, ಸಾವಿರಾರು ವರ್ಷಗಳಿಂದ ನೋಡಿ ನೋಡಿ ಬಳಲಿದ್ದಾನಲ್ಲವೇ? ಆದ್ದರಿಂದ ಆತನಿಗೆ ನಿದ್ದೆ ಬಂದುಬಿಟ್ಟಿದೆ. ಇಲ್ಲದಿದ್ದರೆ ನಮ್ಮೆಲ್ಲರ ಚಿಂತೆಗಳನ್ನೂ ತಿಳಿದುಕೊಳ್ಳುತ್ತಿದ್ದ ಪಾಪ....."

ತಾಯಿಯ ಉತ್ತರ ನ್ಯಾಯವಾಗಿ ಕಾಣಿಸಿತು ವಿನೀತನಿಗೆ. ಅವನಿಗೆ ಸ್ವಲ್ಪ ಸಮಾಧಾನವಾಯಿತು. ಮತ್ತೆ ಕೆಲವು ಕ್ಷಣ ಬಿಟ್ಟು, "ಹಾಗಾದರೆ ಅಮ್ಮಾ, ಆತ ಯಾವಾಗ ನಿದ್ದೆಯಿಂದೇಳುತ್ತಾನೆ?" ಎಂದು ಕೇಳಿದ.

"ಇನ್ನು ಕೆಲವೇ ದಿನಗಳಲ್ಲಿ" ಎಂದು ಹೇಳ ಹೊರಟ ನೀರಜ, ಸ್ವಲ್ಪ ಜಾಣತನ ಉಪಯೋಗಿಸಿ, "ಈಗಾಗಲೇ ಏಳಲಾರ ಮಗೂ, ಇನ್ನೂ ತುಂಬಾ ಕಾಲ ಹಿಡಿಸುತ್ತೆ" ಎಂದಳು.

"ಅಂದರೆ ಎಷ್ಟು ವರ್ಷ?"

"ಇನ್ನೊಂದು ಸಾವಿರ ವರ್ಷ" ನೀರಜ ಬಾಯಿಗೆ ಬಂದ ಸಂಖ್ಯೆಯನ್ನು ಹೇಳಿದ್ದಳು.

ವಿನೀತ ದೈನ್ಯದಿಂದ ತಾಯಿಯ ಕಡೆ ನೋಡಿದ, "ಅದುವರೆಗೂ ರಾಧಳ ತಂದೆ ಜೈಲಿನಲ್ಲಿಯೇ ಇರಬೇಕೆ?" ಎಂದು ಕೇಳಿದ.

ಅವನ ನೋಟದಲ್ಲಿನ ದೈನ್ಯವನ್ನು ಕಂಡು ನೀರಜಳಿಗೆ ದುಃಖವಾಯಿತು. ಮಗನನ್ನು ಎದೆಗವಚಿಕೊಂಡು, "ಹೌದು ಮಗೂ, ಆ ತಂದೆ ನಿದ್ರೆಯಿಂದೆದ್ದು ತನ್ನ ಮಕ್ಕಳನ್ನು ನೋಡಿಕೊಳ್ಳುವವರೆಗೂ ಈ ಪ್ರಪಂಚ ಹೀಗೆಯೇ ಇರುತ್ತದೆ. ರಾಧಾಳ ತಂದೆ ಜೈಲಿನಲ್ಲಿಯೇ ಕೊಳೆಯುತ್ತಾರೆ. ರಾಧಾಳ ತಾಯಿ ಕೆಮ್ಮುತ್ತಲೇ ಇರುತ್ತಾಳೆ. ನಿಮ್ಮ ತಂದೆ ಯುದ್ಧ ಮಾಡುತ್ತಲೇ ಇರುತ್ತಾರೆ" ಎಂದಳು. ಎಷ್ಟು ನಿಗ್ರಹಿಸಿಕೊಂಡರೂ ಅವಳಿಗೂ ದುಃಖ ಉಕ್ಕಿ ಬಂದು ಬಿಕ್ಕಿ ಬಿಕ್ಕಿ ಅತ್ತುಬಿಟ್ಟಳು.

"ಅಳಬೇಡಮ್ಮಾ, ಇನ್ನೇನೂ ಕೇಳೊಲ್ಲ ನಾನು. ಅಳಬೇಡಮ್ಮಾ" ಎಂದು ತಾಯಿಯ ಕಣ್ಣೀರು ಒರೆಸಿದ.

ನೀರಜ ಗಾಢವಾಗಿ ಮಗನನ್ನು ಮುತ್ತಿಟ್ಟು, "ಇನ್ನು ಮಲಗು ಕಂದಾ" ಎಂದು ಮೃದುವಾಗಿ ಬೆನ್ನಿನ ಮೇಲೆ ತಟ್ಟತೊಡಗಿದಳು. ಮನಸ್ಸಿನಲ್ಲಿ ಮಾತ್ರ ಹೀಗೆಂದುಕೊಂಡಳು.

"ನೀನು ಕೇಳಿದೆ ಅಂತಲ್ಲ ಮಗೂ, ಇಷ್ಟು ಮೃದು ಮನಸ್ಸಿನ ನೀನು ಈ ಪ್ರಪಂಚದಲ್ಲಿ ಹೇಗೆ ಬದುಕುತ್ತಿ ಎನ್ನುವುದೇ ನನ್ನ ಚಿಂತೆ."

"ತಾಯಿಯನ್ನು ನೋಯಿಸಬಾರದೆಂದು ಕಣ್ಣು ಮುಚ್ಚಿಕೊಂಡನೇ ಹೊರತು ವಿನೀತನಿಗೆ ನಿದ್ರೆಯೇ ಬರಲಿಲ್ಲ. ರಾತ್ರಿ ಬಹಳ ಹೊತ್ತಿನವರೆಗೂ ಅವನ ತಲೆಯಲ್ಲಿ ನಾನಾ ವಿಧವಾದ ಆಲೋಚನೆಗಳು ಮುತ್ತಿ ಕಾಡಿದವು.

ಒಂದು ವಾರ ಕಳೆದ ನಂತರ ವಿನೀತ ಸ್ಕೂಲಿಗೆ ಹೋದ. ಆ ದಿನ ರಾಧ ಸ್ಕೂಲಿಗೆ ಬಂದಿರಲಿಲ್ಲ. ವಿಚಿತ್ರವೆಂಬಂತೆ ವಿನೀತ ಸಹ ರಾಧಳಂತೆಯೇ ಯಾರೊಂದಿಗೂ ಮಾತನಾಡದೆಯೇ ಇದ್ದುಬಿಟ್ಟ. ಟೀಚರ್ಸ್ ಹೇಳುವ

ಪಾಠಗಳೊಂದೂ ಅವನ ಕಿವಿಯ ಮೇಲೆ ಬೀಳುತ್ತಲೇ ಇರಲಿಲ್ಲ. ಜತೆಯ ಹುಡುಗರು ಅವನ ಕಣ್ಣಿಗೆ ಕಾಣಬರಲಿಲ್ಲ. ಮೊರೆತ, ಒಂದು ದೊಡ್ಡ ಮೊರೆತ ಅವನ ಮನಸ್ಸಿನ ತುಂಬಾ ವ್ಯಾಪಿಸಿತ್ತು.

'ಆ ತಂದೆ ನಿದ್ರೆಯಿಂದೆಚ್ಚೆತ್ತು ತನ್ನ ಮಕ್ಕಳನ್ನು ರಕ್ಷಿಸುವವರೆಗೂ ಈ ಪ್ರಪಂಚ ಹೀಗೆಯೇ ಇರುತ್ತದೆ. ರಾಧಳ ತಂದೆ ಜೈಲಿನಲ್ಲಿಯೇ ಇರುತ್ತಾರೆ. ಅವರಮ್ಮ ಕೆಮ್ಮುತ್ತಲೇ ಇರುತ್ತಾಳೆ. ನಿಮ್ಮ ತಂದೆ ಯುದ್ಧ ಮಾಡುತ್ತಲೇ ಇರುತ್ತಾರೆ' ತಾಯಿ ಅಳುತ್ತಳುತ್ತ ಹೇಳಿದ ಮಾತುಗಳು ಅವನ ಕಿವಿಯಲ್ಲಿ ಗುಂಯ್ಗುಡುತ್ತಲೇ ಇದ್ದವು. ಆ ಮೊರೆತದ ಹಿಂದೆ – ರಾತ್ರಿ ಅವನಿಗೆ ಬಂದ ಒಂದಾನೊಂದು ಆಲೋಚನೆ ಕ್ಷಣಕ್ಷಣಕ್ಕೂ ಬಲವಾಗುತ್ತಾ ಬೆಳೆಯತೊಡಗಿತ್ತು.

ಆರು ಪಿರಿಯಡ್ಸ್ ಅವನಿಗೆ ತಿಳಿಯದಂತೆಯೇ ಕಳೆದುಹೋಗಿದ್ದವು. ಇನ್ನೊಂದು ಪೀರಿಯಡ್ ಮಾತ್ರ ಇತ್ತು. ಇದು ಮಾರಲ್ ಸೈನ್ಸ್ ಪೀರಿಯಡ್.

ಜಯದೇವ್ ಕ್ಲಾಸಿನೊಳಕ್ಕೆ ಹೆಜ್ಜೆಯಿಟ್ಟಾಕ್ಷಣ ವಿನೀತನೊಬ್ಬನನ್ನು ಬಿಟ್ಟು ಮಿಕ್ಕವರೆಲ್ಲಾ ಸಂತೋಷದಿಂದ ವಿಷ್ ಮಾಡಿದರು.

ಆ ಟೀಚರನ್ನು ಕಂಡರೆ ಎಲ್ಲರಿಗೂ ತುಂಬಾ ಇಷ್ಟ. ಮಕ್ಕಳೆಂದರೆ ತುಂಬಾ ಪ್ರೀತಿ ಜಯದೇವ್ ಮಾಸ್ಟರ್‌ಗೆ, ಆತ ಕರುಣಾ ಹೃದಯಿ ಸಹ. ಆದ್ದರಿಂದಲೇ ಮಕ್ಕಳೆಲ್ಲರಿಗೂ ಅವನ ಮೇಲೆ ತುಂಬಾ ಪ್ರೀತಿ. ಅವನ ಕ್ಲಾಸಿಗೆ ಯಾರೂ ತಪ್ಪಿಸಿಕೊಳ್ಳುತ್ತಿರಲಿಲ್ಲ.

ನಗುಮುಖದಿಂದ ಮಕ್ಕಳನ್ನೆಲ್ಲಾ ಒಮ್ಮೆ ಪರಿಶೀಲಿಸಿ ನೋಡಿ ಹೇಳಿದ.

"ಡಿಯರ್ ಪೂವರ್ಸ್ ಆಫ್ ಇಂಡಿಯಾ, ಈ ದಿನ ನಿಮಗೆ ವಿವೇಕಾನಂದರ ಕತೆಯನ್ನು ಹೇಳುತ್ತೇನೆ. ಆತ ಅಷ್ಟು ದೊಡ್ಡ ಮನುಷ್ಯ ಹೇಗಾದ ಮತ್ತು ಹಾಗಾಗಲು ಆತ ಎಷ್ಟು ಪರಿತಪಿಸಿದ ಎಂಬುದನ್ನು ನೀವು ತಿಳಿದುಕೊಳ್ಳಬೇಕು."

ಮಕ್ಕಳೆಲ್ಲಾ ಮಾಸ್ಟರ್ ಹೇಳುವ ಕತೆಯನ್ನು ಕೇಳಲು ಕುತೂಹಲದಿಂದ ಸಿದ್ಧರಾಗಿ ಕುಳಿತರು.

ಆತ ಕಿರುನಗೆ ನಕ್ಕು, "ಹೂಂ, ಮೊದಲು ಒಂದು ಕೆಲಸ ಮಾಡೋಣ. ಏನೆಂದರೆ, ನೀವೆಲ್ಲಾ ದೊಡ್ಡವರಾದ ಮೇಲೆ ಏನಾಗಬೇಕೆಂದಿದ್ದೀರಿ ಎಂಬುದನ್ನು ನನಗೆ ಹೇಳಿ. ಹಾಗಾಗಬೇಕಾದರೆ ಏನು ಮಾಡಬೇಕೆಂಬುದನ್ನು ಈ ಕತೆಯ ಮೂಲಕ ನಾನು ನಿಮಗೆ ಹೇಳುತ್ತೇನೆ" ಎಂದ.

ಕೂಡಲೇ ಒಬ್ಬೊಬ್ಬರಾಗಿ ಎದ್ದು ನಿಂತು ತಾವು ಏನಾಗ ಬಯಸುತ್ತೇವೆಂಬುದನ್ನು ಹೇಳತೊಡಗಿದರು.

"ನಾನು ಡಾಕ್ಟರ್ ಆಗ್ತೀನಿ ಸರ್."

"ನಾನು ಇಂಜಿನೀಯರ್ ಆಗ್ತೀನಿ ಸರ್."

"ನನಗೆ ಸೈಂಟಿಸ್ಟ್ ಆಗಬೇಕೆಂಬಾಸೆ."

"ನಾನು ಸಿನಿಮಾ ಹೀರೋ ಆಗ್ತೀನಿ ಸಾರ್."

"ನಾನು ದೊಡ್ಡ ಲೀಡರ್ ಆಗಬೇಕೂಂತಿದೀನಿ."

"ನಾನು ಪೋಲೀಸ್ ಆಫೀಸರ್ ಆಗ್ತೇನೆ ಸಾರ್."

ಹಠಾತ್ತಾಗಿ ಹೇಳುತ್ತಿದ್ದ ಮಾತುಗಳಿಗೆ ತಡೆಯುಂಟಾಯಿತು. ಕಾರಣ ವಿನೀತನ ಸರದಿ ಬಂದಿತ್ತು. ಆದರೂ ಅವನು ಮೇಲೇಳಲಿಲ್ಲ.

"ವಿನೀತ್" ಜಯದೇವ್ ಮೃದುವಾಗಿ ಕರೆದ. "ನೀನು ದೊಡ್ಡವನಾದ ಮೇಲೆ ಏನಾಗಬೇಕೆಂದಿದೀಯೋ ಹೇಳಲೇ ಇಲ್ಲವಲ್ಲಾ" ಕಿರುನಗೆ ನಗುತ್ತಾ ಕೇಳಿದ ಜಯದೇವ್.

ವಿನೀತ ಒಂದು ಕ್ಷಣ ಮಾತನಾಡಲಿಲ್ಲ. ಅನಂತರ ಹೊಳೆಯುತ್ತಿದ್ದ ಕಣ್ಣುಗಳಿಂದ ಜಯದೇವರ ಕಡೆ ನೋಡಿ, ಪ್ರಪಂಚದಲ್ಲಿನ ಇಚ್ಛಾಶಕ್ತಿಯನ್ನೆಲ್ಲಾ ಕೇಂದ್ರೀಕರಿಸಿ ಹೇಳುತ್ತಿರುವವನಂತೆ ಹೇಳಿದ.

"ನಾನು..... ನಾನು..... ದೊಡ್ಡೋನಾದ ಮೇಲೆ ದೇವರಾಗ್ತೀನಿ ಸಾರ್."

ಗೊಳ್ಳೆಂದು ನಕ್ಕ ಹುಡುಗರು ಜಯದೇವನ ಮುಖ ನೋಡಿ ಮೌನ ವಹಿಸಿದರು.

ಸ್ವಾಮಿ ವಿವೇಕಾನಂದ, ಜಿಡ್ಡು ಕೃಷ್ಣಮೂರ್ತಿ ಮೊದಲಾದ ಮಹನೀಯರ ವೇದಾಂತ ತತ್ವಗಳನ್ನು ಆದ್ಯಂತವಾಗಿ ಅಭ್ಯಸಿಸಿ, ಸ್ವಲ್ಪವನ್ನಾದರೂ ಆಚರಣೆಯಲ್ಲಿ ತರಬೇಕೆಂದು ಪ್ರಯತ್ನಿಸುತ್ತಿದ್ದ ಆ ಮೂವತ್ತು ವರ್ಷ ವಯಸ್ಸಿನ ಮಾರಲ್ ಸೈನ್ಸ್ ಟೀಚರ್‌ನ ಶರೀರ ವಿಚಿತ್ರವಾದ ಪುಳಕಕ್ಕೆ ಒಳಗಾಯಿತು. ಆ ಕೂಡಲೇ ಆತನ ಕಣ್ಣು ಆರ್ದ್ರತೆಯಿಂದ ತೇವಗೊಂಡಿತು.

"ದೇವರು ನಿದ್ದೆ ಹೋಗುತ್ತಿದ್ದಾನಂತಲ್ಲಾ ಸರ್? ಇನ್ನು ಸಾವಿರ ವರ್ಷದವರೆಗೂ ಏಳುವುದಿಲ್ಲವಂತಲ್ಲಾ, ನಮ್ಮ ತಾಯಿ ಹೇಳಿದರು. ಮತ್ತೆ ಅದಕ್ಕೇ ನಾನು ದೊಡ್ಡೋನಾದ ಮೇಲೆ ದೇವರಾಗಿ ಎಲ್ಲರ ಕಷ್ಟಗಳನ್ನೂ ನಿರ್ಮೂಲ ಮಾಡುತ್ತೇನೆ. ಯಾರೂ ನೋವಿನಿಂದ ನರಳದಂತೆ ನೋಡಿಕೊಳ್ಳುತ್ತೇನೆ. ಯಾರನ್ನೂ ಅಳಗೊಡುವುದಿಲ್ಲ....." ಈ ಮಾತುಗಳನ್ನು ಹೇಳುತ್ತಿದ್ದಂತೆಯೇ ಅವನ ಕಣ್ಣಿನಿಂದ ಜಳಜಳ ಕಣ್ಣೀರು ಹರಿಯಿತು.

ಒಂದು ಅಪೂರ್ವವಾದ, ಅಪರೂಪವಾದ ಸತ್ಯವನ್ನು ತಾನು ಎಷ್ಟೋ ವರ್ಷಗಳಿಂದ ಶೋಧನೆ ಮಾಡುತ್ತಿದ್ದ ದೇವರನ್ನು ಮೊದಲ ಬಾರಿಗೆ ಕಂಡಂತಾಯಿತು ಜಯದೇವನಿಗೆ. ವಿನೀತನನ್ನು ಗಾಢವಾಗಿ ತಬ್ಬಿಕೊಂಡು, ಆ ಸ್ಪರ್ಶದಿಂದ ಪರವಶಗೊಂಡು ಉದ್ವೇಗದಿಂದ ಹೇಳಿದ.

"ಆಗ್ತೀಯ ಮಗೂ, ಆಗ್ತೀಯ. ನೀನು ತಪ್ಪದೆ ದೇವರಾಗುತ್ತೀಯ. ನಮ್ಮ ಆಲೋಚನೆಗಳೇ ನಮ್ಮ ಬದುಕನ್ನು ನಿರ್ಮಿಸುತ್ತವೆ. ಇಂತಹ ಭಾವನೆಯನ್ನು ಮನಸ್ಸಿನಲ್ಲಿರಿಸಿಕೊಂಡಿರುವ ನೀನು ದೊಡ್ಡವನಾದ ನಂತರ ನಿಜಕ್ಕೂ ದೇವರೇ ಆಗುತ್ತೀಯ" ಹೀಗೆನ್ನುತ್ತಾ ಅಮಿತಾನಂದದಿಂದ ಅವನ ಮೇಲೆ ಮುತ್ತಿನ ಮಳೆಗರೆದ. ಅವನ ಕಣ್ಣಿನಿಂದ ಆನಂದಬಾಷ್ಪಗಳು ಉದುರುತ್ತಿದ್ದವು.



# ತಾಯಿ - ಮಗು

**ಮೂಲ : ಶ್ರೀ ಕೊಮ್ಮೂರಿ ವೇಣುಗೋಪಾಲ್ ರಾವ್**

ತನ್ನ ಮಗುವನ್ನು – ಆರು ತಿಂಗಳ ಹಸುಗೂಸನ್ನು – ಕೊನೆಯ ಬಾರಿ ಮಮತೆಯಿಂದ ಮುತ್ತಿಟ್ಟುಕೊಂಡಳು ತಾಯಿ.

ಎದೆಗವಚಿಕೊಂಡು ಕಣ್ಣೀರು ಸುರಿಸಿದಳು. ಮನದಲ್ಲಿಯೇ ಆಶೀರ್ವದಿಸಿದಳು. ಮನಸ್ಸಿಲ್ಲದ ಮನಸ್ಸಿನಿಂದ ರಸ್ತೆಯ ಒಂದು ಬದಿಯಲ್ಲಿ ಮಲಗಿಸಿದಳು. ಎಳೆಗಂದನಿಗೆ ಮೈ ಒತ್ತುತ್ತಲ್ಲಾ ಎಂದು ತಾನುಟ್ಟ ಚಿಂದಿ ಸೀರೆಯಿಂದ ಒಂದು ಚೂರು ಬಟ್ಟೆ ಹರಿದು ನೆಲದ ಮೇಲೆ ಹಾಸಿದಳು. ಮಗುವನ್ನು ಮೆಲ್ಲನೆ ಅದರ ಮೇಲೆ ಮಲಗಿಸಿದಳು. ಉಕ್ಕುತ್ತಿದ್ದ ಕಣ್ಣೀರನ್ನು ಒರೆಸಿಕೊಂಡಳು.

ಪುಟ್ಟ ಕಂದನಿಗೆ ಇದಾವುದರ ಪರಿವೆಯೂ ಇಲ್ಲ. ತಾಯಿಯ ಮಡಿಲಲ್ಲಿದ್ದಂತೆ ಹಾಯಾಗಿ ನಿದ್ದೆ ಮಾಡುತ್ತಿತ್ತು. ನಿದ್ದೆಯಲ್ಲಿಯೇ ನಗುತ್ತಿತ್ತು.

ದೂರದಲ್ಲಿ ಜನರ ಓಡಾಟದ ಸಪ್ಪಳ ಅಸ್ಪಷ್ಟವಾಗಿ ಕೇಳಿಸಿತು. ತಾನು ತಪ್ಪು ಮಾಡುತ್ತಿರುವೆನೆಂದು ಅಂದುಕೊಂಡಳು ತಾಯಿ. ಮಗುವಿನ ಮೇಲಿನ ಪ್ರೀತಿಯಿಂದ ತಾನು ಇನ್ನೂ ಅಲ್ಲೇ ಇದ್ದರೆ ತನ್ನ ಆಶೆಯೇನಾಗಬೇಕು? ಅದೇ ತಾನೇ ಎಲ್ಲೆಡೆಯಲ್ಲಿಯೂ ವ್ಯಾಪಿಸುತ್ತಿದ್ದ ಬೆಳಕಿನಲ್ಲಿ, ತುಂಬು ಪ್ರೀತಿಯಿಂದ ಮಗುವನ್ನು ಕೊನೆಯ ಬಾರಿ ನೋಡಿ, ಬೇಗ ಬೇಗ ಪಕ್ಕದಲ್ಲಿಯೇ ಇದ್ದ ಪಾರ್ಕಿನೊಳಗೆ ನಡೆದಳು. ಬಹಳ ದೂರ ಹೋಗಲಿಲ್ಲ. ಮಗು ತನಗೆ ಕಾಣಿಸುವಂತೆ ಪೊದೆಯಾಗಿ ಬೆಳೆದಿರುವ ಗಿಡಗಳ ಮರೆಯಲ್ಲಿ ಅಡಗಿ ಕುಳಿತಳು.

ದುಃಖ ಉಕ್ಕಿ ಬಂತು. ಅಳು ತಡೆಯಲಾಗಲಿಲ್ಲ. ತನ್ನ ಪ್ರೀತಿಯ ಮಗಳು, ತನ್ನ ಬಸಿರಿನಿಂದ ಬಂದ ಚಿನ್ನದ ಬೊಂಬೆ, ತನ್ನ ಪ್ರಾಣ, ಅಂಥ

ಮಗುವನ್ನು ಹೇಗೆ ಬಿಟ್ಟಿರುವುದು? ನಿರ್ದಯೆಯಿಂದ ನೆಲದ ಮೇಲೆ ಮಲಗಿಸಿದೆನಲ್ಲಾ, ಹೇಗೆ ಮನಸು ಬಂತು? ಅಯ್ಯೋ! ತನ್ನ ಹೃದಯ ಪಾಷಾಣ. ತನ್ನ ಕೈಗಳು ಕಬ್ಬಿಣ.

ಅಳುತ್ತಲೇ ಇದ್ದಳು. ತನ್ನ ಮಗುವನ್ನು ತಾನಾಗಿ ದೂರ ಮಾಡಿ ಕೊಳ್ಳುತ್ತಿದ್ದೇನಲ್ಲಾ ಎಂದು ಅತ್ತಳು. ಆದರೆ ಬೇರೆ ದಾರಿಯಾದರೂ ಏನಿತ್ತು? ಮಗು ತನ್ನ ಬಳಿ ಬೆಳೆದರೆ ಕಷ್ಟ ಜೀವನವಲ್ಲದೆ ಬೇರೊಂದಿಲ್ಲ. ತನ್ನ ಮಗು ಕಷ್ಟ ಜೀವನದ ರುಚಿ ಉಣ್ಣಬಾರದು. ಬಂಗಾರದಂಥ ಮಗು. ಗೋಧಿ ಮೈಬಣ್ಣ, ಮುಖದಲ್ಲಿನ ರಾಜಕಳೆ ಇಂಥ ಮಗು ತನ್ನಂಥ ಅನಾಥಳ, ಕೈಲಾಗದವಳ ಕೈಲಿ ಬಿದ್ದು ಹಾಳಾಗಬಾರದು. ಹುಟ್ಟು ದರಿದ್ರಳಾದ ತಾನು ಅಂಥ ಮಗುವನ್ನು ಹೇಗೆ ಬೆಳೆಸಬಲ್ಲಳು? ಅಂಥ ಶಕ್ತಿ ತನಗೆಲ್ಲಿದೆ?

ನಿಜಕ್ಕೂ ಶ್ರೀಮಂತರ ಮನೆಯಲ್ಲಿ ಹುಟ್ಟಬೇಕಾದ ಮಗು ಅದು. ರಾಜಭೋಗಗಳನ್ನು ಅನುಭವಿಸಬೇಕಾದ ಮಗು. ಕರ್ಮವಶಾತ್ ತನ್ನ ಹೊಟ್ಟೆಯಲ್ಲಿ ಹುಟ್ಟಿತ್ತು. ಹುಟ್ಟಿದ್ದು ಅವಳ ತಪ್ಪೇ? ಅಲ್ಲ, ತನ್ನ ತಪ್ಪು ಮೊದಲೇ ಅಲ್ಲ. ಹಾಗೆಂದು ನೋಡನೋಡುತ್ತ ಮಗುವನ್ನು ಬಡ ಜೀವನದಲ್ಲಿ ಬೆಳೆಸುವುದೇ?

ಆತ – ತನ್ನ ಗಂಡ ಏನು ಹೇಳಿದ್ದ? – ಈಗಿಲ್ಲ, ಸತ್ತುಹೋದ. ಹೊಟ್ಟೆಗಿಲ್ಲದೆ ಸತ್ತುಹೋದ. ಸಾಯುವ ಮುಂಚೆ ತನ್ನನ್ನು ತಬ್ಬಿಕೊಂಡು ಅತ್ತ. "ನಾನು ಹೋಗ್ತೀನಿ. ಮಗೂನ ಭಾರ ನಿಂದೇ. ಅವಳನ್ನ ನಮ್ಮ ಹಾಗೆ ಕಷ್ಟಗಳ ಪಾಲು ಮಾಡಬೇಡ. ನಾವು ಪೂರ್ವಜನ್ಮದಲ್ಲಿ ಮಾಡಿದ್ದ ಪುಣ್ಯದಿಂದ ಅವಳು ನಮಗೆ ಮಗುವಾಗಿ ಹುಟ್ಟಿದ್ದಾಳೆ. ನಮ್ಮ ಮನೆಯ ಲಕ್ಷ್ಮಿ ಅವಳು. ಹೇಗೆ ಸಾಕ್ತೀಯೋ..... ನಿನ್ನ ಇಷ್ಟ. ನಿನ್ನ ಸಾಹಸ....." ಎನ್ನುತ್ತಾ ಕಣ್ಣುಮುಚ್ಚಿದ. ಆಗ ಮಗುವಿಗೆ ನಾಲ್ಕು ತಿಂಗಳು.

ಗಂಡ ಹೋಗಿ ಎರಡು ತಿಂಗಳಾಯಿತು. ತನ್ನೊಬ್ಬಳಿಗೆ ಈ ದೊಡ್ಡ ಬಾಧ್ಯತೆ ಒಪ್ಪಿಸಿ ಹೋಗಿಬಿಟ್ಟ. ತಾನಾದರೂ ಏನು ಮಾಡಬಲ್ಲಳು? ಮಗುವನ್ನು ಸುಖವಾಗಿ ಬೆಳೆಸುವುದು ತನ್ನಿಂದ ಸಾಧ್ಯವೆ? ಕೈಲಿ ಮೂರು ಕಾಸಿಲ್ಲ, ಹಿಂದೆ ಮುಂದೆ ದಿಕ್ಕಿಲ್ಲ. ಮಗುವಿನ ತಂದೆ ಇದೇನನ್ನೂ ಆಲೋಚಿಸದೆ, ಅವನ

ಕೈಲಾಗದ್ದನ್ನೆಲ್ಲಾ ತನ್ನ ಮೇಲೆ ಹೇರಿ "ಸುಖವಾಗಿ ಬೆಳಸು" ಅಂದು ಹೋದ. ಅದಕ್ಕೇ, ಸಾಯುವವರಿಗೆ ಬುದ್ಧಿ ಇರೋಲ್ಲ ಅನ್ನೋದು. ಈ ಎರಡು ತಿಂಗಳು ಮಗುವನ್ನು ಹೇಗೆ ಸಾಕಿದಳು? ರಾಜಭೋಗದಲ್ಲಿ ಬೆಳೆಸುವುದು ತನಗೆ ಸಾಧ್ಯವೆ? ಅವನು ಬದುಕಿದ್ದಷ್ಟು ದಿನ ಏನು ಮಾಡಿದ? ಭಿಕ್ಷೆ ಬೇಡಿದ, ತಾನೂ ಅಷ್ಟೇನೆ?..... ಹಾಗಾದರೆ ತಮ್ಮ ಆಶೆ ತೀರೋದು ಹೇಗೆ? ತನ್ನ ಪ್ರೀತಿಯನ್ನು ಕಡಿದುಕೊಂಡರೆ? ಯಾರಾದರೂ ಧನವಂತರ ಕೈಯಲ್ಲಿ ಮಗುವನ್ನು ಅರ್ಪಿಸಿದರೆ? ತನ್ನ ಗತಿ ಏನಾದರೂ ಸರಿ, ಮಗು ಸುಖವಾಗಿರುತ್ತೆ. ತನಗಷ್ಟೇ ಸಾಕು.

ಆದರೆ ದುಡ್ಡಿರೋನು ತನ್ನ ಮಗೂನ ಯಾಕೆ ತಗೊಳ್ತಾನೆ? ತನ್ನನ್ನು ನೋಡಿ, ತನ್ನ ಮಗೂನ ಸಾಕಿಕೊಳ್ಳೋಕೆ ಯಾರಾದರೂ ಏಕೆ ಒಪ್ಪಿಕೊಳ್ತಾರೆ? ಅದಕ್ಕೆ ಒಂದೇ ಉಪಾಯ.

ಅದನ್ನೇ ಮಾಡಿದ್ದಳು ಈಗ. ಹಣವಿದ್ದು ಮಕ್ಕಳಿಲ್ಲದವರು ಪ್ರಪಂಚದಲ್ಲಿ ಎಷ್ಟು ಜನರಿಲ್ಲ! ಅಂಥವರು ಯಾರಾದರೂ ಮಗುವನ್ನು ನೋಡುತ್ತಾರೆ, ಹತ್ತಿರ ಕರೆದುಕೊಳ್ಳುತ್ತಾರೆ. ದೇವರು ಕೊಟ್ಟ ಮಗು ಎಂದು ಸಾಕಿಕೊಳ್ಳುತ್ತಾರೆ. ತನಗಷ್ಟೇ ಸಾಕು. ಏಕೋ ಇದ್ದಕ್ಕಿದ್ದಂತೆ ಅವಳ ಹೃದಯ ನಡುಗಿತು. ಮೊನ್ನೆ..... ಅವಳು..... ಆ ರಾಕ್ಷಸಿ ಏನು ಮಾಡಿದಳು! ಮಗು ಹುಟ್ಟಿದಾಕ್ಷಣ ಕೈ ಮುರಿದಿದ್ದಳು, ಕಾಲು ತಿರುವಿದ್ದಳು. ನೋಡುತ್ತಿದ್ದ ತನಗೆ ತಲೆ ತಿರುಗಿದಂತಾಗಿ ಕಣ್ಣು ಕತ್ತಲೆ ಬಂದಿತ್ತು. ತನ್ನ ಹೆದರಿಕೆ ನೋಡಿ ಅವಳು ನಕ್ಕಿದ್ದಳು. "ಇಲ್ಲದಿದ್ದರೆ ಜೀವನ ನಡೆಯೋದು ಹೇಗೆ?" ಅಂದಿದ್ದಳು. ಅವಳಿಗೆ ಎರಡು ಹೆಣ್ಣು, ಎರಡು ಗಂಡು. ದೊಡ್ಡ ಮಗಳನ್ನು ಬಿಟ್ಟು ಮಿಕ್ಕ ಎಲ್ಲರಿಗೂ ಇದೇ ಗತಿ. ದೊಡ್ಡ ಹುಡುಗಿಗೆ ಎಲ್ಲಾ ಇದ್ದೂ ಏನು ಪ್ರಯೋಜನ? ನಡತೆಯೇ ಸರಿಯಿಲ್ಲ ಛಿ! ಛಿ!

ಕಣ್ಣೀರು ಒರೆಸಿಕೊಂಡಳು. ಈಗಾಗಲೇ ಇಬ್ಬರು ಮೂವರು ಮಗುವನ್ನು ಹಾದುಹೋದರು. ಯಾರೂ ಅತ್ತ ಕಡೆ ದೃಷ್ಟಿ ಹಾಯಿಸಲಿಲ್ಲ. ತಾಯಿ ಆತುರದಿಂದ ರಸ್ತೆಯ ಕಡೆ ದೃಷ್ಟಿ ಹಾಯಿಸಿ ನೋಡತೊಡಗಿದಳು. ದೂರದಲ್ಲಿ ಯಾರೋ ಬರುತ್ತಿದ್ದಾರೆ.

ತನ್ನ ಮಗಳು, ರಾಣಿ ಹಾಯಾಗಿ ಶ್ರೀಮಂತರ ಮನೆ ಮಗುವಾಗಿ, ಬೆಳ್ಳಿ ಬಟ್ಟಲಲ್ಲಿ ಉಣ್ಣುತ್ತಾ.....

ಓ! ಯಾರದು! ಯಾರೋ ಒಬ್ಬ ಮಗುವಿನ ಬಳಿ ಬಂದಿದಾನೆ. ಎವೆಯಿಕ್ಕದೆ ಮಗುವಿನ ಕಡೆ ನೋಡುತ್ತ ನಿಂತಿದ್ದ ಆ ಮನುಷ್ಯನನ್ನು ಪರಿಶೀಲಿಸಿ ನೋಡಿದಳು ತಾಯಿ. ತನ್ನಷ್ಟು ಕೀಳ್ತರಗತಿಯವನಲ್ಲದಿದ್ದರೂ, ಧನವಂತನಲ್ಲ. ಇಂಥವರ ವಿಷಯ ತನಗೂ ಗೊತ್ತು. ಬೆಳಿಗ್ಗೆ ಮನೆ ಬಿಟ್ಟು ಹೋಗುತ್ತಾರೆ. ಹಗಲೆಲ್ಲಾ ಒಂದೇ ಸಮ ಕುಳಿತು ಬರೆಯುತ್ತಾರೆ. ತಪ್ಪು ಕಂಡರೆ ಮೇಲಿನವರಿಂದ ಬೈಗಳು ತಿಂತಾರೆ. ಅಪ್ಪ ಬದುಕಿದ್ದಾಗ ಹೇಳುತ್ತಿದ್ದರು – ಅವರ ಬದುಕು ನಮಗಿಂತ ಹೀನ. ಅವರ ಕಷ್ಟ ಹೇಳತೀರದು. ಆ ಜಾತಿಗೆ ಸೇರಿದ ಮನುಷ್ಯ ಇವನು. ಯಾಕೆ ಹಾಗೆ ನೋಡ್ತಾನೆ ಮುದ್ದಿನ ಮಣೀನ? ತನ್ನ ಪಾಡಿಗೆ ತಾನು ಹೋಗಬಾರದೆ? ಗ್ರಹಚಾರ, ಮಗೂನ ತಗೊಳ್ಳೊಲ್ಲ ತಾನೆ? ಅಯ್ಯೋ! ಮುಂದಕ್ಕೆ ಬಾಗಿದ! ಮಗುವಿನ ಕಡೆ ಕೈ ಚಾಚಿದ, ಇನ್ನೇನು ಗತಿ?

ಕಂಪಿಸುತ್ತಿದ್ದ ಹೃದಯವನ್ನು ಅದುಮಿ ಹಿಡಿದು ಕಾತರದಿಂದ ನೋಡತೊಡಗಿದಳು ತಾಯಿ. ಅವನು ಮಗುವನ್ನು ಮುಟ್ಟಲಿಲ್ಲ. ಒಂದು ಸಲ ಸುತ್ತಲೂ ದೃಷ್ಟಿ ಬೀರಿ ಹಿಂತಿರುಗಿ ಹೊರಟುಹೋದ. "ದಮ್ಮಯ್ಯ" ಎಂದು ನಿಟ್ಟುಸಿರುಬಿಟ್ಟಳು ಅವಳು.

ರಸ್ತೆಯ ಮೇಲೆ ಮನುಷ್ಯರ ಓಡಾಟ ಇನ್ನೂ ಹೆಚ್ಚಾಗಿರಲಿಲ್ಲ. ಆಗಾಗ ಒಬ್ಬಿಬ್ಬರು ಬಂದು ಹೋಗುತ್ತಿದ್ದರು. ಹತ್ತು ನಿಮಿಷ ಕಳೆಯಿತು. ಯಾರೂ ಮಗುವಿನ ಕಡೆ ನೋಡಲಿಲ್ಲ. ತಾಯಿಯ ಹೃದಯ ಡವಡವನೆ ಹೊಡೆದು ಕೊಳ್ಳುತ್ತಿತ್ತು.

"ಯಾರೋ ಬರುತ್ತಿದ್ದಾರೆ" ಅವಳ ಮನಸ್ಸು ಕೂಗಿ ಹೇಳಿತು. ಬಂದ ಮನುಷ್ಯ ನೋಡಲು ಲಂಬೋದರನಂತಿದ್ದ. ಮಗುವಿನ ಕಡೆ ತೀವ್ರ ದೃಷ್ಟಿಯಿಂದ ನೋಡುತ್ತಾ ನಿಂತಿದ್ದ.

ಸಿಲ್ಕು ಅಂಗಿ, ಪಂಚೆ, ಕೈಗೆ ವಾಚು, ಕತ್ತಿನಲ್ಲಿ ಬಂಗಾರದ ಚೈನು, ಅವನ ಶ್ರೀಮಂತಿಕೆಯನ್ನು ಎತ್ತಿ ತೋರಿಸುತ್ತಿದ್ದವು. ಪಾರ್ಕಿನ ಗಿಡಗಳ

ಮರೆಯಿಂದ ಒಂದೇ ಸಮನೆ ನೋಡುತ್ತಿದ್ದ ತಾಯಿಯ ಕಣ್ಣು ಇವೆಲ್ಲವನ್ನೂ ನಿಮಿಷ ಮಾತ್ರದಲ್ಲಿ ಗ್ರಹಿಸಿತು. ಅವನು ಭಾರಿ ಶ್ರೀಮಂತನೆಂಬುದರಲ್ಲಿ ಸಂದೇಹವಿರಲಿಲ್ಲ. ದೊಡ್ಡ ಮನೆ, ಆಳುಕಾಳು, ಸ್ವಂತ ಕಾರು ಎಲ್ಲಾ ಇರುತ್ತೆ. ಮಗು ಅವನ ಬಳಿ ಬೆಳೆಯುವಂತಾದರೆ..... ಓಹ್..... ಅದಕ್ಕಿಂತ ಅದೃಷ್ಟ ಇನ್ನೇನಿದೆ?

ಬಾಗಿ ನೋಡುತ್ತಿದ್ದಾನೆ. ಓ, ಮಗುವನ್ನು ಎತ್ತಿಕೊಂಡಿದಾನೆ. ಓ ದೇವರೆ! ಅವನಿಗೆ ಮಕ್ಕಳಿಲ್ಲದೆ ಇರಬಾರದೆ? ಹಾಲುಗೆನ್ನೆಯ ಮೇಲೆ ದಟ್ಟಮೀಸೆ ಚುಚ್ಚಿಕೊಳ್ಳುವಂತೆ ಮುತ್ತಿಟ್ಟುಕೊಳ್ಳುತ್ತಿದಾನಲ್ಲ! ಎಳೆಗಂದನಿಗೆ ಚುಚ್ಚುವುದಿಲ್ಲವೆ?..... ಆದರೂ ಪರವಾಗಿಲ್ಲ. ಅವನು ಮಗುವನ್ನು ತೆಗೆದುಕೊಂಡು ಹೋದರೆ ಸಾಕು. ದೇವರೆ ನಿನ್ನ ಕರುಣೆಗೆ ಸಹಸ್ರ ಪ್ರಣಾಮ.

ಆತ ಮಗುವನ್ನೆತ್ತಿಕೊಂಡು ಎದೆಗವಚಿಕೊಂಡು, ಎರಡು ಹೆಜ್ಜೆ ಮುಂದಿಟ್ಟ. ತಾಯಿ ಆನಂದದಿಂದ ಕಣ್ಣು ಮುಚ್ಚಿಕೊಂಡು ಮನಸ್ಸಿನಲ್ಲಿಯೇ ಮಗುವನ್ನು ಆಶೀರ್ವದಿಸತೊಡಗಿದಳು.

"ಮಗಳೇ – ರಾಜಭೋಗಗಳನ್ನನುಭವಿಸು. ಬೆಳ್ಳಿ ತಟ್ಟೆಯಲ್ಲಿ ಹಾಲು – ಅನ್ನ ಉಣ್ಣು. ಒಳ್ಳೊಳ್ಳೆ ಬಟ್ಟೆ ಉಡು. ರಾಣಿಯಂತೆ ಬೆಳೆ....."

ಕಣ್ಣು ತೆರೆದಳು. ಅದೇನು..... ಆತ ಅಲ್ಲಿಯೇ ನಿಂತುಬಿಟ್ಟಿದಾನೆ. ಸುತ್ತಲೂ ನೋಡುತ್ತಿದಾನಲ್ಲ, ಯಾಕೆ? ಅಗೋ ಮತ್ತೆ ಮಗುವನ್ನು ಮುತ್ತಿಟ್ಟುಕೊಳ್ಳುತ್ತಿದ್ದಾನೆ. ಐದು ನಿಮಿಷ ಸ್ತಬ್ಧನಾಗಿ ನಿಂತುಬಿಟ್ಟ. ಮಗುವನ್ನು ಕರೆದುಕೊಳ್ಳಲೇ ಬೇಡವೆ ಎಂಬ ಆಲೋಚನೆ ಅವನ ಕಣ್ಣುಗಳಲ್ಲಿ ಸ್ಪಷ್ಟವಾಗಿ ಕಾಣುತ್ತಿತ್ತು.

ಡವಡವನೆ ಬಡಿದುಕೊಳ್ಳುತ್ತಿದ್ದ ಎದೆಯನ್ನು ಅಂಗೈಯಲ್ಲಿ ಒತ್ತಿ ಹಿಡಿದು ಕಾತರದಿಂದ ದಿಟ್ಟಿಸುತ್ತಿದ್ದಳು ತಾಯಿ. ಕೊನೆಗೆ ಆತ ಮಗುವನ್ನು ಮೊದಲಿದ್ದ ಸ್ಥಳದಲ್ಲಿಯೆ ಮಲಗಿಸಿದ. ಹಾಗೇಕೆ ತೀರ್ಮಾನಿಸಿದನೋ ತನಗೇನು ಗೊತ್ತು? ಅವಳ ಕಣ್ಣು ತೇವಗೊಂಡಿತು. ಅವನ ಪಾಡಿಗೆ ಅವನು ಹೊರಟು ಹೋಗುತ್ತಿದ್ದಾನೆ ಯಾಕೆ? ತನ್ನ ಮಗು ಏತರದಲ್ಲಿ ಕಡಿಮೆಯಾಗಿದೆ?

ತಟ್ಟನೆ ಓಡಿಹೋಗಿ ಅವನ ಕಾಲ ಮೇಲೆ ಬಿದ್ದು ಮಗುವನ್ನು ತೆಗೆದುಕೋ ಎಂದು ಬೇಡಿಕೊಂಡರೆ?..... ಉಹುಂ, ಪ್ರಯೋಜನವಿಲ್ಲ. ತಾನು ಹೇಳಿದ ಮಾತ್ರಕ್ಕೆ ಅವನೇಕೆ ಕರೆದುಕೊಳ್ಳುತ್ತಾನೆ?

ಮಗುವನ್ನು ಮಲಗಿಸಿ, ಬಿಡಲಾರದೆ ಹಿಂತಿರುಗಿ ನೋಡನೋಡುತ್ತಾ ಹೊರಟು ಹೋದ ಆತ. ತಾಯಿಯ ಕಣ್ಣೀರಿನಿಂದ ಗಿಡದ ಎಲೆಗಳು ಒದ್ದೆಯಾದವು.

ತನ್ನ ಅದೃಷ್ಟ ಚೆನ್ನಾಗಿದ್ದರೆ ಮತ್ತೆ ಯಾರಾದರೂ ಬರಬಹುದು. ಆಶೆಯನ್ನು ಬಿಡಲಾರದೆ ಕಣ್ಣಿಗೆ ಕೈಮರೆ ಮಾಡಿಕೊಂಡು, ದೂರದಲ್ಲಿ ಯಾರಾದರೂ ಬರುತ್ತಿದಾರೇನೋ ಎಂದು ನೋಡತೊಡಗಿದಳು. ಯಾರೋ ಇಬ್ಬರು ಬರುತ್ತಿದ್ದಾರೆ. ಸಾದಾ ಮನುಷ್ಯರು. ಮಗು ಇರುವ ಕಡೆಗೇ ನಡೆದು ಬರುತ್ತಿದ್ದಾರೆ. ಅವರಲ್ಲೊಬ್ಬ ಮಗುವನ್ನು ನೋಡಿದಂತಿದೆ. ಪಕ್ಕದಲ್ಲಿರುವವನಿಗೆ ಹೇಳುತ್ತಿದ್ದಾನೆ. ಇಬ್ಬರೂ ಬಂದು ಮಗುವಿಗೆ ಸ್ವಲ್ಪ ದೂರದಲ್ಲಿ ನಿಂತು ಬಾಯಿಗೆ ಬಂದಂತೆ ಮಾತಾಡತೊಡಗಿದರು.

"ಕಾಲ ಹೇಗಿದೆ ನೋಡೋ. ಯಾವ್ಳೋಳೋ ಎಷ್ಟು ಕಲ್ಲೆದೆಯವಳಾಗಿದ್ದರೆ ಹೀಗೆ ಮಗೂನ ಬೀದಿಯಲ್ಲಿ ಬಿಸಾಡುತ್ತಾಳೆ!"

"ಯಾರಿಗೆ ಹುಟ್ಟಿದ ಮಗೂನೋ!"

"ಯಾರಿಗೇನು? ಒಬ್ಬ ಹೆಂಗಸಿಗೆ."

"ಮಕ್ಕಳು ಹೆಂಗಸಿಗೆ ಹುಟ್ಟುತ್ತಾರೇಂತ ನನಗೂ ಗೊತ್ತು. ನಾನು ಕೇಳೋದೇನೂಂದ್ರೆ, ಗಂಡನಿಗೆ ಹುಟ್ಟಿದ ಮಗುವಾದರೆ, ಹೀಗೆ ಬಿಸಾಡಬೇಕಾದ ಅವಶ್ಯಕತೆಯಿಲ್ಲವಲ್ಲಾ."

"ನಿಜ. ಎಲ್ಲೋ ಯಾವನ ಜತೆಗೂ ಸ್ನೇಹ ಮಾಡಿರ್ತಾಳೆ. ಫಲ ಅನುಭೋಗಿಸೋಕಿರಬೇಡವಾ? ಬೀದೀಲಿ ಬಿಸಾಕಿ ಕೈ ತೊಳಕೊಂಡಿದ್ದಾಳೆ."

"ಮಗು ಎಷ್ಟು ಮುದ್ದಾಗಿದೆಯೋ ನೋಡಿದ್ಯಾ. ಹ್ಯಾಗೆ ಮನಸು ಬಂತೋ ತಾಯಿ ಮುಂಡೇದಕ್ಕೆ?"

"ಎಲ್ಲ್ಯಾರ ಹಾಳಾಗಲೀ, ನಮಗ್ಯಾಕೆ ಬೇಕು? ಬಾ ಹೋಗೋಣ. ಇಲ್ಲೇ ನಿಂತಿದ್ದರೆ ನೋಡಿದೋರು ಏನಾರ ಅಂದ್ಕೋಬೋದು."

ಇಬ್ಬರು ಮುಂದೆ ಸಾಗಿದರು.

ಬಿಸಿಲು ಮಗುವಿನ ಮೇಲೆ ಬೀಳತೊಡಗಿತು. ಕಣ್ಣಿನ ಮೇಲೆ ಸೂರ್ಯನ ಪ್ರಕಾಶ ಬಿದ್ದೊಡನೆ ಮಗು ಎಚ್ಚೆತ್ತು ಅಳತೊಡಗಿತು. ತಾಯಿಯ ಕರುಳು ಕಿವಿಚಿದಂತಾಯಿತು. ಎಷ್ಟೋ ಜನ ಅದೇ ದಾರಿಯಲ್ಲಿ ಬಂದು ಹೋಗುತ್ತಿದ್ದಾರೆ. ಯಾರೂ ಮಗುವಿನ ಕಡೆ ನೋಡಲು ಸಹ ಇಲ್ಲ. ಅಯ್ಯೋ, ಮಗುವಿಗೆ ವೃಥಾ ಹಿಂಸೆ ಕೊಡುತ್ತಿದ್ದೇನಲ್ಲಾ! ತಾನು ತಾಯಿಯಲ್ಲ, ರಾಕ್ಷಸಿ.

ಮಗುವಿನ ಅಳು ಹೆಚ್ಚಾಯಿತು. ಇನ್ನು ಸಹಿಸಲು ಸಾಧ್ಯವಿಲ್ಲ. ಏನಾದರಾಗಲಿ, ತನ್ನ ಮಗುವನ್ನು ಎತ್ತಿಕೊಂಡು ಎದೆಗವಚಿಕೊಳ್ಳದೆ ಇರಲು ಇನ್ನು ಸಾಧ್ಯವೇ ಇಲ್ಲ. ಮೇಲಕ್ಕೆದ್ದಳು. ಎರಡು ಹೆಜ್ಜೆ ಮುಂದಿಟ್ಟಳು.

ಹೆಜ್ಜೆ ತಡೆಯಿತು. ತಟ್ಟೆಂದು ನಿಂತುಬಿಟ್ಟಳು. ಯಾರೊ ಒಬ್ಬ ಮಗುವಿನ ಬಳಿ ನಿಂತಿದ್ದಾನೆ. ಮಗುವನ್ನೆ ದಿಟ್ಟಿಸಿ ನೋಡುತ್ತಿದ್ದಾನೆ. ಅವನನ್ನು ಪರಿಶೀಲಿಸಿ ನೋಡಬೇಕಾಗಿಯೇ ಇರಲಿಲ್ಲ. ಅವಳ ಎದೆ ಬಡಿದಂತಾಯಿತು. ಅವನೂ ತನ್ನಂಥವನೆ – ಭಿಕ್ಷುಕ. ಭಿಕ್ಷುಕ ಮಗುವನ್ನು ಕೈಗೆತ್ತಿಕೊಂಡ. ಮಗು ಅವನ ಮುಖ ನೋಡಿ ಭಯದಿಂದಲೋ ಮತ್ತಾವ ಕಾರಣದಿಂದಲೋ ಅಳು ನಿಲ್ಲಿಸಿತು. ಮಗುವನ್ನು ಭುಜದ ಮೇಲೆ ಹಾಕಿಕೊಂಡ ಮುಂದೆ ಸಾಗಿದ ಅವನು.

ಒಂದು ಕ್ಷಣ ಭಯದಿಂದಲೂ ಉದ್ರೇಕದಿಂದಲೂ ತಾಯಿಯ ಹೃದಯ ಕಂಪಿಸಿತು.

ಎಳೆಯ ಹಸುಗೂಸನ್ನು – ಚಿನ್ನದ ಪುತ್ಥಳಿಯನ್ನು ಧೈರ್ಯದಿಂದ ಹಾದಿಯಲ್ಲಿ ಮಲಗಿಸಿದ ತನ್ನ ಅಭಿಲಾಷೆ, ಆಶೆಗಳೇನು? ಎಲ್ಲಾ ವ್ಯರ್ಥವಾದಂತೆ ಆಯಿತೆ? ತನ್ನ ಮಗು ಶ್ರೀಮಂತರ ಮನೆಯಲ್ಲಿ ಸುಪ್ಪತ್ತಿಗೆಯ ಮೇಲೆ ಮಲಗಬೇಕೆಂಬ ತನ್ನ ಆಶೆ ಹಾಳಾಯಿತೆ? ಮತ್ತೆ ಯಾರ ಕೈಯಲ್ಲಾದರೂ ಬೀಳದೆ ಈ ಹುಟ್ಟು ದರಿದ್ರನ ಪಾಲಾಯಿತೆ ಮಗು? ತಾನು ನೋಡ

ನೋಡುತ್ತಿದ್ದಂತೆ ಮಗನನ್ನು ಇಂಥವನ ಕೈಲಿ ಬೀಳಗೊಟ್ಟೆನಲ್ಲಾ! ತನಗಿಂತ ಚೆನ್ನಾಗಿ ಅವನೇನು ಪೋಷಣೆ ಮಾಡಬಲ್ಲ? ತನ್ನಲ್ಲಿಲ್ಲದ ಯಾವ ಸುಖ ಸೌಭಾಗ್ಯ ಆ ನಿರ್ಭಾಗ್ಯನಿಗಿದೆ?

ಈಗೇನು ಮಾಡಬೇಕು? ಅವನಿಂದ ಮಗುವನ್ನು ಪಡೆಯುವುದು ಹೇಗೆ? ಕೇಳಿದರೆ ಕೊಡುತ್ತಾನೆಯೆ? ಯಾವ ಮುಖ ಇಟ್ಟುಕೊಂಡು ಕೇಳುವುದು? ನಿನ್ನದೇ ಅಂತ ಏನು ನಂಬಿಕೆ? ಅಂದರೆ? ತಾನೇನು ಹೇಳಬಲ್ಲಳು? ಕೈ ಕೈ ಹಿಸುಕಿಕೊಳ್ಳತೊಡಗಿದಳು ತಾಯಿ.

ಈಗೇನು ಮಾಡಬೇಕು? ಅವನ ಹಿಂದೆಯೇ ಹೋದರೆ ಸರಿ. ಅವನ ಮನೆ ತಿಳಿದರೆ..... ಅನಂತರ..... ಏನೋ ಗೊತ್ತಿಲ್ಲ. ಏನಾದರೂ ಮಾಡಬಹುದು. ಮುಂದೆ ಅವನು ಕಣ್ಮರೆಯಾಗದಂತೆ ನೋಡಿಕೊಳ್ಳಬೇಕು ಸರಿ. ಅವನನ್ನೇ ಅನುಸರಿಸುತ್ತಾ, ಓಡುತ್ತಾ ಹೆಜ್ಜೆ ಹಾಕತೊಡಗಿದಳು.

ಭಿಕ್ಷುಕನ ಹಿಂದೆಯೇ ಅವನಿಗೆ ತಿಳಿಯದಂತೆ ನಡೆಯತೊಡಗಿದಳು.

ಬಹಳ ದೂರ ನಡೆದು, ಒಂದು ಚಿಕ್ಕ ಗುಡಿಸಿಲನ್ನು ಹೊಕ್ಕ ಭಿಕ್ಷುಕ. ಗಟ್ಟಿಯಾಗಿ ಅಳಬೇಕೆನಿಸಿತು ತಾಯಿಗೆ. ಮಗು ಹಸಿದಿರುತ್ತೆ. ಈ ಗುಡಿಸಿಲಿನಲ್ಲಿ ಹಾಲೆಲ್ಲಿ ಬರಬೇಕು?

"ಮಗು ನನ್ನದು, ಕೊಡು" ಅಂದರೆ ಊಹು. ದಬಾಯಿಸುತ್ತಾನೆ, ಆಚೆ ತಳ್ಳುತ್ತಾನೆ. ಪ್ರಯೋಜನವಿಲ್ಲ.

ಇನ್ನು ಒಂದೇ ಉಪಾಯ. ಅವನು ಆಚೆ ಹೋಗುವವರೆಗೂ ಸುಮ್ಮನಿರೋದು. ಯಾರೂ ಇಲ್ಲದ ಸಮಯದಲ್ಲಿ ಮಗುವನ್ನೆತ್ತಿಕೊಂಡು ಓಡಿಹೋಗೋದು ಅಷ್ಟೆ. ಅದೇ ಸರಿ. ಬೇರೆ ಮಾರ್ಗವೇ ಇಲ್ಲ.

ಸಾಯಂಕಾಲ ಆ ಗುಡಿಸಿಲಿನ ಅಕ್ಕ – ಪಕ್ಕದಲ್ಲೇ ತಿರುಗಾಡತೊಡಗಿದಳು. ಅವನು ಮನೆಯಲ್ಲಿದ್ದಂತಿಲ್ಲ. ಅವನ ಹೆಂಡತಿ ಒಳಗಿದ್ದಂತಿದೆ. ಅವಳು ಆಚೆ ಬರೋವರೆಗೂ ಕಾಯಬೇಕು. ತಾಯಿಯ ಮನಸು ಮಗುವಿಗಾಗಿ ಒದ್ದಾಡುತ್ತಿತ್ತು. ಬೆಳಗಿನಿಂದ ಹೇಗೆ ಕಾಲ ಕಳೆದಳೋ ದೇವರಿಗೇ ಗೊತ್ತು.

ಭಿಕ್ಷುಕನ ಹೆಂಡತಿ ಏನೋ ಕೆಲಸದ ಮೇಲೆ ಹೊರಟುಹೋದಳು. ಹೇಗಾದರೂ ಮನೆಯೊಳಕ್ಕೆ ಹೋಗಬೇಕು. ಮಗುವನ್ನು ಎತ್ತಿಕೊಂಡು ಓಡಿಹೋಗಬೇಕು.

ಒಂದು ಸಲ ಸುತ್ತಲೂ ನೋಡಿದಳು. ಯಾರೂ ಕಾಣಿಸಲಿಲ್ಲ. ಒಂದೇ ಉಸಿರಿನಲ್ಲಿ, ಓಡುತ್ತಾ ಗುಡಿಸಿಲಿನೊಳಕ್ಕೆ ನುಗ್ಗಿದಳು.

ಒಳಗೆ ದೀಪ ಕುರುಡು ಬೆಳಕು ಚೆಲ್ಲುತ್ತಿತ್ತು. ಮಗು ಎಲ್ಲಿ?..... ಪಕ್ಕದಲ್ಲೆ ಹರಕು ಚಾಪೆಯ ಮೇಲೆ ಮಲಗಿದ್ದ ಮಗು, ಅವಳ ದೃಷ್ಟಿಯನ್ನು ಸೆಳೆಯಿತು.

ಆನಂದದಿಂದ ಪರವಶವಾಯಿತು ತಾಯಿಯ ಹೃದಯ. ಮಗು! ತನ್ನ ಮಗು. ಸಂತೋಷಾತಿರೇಕದಿಂದ ಮುಂದಕ್ಕೆ ಬಾಗಿದಳು. ತನ್ನ ಮಗುವನ್ನು, (ಚಿನ್ನದ ಬೊಂಬೆಯನ್ನು) ರಾಜಭೋಗದಲ್ಲಿ ಬೆಳೆಯಲೆಂದಾಶಿಸಿದ ಮುದ್ದುಮಣಿಯನ್ನು – ಅದೃಷ್ಟಹೀನಳಾಗಿ ಭಿಕ್ಷುಕನ ಕೈಯಲ್ಲಿ ಸಿಕ್ಕಿಬಿದ್ದ ತನ್ನ ಮಗುವನ್ನು ಎತ್ತಿಕೊಳ್ಳಲು ಮುಂದೆ ಬಾಗಿದಳು.

ಕಿಟ್ಟೆಂದು ಕಿರುಚಿದಳು. ತಲೆ ತಿರುಗಿದಂತಾಯಿತು. ಕುರುಡು ದೀಪದ ಮಸುಕು ಬೆಳಕು, ಮಗುವಿನ ಮೇಲೆ ಅಸ್ಪಷ್ಟವಾಗಿ ಬೀಳುತ್ತಿತ್ತು.

ತನ್ನ ಮುದ್ದು ಮಗುವಿನ ಕಣ್ಣುಗಳೆಲ್ಲಿ? ಅಯ್ಯೋ! ತನ್ನ ಮಗು ಕುರುಡಿಯೇ?

ಕಾಲು! ಅದೇನದು! ಕಾಲು ವಕ್ರವಾಗಿ ತಿರುಗಿದೆಯಲ್ಲಾ! ತನ್ನ ಮಗು ಕುಂಟಿಯೇ?

ಕುಳಿತಲ್ಲಿಯೇ ಮೂರ್ಛಿತಳಾಗಿ ಬಿದ್ದಳು ತಾಯಿ.



# ಮೇರಿ

ಮೂಲ : ಶ್ರೀಮತಿ ಪಿ. ವತ್ಸಲ

**ಸು**ಮಂಗಳ ಆಫೀಸಿನಲ್ಲಿ ಎರಡು ತಿಂಗಳ ರಜಾ ಬೇಕೆಂದು ಕೇಳಿದ ಕೂಡಲೇ ಆಫೀಸರ್ ಆಶ್ಚರ್ಯದಿಂದ ಹುಬ್ಬು ಕುಣಿಸಿ, ಏಕೆ ಎಂಬಂತೆ ಅವಳ ಕಡೆ ನೋಡಿದ. ಅವಳು ಈಗಾಗಲೇ ತನ್ನ ರಜ ಎಲ್ಲವನ್ನೂ ಬಳಸಿಕೊಂಡಿದ್ದಳು. ಆದರೆ ಆ ಆಫೀಸರ್ ಒಳ್ಳೆಯವನಾದ್ದರಿಂದ ಕಾರಣ ತಿಳಿದ ನಂತರ ಅನುನಯದಿಂದ ಕೇಳಿದ.

"ನೋವು ತುಂಬಾ ಹೆಚ್ಚಾಗಿದೆಯೇ? ಇನ್ನೂ ಆಸ್ಪತ್ರೆಯಲ್ಲಿ ಅಡ್ಮಿಟ್ ಮಾಡಲಿಲ್ಲವೇ?"

"ಹಾಂ, ನೋವು ತುಂಬಾ ಹೆಚ್ಚಾಗಿಯೇ ಇದೆ ಸಾರ್. ಇಂಜಕ್ಷನ್ ಕೊಟ್ಟನಂತರ ಸ್ವಲ್ಪ ಶಮನವಾದಂತಿದೆ"

"ಎಲ್ಲಿ ಸೇರಿಸಿದೀರಿ?"

ಆಕೆ ಹೇಳಿದಳು.

ಆ ನರ್ಸಿಂಗ್ ಹೋಮಿನ ಹೆಸರು ಕೇಳಿ ಅವನು ಆಶ್ಚರ್ಯದಿಂದ ದಂಗಾದ. ಊರಿಗೆ ಸ್ವಲ್ಪ ದೂರದಲ್ಲಿದ್ದು, ಶ್ರೀಮಂತರು ಮಾತ್ರವೇ ಆದರಿಸುವ ಒಂದು ಹೆಸರಾಂತ ಪ್ರೈವೇಟ್ ಆಸ್ಪತ್ರೆ ಅದು. ಸುಮಂಗಳೆಯ ಆರ್ಥಿಕ ಪರಿಸ್ಥಿತಿಯ ಪ್ರಕಾರ ನೋಡಿದರೆ ಆ ಆಸ್ಪತ್ರೆಯಲ್ಲಿ ಸೇರಿಸಿರುವುದು ಸ್ವಲ್ಪ ಅಸಹಜವಾಗಿಯೇ ಕಾಣುತ್ತಿತ್ತು. ಆದರೆ ಸುಮಂಗಳ ಏಕೆ ಹಾಗೆ ಮಾಡಿದಳೆಂಬುದು ಅರ್ಥವಾಗಿ ಆತನ ಮುಖದ ಮೇಲೆ ಮಂದಹಾಸ ಮೂಡಿತು.

"ನೋವಿನಿಂದ ಒದ್ದಾಡುತ್ತಿದ್ದರೆ ಏನು ಮಾಡಬೇಕೆಂದೇ ತೋಚಲಿಲ್ಲ ನನಗೆ. ಇನ್ನು ಗವರ್ನ್‌ಮೆಂಟ್ ಆಸ್ಪತ್ರೆಯಲ್ಲಿ ಅಡ್ಮಿಟ್ ಮಾಡೋದು ಅಂದರೆ ತುಂಬಾ ನಿಧಾನ ಆಗುತ್ತೆ. ಆದ್ದರಿಂದ ಹಾಗೆ ಮಾಡಬೇಕಾಯಿತು."

"ಹೌದು ಮತ್ತೆ! ಇಂತಹ ಪರಿಸ್ಥಿತಿಯಲ್ಲಿ ನಿರ್ಣಯ ತಗೊಳ್ಳೋದು ಕಷ್ಟಾನೇ! ಯಾರಾದರೂ, ಏನಾದರೂ ಸಲಹೆ ಹೇಳಿದರೂ ತೋಚೋದು ಕಷ್ಟವಾಗುತ್ತೆ."

ಇಷ್ಟರಲ್ಲಿ ಸೆಕ್ಷನ್‌ನಲ್ಲಿ ಕೆಲಸ ಮಾಡುತ್ತಿದ್ದವರೆಲ್ಲಾ ಅವಳ ಸುತ್ತಲೂ ಮುತ್ತಿಕೊಂಡರು. ಚಂದ್ರಪಾಲ್‌ಗೆ ಸಂಭವಿಸಿದ ಪ್ರಮಾದ ಪರಿಸ್ಥಿತಿಯನ್ನು ಕುರಿತು ಎಲ್ಲರಿಗೂ ಆಗಲೇ ತಿಳಿದತ್ತು. ಅವಳ ಹತ್ತಿರದ ಗೆಳತಿ ಮೆಲ್ಲನೆ ಕೇಳಿದಳು.

"ಬೊಂಬಾಯಿ ಟೂರ್‌ನಿಂದ ಯಾವಾಗ ಬಂದೆ?"

"ನಿನ್ನೆ ರಾತ್ರಿ ತಾನೇ ಬಂದೆ. ಬೆಳಿಗ್ಗೆ ಏಳುತ್ತಿದ್ದಂತೆಯೇ ಹೀಗಾಗಿ ಬಿಟ್ಟಿತು."

"ಏನಾಯಿತು?"

"ಸೊಂಟ ನೋವು. ಸ್ವಲ್ಪ ಕದಲಿದರೂ ಸಾಕು, ವಿಪರೀತ ನೋವು. ವಿಲವಿಲನೆ ಒದ್ದಾಡಿಬಿಟ್ಟರು....."

"ಹೂಂ..... ನಂತರ?"

"ಆಸ್ಪತ್ರೆಯಲ್ಲಿ ಅಡ್ಮಿಟ್ ಮಾಡಿ, ರಜಾ ಹಾಕೋಣ ಅಂತ ನಾನಿಲ್ಲಿಗೆ ಬಂದೆ. ಹುಡುಗ ಬಾಲನ್ ಅವರ ಜತೆಗಿದಾನೆ....."

"ಡಾಕ್ಟರ್ ಏನಂತಾರೆ?"

"ಡಿಸ್ಕ್ ಜಾರಿದೆಯಂತೆ."

ಎಲ್ಲರೂ ನಿಟ್ಟುಸಿರುಬಿಟ್ಟರು.

ಅವಳಿಗೆ ಸಮಾಧಾನ ಹೇಳುವವರಂತೆ ಇಂತಹುದೇ ತಮಗೆ ತಿಳಿದ ಕೇಸುಗಳ ಬಗ್ಗೆ ಹೇಳುತ್ತಾ ಅವರವರಿಗೆ ತೋಚಿದ ಸಲಹೆ ಕೊಟ್ಟರು.

"ಸ್ಲಿಪ್ ಡಿಸ್ಕ್ ಅನ್ನೋದು ಈಗ ಸರ್ವೇ ಸಾಮಾನ್ಯವಾಗಿಬಿಟ್ಟಿದೆ. ಹೆಂಗಸರು ಗಂಡಸರು ಅನ್ನೋ ವ್ಯತ್ಯಾಸವಿಲ್ಲದೆ ಎಲ್ಲರೂ ಸ್ಲಿಪ್ ಡಿಸ್ಕ್‌ಗೆ ಗುರಿಯಾಗ್ತಾ ಇದಾರೆ. ಹಾಗಂತ ನಿರ್ಲಕ್ಷ್ಯ ಮಾಡಬಾರದು ಬಿಡು. ಹುಷಾರಾಗಿ ನೋಡಿಕೋಬೇಕು. ಒಂದು ಸಲ ಹೀಗಾಯಿತು ಅಂದ ಮೇಲೆ ಇನ್ನು ಚಂದ್ರಪಾಲ್‌ನ ಚುರುಕುತನಕ್ಕೆ ಪೆಟ್ಟು ಬಿದ್ದಂತೆಯೇ ಲೆಕ್ಕ. ಆದರೆ ಏನು ಮಾಡಲು ಸಾಧ್ಯ? ಈ ರೋಗ ಅನ್ನೋದು ಹೇಳಿ ಕೇಳಿ ಬರುತ್ತದೆಯೇ?"

ಸುಮಂಗಳೆಗೆ ಇವರ ಮಾತನ್ನು ಕೇಳುವಷ್ಟು ತಾಳ್ಮೆ, ಸಮಯ ಎರಡೂ ಇರಲಿಲ್ಲ. ಕೂಡಲೇ ನರ್ಸಿಂಗ್ ಹೋಮಿಗೆ ಹೊರಟುಬಿಡಬೇಕೆನ್ನುವ ಆತುರದಲ್ಲಿದ್ದಳು. ಚಂದ್ರಪಾಲ್‌ನ ಸ್ನೇಹಿತರು ಅವನನ್ನು ನೋಡುವ ಸಲುವಾಗಿ ಬರುವುದರೊಳಗಾಗಿಯೇ ತಾನಲ್ಲಿಗೆ ಹೋಗಬೇಕು..... ಆ ಗುಂಪಿನಲ್ಲಿ ಮೇರಿ ಸಹ ಇರಬಹುದು.....

ಯಾರೋ ಒಬ್ಬರು ರಜಾ ಚೀಟಿ ಬರೆದುಕೊಟ್ಟರು. ಅವಳು ಸಹಿ ಹಾಕಿದಳು. ಆಫೀಸರ್ ಎರಡು ತಿಂಗಳ ರಜಾ ಸ್ಯಾಂಕ್ಷನ್ ಮಾಡಿದರು.

ಸುಮಂಗಳೆಯ ಕಣ್ಣೀರು, ಅಷ್ಟರಲ್ಲಿಯೇ ಅದನ್ನು ಕಾಣದಂತೆ ನುಂಗಿಕೊಂಡು ಬೀರಿದ ಮುಗುಳ್ನಗೆ ಎಲ್ಲರಿಗೂ ಆಶ್ಚರ್ಯವನ್ನುಂಟು ಮಾಡಿತು. ಸುಮಂಗಳೆ ಮತ್ತು ಚಂದ್ರಪಾಲ್ ಅವರ ದಾಂಪತ್ಯ ಜೀವನವನ್ನು ಕುರಿತು ಅವರಿಗೆಲ್ಲಾ ಚೆನ್ನಾಗಿಯೇ ಗೊತ್ತಿತ್ತು. ಆದರೂ ಅವಳು ಗಂಡನ ಸೇವೆ ಮಾಡುವುದಕ್ಕಾಗಿ ಲಾಸ್ ಆಫ್ ಪೇ ರಜ ಹಾಕಿದ್ದನ್ನು ನೋಡಿ ಅವಳ ಆಂತರ್ಯ ಯಾರಿಗೂ ಅರ್ಥವಾಗದಂತಾಗಿತ್ತು. ಇಬ್ಬರೂ ಸಂಪಾದಿಸುತ್ತಿದ್ದರೂ ಅವರ ಆರ್ಥಿಕ ಪರಿಸ್ಥಿತಿ ಅಷ್ಟೇನೂ ಚೆನ್ನಾಗಿರಲಿಲ್ಲ.

ಹೊಸದಾಗಿ ಕಟ್ಟಿಸಿದ ಮನೆ, ಕೊಂಡುಕೊಂಡ ಸ್ಕೂಟರ್ ಅವರ ಸಂಬಳದಲ್ಲಿನ ಹೆಚ್ಚು ಭಾಗವನ್ನು ನುಂಗಿ ಹಾಕುತ್ತಿತ್ತು. ಎಲ್ಲಕ್ಕಿಂತ ಹೆಚ್ಚಾಗಿ ಬಹಳ ದಿನಗಳಿಂದ ಅವರು ಪರಸ್ಪರ ವಿರುದ್ಧ ಮಾರ್ಗಗಳಲ್ಲಿ ನಡೆಯುತ್ತಿರುವುದು ಎಲ್ಲರಿಗೂ ತಿಳಿದಿದ್ದ ವಿಷಯವೇ ಆಗಿತ್ತು. ಸಾಯಂಕಾಲ ಚಂದ್ರಪಾಲ್‌ನನ್ನು ಕಂಡಾಗ ಎಲ್ಲಾ ವಿವರಗಳನ್ನೂ ತಿಳಿದುಕೊಳ್ಳಬೇಕೆಂದು ಅವರು ತೀರ್ಮಾನಿಸಿ ಕೊಂಡರು.

ಸುಮಂಗಳ ಆ ಉರಿಬಿಸಿಲಿನಲ್ಲಿಯೇ ನರ್ಸಿಂಗ್ ಹೋಮಿಗೆ ಹೊರಟುಬಿಟ್ಟಳು. ಆಟೋಗಾಗಿ ಕಾಯುವಷ್ಟು ತಾಳ್ಮೆ ಸಹ ಇರಲಿಲ್ಲ ಅವಳಿಗೆ. ಖಾಲಿ ರಿಕ್ಷಾ ಸಹ ಅವಳ ಗಮನಕ್ಕೆ ಬರಲಿಲ್ಲ. ಆ ವೈಶಾಖದ ಉರಿ ಬಿಸಿಲಿನಲ್ಲಿ ಕೊಡೆ ಬಿಚ್ಚಬೇಕೆಂಬ ಆಲೋಚನೆ ಸಹ ಅವಳಿಗೆ ಬರಲಿಲ್ಲ.

ಬಹಳ ಕಾಲದ ನಿರೀಕ್ಷೆಯ ನಂತರ ತನಗೆ ಅದೃಷ್ಟವಶಾತ್ ಸಿಕ್ಕಿದ ಸದಾವಕಾಶ ಇದು. ಈ ಅವಕಾಶವನ್ನು ಉಪಯೋಗಿಸಿಕೊಂಡು ಒಂದು ಮಹತ್ತರವಾದ ಕಾರ್ಯವನ್ನು ಸಾಧಿಸಬೇಕೆಂಬ ಆತುರದಲ್ಲಿ ಅವಳು ನರ್ಸಿಂಗ್ ಹೋಮಿನ ಕಡೆ ನಡೆಯಲಾರಂಭಿಸಿದ್ದಳು.

ಗೇಟನ್ನು ದಾಟುತ್ತಿದ್ದಂತೆಯೇ ವಾಚ್‌ಮನ್ ಹೇಳಿದ 'ದೊಡ್ಡ ಡಾಕ್ಟರ್ ಈಗತಾನೇ ಬಂದರು.'

ಕೆಲಸದ ಹುಡುಗ ಬಾಲನ್ ಇವರ ಮನೆಯಲ್ಲಿ ಕೆಲವು ವರ್ಷಗಳಿಂದ ಇದ್ದವನು. ಸುಮಂಗಳೆಯನ್ನು 'ಅಕ್ಕಾ' ಎಂದೇ ಕರೆಯುತ್ತಿದ್ದ. ಕೋಣೆಯಲ್ಲಿ ಅತ್ತಿಂದಿತ್ತ ಓಡಾಡುತ್ತಿದ್ದ ಅವನು ಸುಮಂಗಳೆಯನ್ನು ನೋಡುತ್ತಲೇ ಹೇಳಿದ.

"ಅಕ್ಕಾ, ನಾವು ಗವರ್ನ್‌ಮೆಂಟ್ ಆಸ್ಪತ್ರೆಗೇ ಹೋಗಬಹುದಾಗಿತ್ತು. ಒಂದೆರಡು ತಿಂಗಳು ಇರಬೇಕಾಗಿ ಬರುತ್ತೆ ಅಂತಿದಾರೆ ಡಾಕ್ಟರ್....."

"ಅದಕ್ಕೇ ಇಲ್ಲಿರೋದೇ ವಾಸಿ ಕಣಪ್ಪಾ, ನೋಡು..... ಇಲ್ಲಿನ ವಾತಾವರಣ ಎಷ್ಟು ಪ್ರಶಾಂತವಾಗಿ ಹಾಯಾಗಿದೆ ಅಂತ."

ಚಂದ್ರಪಾಲ್‌ನ ಪತ್ನಿ ಪತಿಯ ಬಗ್ಗೆ ತೋರುತ್ತಿದ್ದ ಶ್ರದ್ಧೆ ಪ್ರೀತಿಗಳನ್ನು ಕಂಡು ಅವನ ಮಿತ್ರರಿಗೆಲ್ಲಾ ತುಂಬಾ ಸಂತೋಷವಾಯಿತು. ಅವಶ್ಯಕತೆಯಿದ್ದಲ್ಲಿ ಚಂದ್ರಪಾಲ್‌ನ ಜತೆಗೆ ರಾತ್ರಿ ಮಲಗಲು ಯಾರಾದರೂ ಬರುತ್ತೇವೆಂದು ಹೇಳಿದರು ಸಹ. ನಿಸ್ಸಹಾಯಕತೆಯಿಂದ ಸುಸ್ತಾಗಿ ಮಲಗಿದ್ದ ಅವರನ್ನು ನೋಡಿ ಅವರು ಆ ತೀರ್ಮಾನಕ್ಕೆ ಬಂದಿದ್ದರು.

"ಮಿಸೆಸ್ ಚಂದ್ರಪಾಲ್‌ಗೆ ಅಭ್ಯಂತರವಿಲ್ಲದಿದ್ದರೆ ಈ ರಾತ್ರಿ ಆಸ್ಪತ್ರೆಯಲ್ಲಿ ನಾವು ಯಾರಾದರೂ ಮಲಗುತ್ತೇವೆ" ಎಂದರವರು.

"ಈ ರಾತ್ರಿ ಅಂತಲ್ಲ, ಬೇಕಾದರೆ ಈ ಎರಡು ತಿಂಗಳೂ ನಿದ್ದೆ ಕೆಟ್ಟರೂ ಪರವಾಗಿಲ್ಲ. ನಾನು ಎರಡು ತಿಂಗಳು ರಜ ಹಾಕಿದ್ದೇನೆ. ನೀವು ಸಹಾಯ ಮಾಡ್ತೀನಿ ಅಂತಿದೀರಲ್ಲಾ, ಅಷ್ಟೇ ಸಾಕು. ಕೃತಜ್ಞತೆಗಳು" ಎಂದು ನಯವಾಗಿಯೇ ತಿರಸ್ಕರಿಸಿದಳು ಸುಮಂಗಳ.

ಚಂದ್ರಪಾಲ್‌ನ ಸ್ನೇಹಿತರು ನಂಬಿಯಾರ್, ವಾಸು ಮರುಮಾತಾಡದೆ ಸೋಫಾದ ಮೇಲೆ ಕುಳಿತಿದ್ದರು.

ನರ್ಸ್ ತರಬೇಕಾದ ಔಷಧಿಗಳ ಚೀಟಿ ತಂದುಕೊಟ್ಟಳು.

ವಾಸುದೇವನ್ ಸುಮಂಗಳೆಯನ್ನು "ಮತ್ತೇನಾದರೂ ಬೇಕಾದರೆ..... ಸಂಕೋಚ ಪಡಬೇಡಿ" ಎಂದ.

"ಥ್ಯಾಂಕ್ಸ್, ಸದ್ಯಕ್ಕೆ ಏನೂ ಬೇಕಾಗಿಲ್ಲ" ಎನ್ನುತ್ತಾ ತನ್ನ ಕೈಯಲ್ಲಿದ್ದ ಎರಡು ಬಳೆಗಳನ್ನು ಮಾರಿ ತಂದ ನೋಟುಗಳನ್ನು ಪರ್ಸಿನಿಂದ ತೆಗೆದು ತೋರಿಸಿದಳು. "ಈ ಹಣ ಖರ್ಚಾದ ಮೇಲೆ ಅವಶ್ಯಕತೆಯಿದ್ದಲ್ಲಿ ನಿಮ್ಮನ್ನು ಕೇಳುತ್ತೇನೆ ಬಿಡಿ" ಎಂದಳು.

ವಾಸುದೇವನ್ ಸುಮ್ಮನಾದ.

ನಿದ್ದೆಯ ಮತ್ತಿನಲ್ಲಿ ಮಲಗಿದ್ದ ಸ್ನೇಹಿತನನ್ನು ನೋಡುತ್ತಾ ಸೋಫಾದಲ್ಲಿ ಕುಳಿತಿದ್ದರವರು.

ಸುಮಂಗಳ ಕೋಣೆಯನ್ನು ಶುಭ್ರಪಡಿಸುವ ಕೆಲಸದಲ್ಲಿ ಮಗ್ನಳಾದಳು. ದೀರ್ಘಕಾಲ ಅಲ್ಲಿಯೇ ವಾಸಿಸಲು ಬಂದ ಪ್ರವಾಸಿಯಂತಿತ್ತು ಅವಳ ವರ್ತನೆ.

ಅವಳು ಆ ಕೋಣೆಯ ನಾಲ್ಕೂ ಕಡೆ ನೋಡಿದಳು. ಕಿಟಕಿಯ ಬಾಗಿಲನ್ನು ತೆಗೆದಳು. ಅವುಗಳಿಗೆ ತೆರೆಗಳನ್ನು ಹಾಕಿದಳು. ಸೋಫಾ ಅನ್ನು ದೊಡ್ಡ ಕಿಟಕಿಯ ಬಳಿಗೆ ಎಳೆದಳು. ತೋಟಿಯನ್ನು ಕರೆದು ಬಾತ್‌ರೂಮು, ಲೆಟ್ರಿನ್‌ಗಳನ್ನು ಶುಭ್ರಗೊಳಿಸುವಂತೆ ಹೇಳಿದಳು. ಟೀಪಾಯ್ ಮೇಲೆ ಸುಂದರವಾದ ಟವಲನ್ನು ಹಾಕಿದಳು. ಹೂದಾನಿಯಲ್ಲಿ ಅಂದವಾದ ಹೂಗಳನ್ನಿರಿಸಿದಳು.

ಬೀರುವನ್ನು ಕ್ಲೀನ್ ಮಾಡಲು ಹೋದಾಗ ಕಾಣಿಸಿದ ಕ್ಯಾಲೆಂಡರನ್ನು ಗೋಡೆಗೆ ನೇತು ಹಾಕಿದಳು. ತಂದೆ – ತಾಯಿಯರೊಂದಿಗೆ ಕುಳಿತು ಯಾವುದೋ ಪಾನೀಯವನ್ನು ಕುಡಿಯುತ್ತಿದ್ದ ಮಕ್ಕಳಿದ್ದ ಚಿತ್ರವಿತ್ತು..... ಆ ಕ್ಯಾಲೆಂಡರಿನಲ್ಲಿ.

ಎಲ್ಲಾ ಕೆಲಸಗಳನ್ನೂ ಮುಗಿಸಿಕೊಂಡು ಬರುವ ವೇಳೆಗೆ ಅವಳ ಕೈಯ್ಯಲ್ಲೊಂದು ಹೂವಿನ ಗೊಂಚಲಿತ್ತು.

ಚಂದ್ರಪಾಲ್ ಇನ್ನೂ ಮತ್ತಿನಲ್ಲಿಯೇ ಇದ್ದ.

ಇಷ್ಟರಲ್ಲಿ ಬಾಲನ್ ಔಷಧಿಗಳನ್ನು ತಂದ. ಸುಮಂಗಳ ಅವುಗಳನ್ನು ಟೇಬಲ್ಲಿನ ಮೇಲೆ ಜೋಡಿಸಿಟ್ಟಳು.

"ಇನ್ನೂ ಪ್ರಜ್ಞೆ ಬರಲೇ ಇಲ್ಲವಲ್ಲ. ಏಕಿಷ್ಟು ಹೆಚ್ಚು ಡೋಸ್ ಕೊಟ್ಟಿದ್ದಾರೆ?"

ಸಾಧಾರಣವಾಗಿ ಸದಾ ಗಲಗಲನೆ ಮಾತಾಡುವ ಸುಮಂಗಳೆ ಮೌನ ವಹಿಸಿದ್ದನ್ನು ಕಂಡು ಚಂದ್ರಪಾಲ್‌ನ ಸ್ನೇಹಿತರಿಗೆ ಆಶ್ಚರ್ಯವಾಯಿತು.

ಚಂದ್ರಪಾಲ್‌ನನ್ನು ನೋಡಿ ಹೋಗಲು ಅವನ ಸ್ನೇಹಿತರು ಬಹಳ ಜನ ಬರುತ್ತಿದ್ದರು.

ಸುಮಂಗಳ ಬಂದವರನ್ನೆಲ್ಲಾ ತದೇಕವಾಗಿ ಪರಿಶೀಲಿಸಿ ನೋಡುತ್ತಿದ್ದಳು. ಅವರಲ್ಲಿ ಬಹಳಷ್ಟು ಮಂದಿ ಚಂದ್ರಪಾಲ್ ಮತ್ತು ಸುಮಂಗಳೆಯರಿಗೆ ಸಹೋದ್ಯೋಗಿಗಳೇ ಆಗಿದ್ದರು. ಆದರೆ ಅವರಲ್ಲಿ ಒಬ್ಬ ವ್ಯಕ್ತಿ ಕಾಣಿಸದೆ ಇದ್ದುದು ಅವಳನ್ನು ಚಿಂತಿಸುವಂತೆ ಮಾಡಿತ್ತು.

ಅವಳು ಇವರೆಲ್ಲರ ಜತೆಯಲ್ಲಿ ಬಾರದೆ ಒಬ್ಬಳೇ ಬಂದು ರಹಸ್ಯವಾಗಿ ಮಾತನಾಡಬೇಕೆಂದಿರುವಳೋ ಏನೋ..... ಎಂದುಕೊಂಡಳು ಸಹ.

ಮೇರಿ ನಂಬಿಯಾರ್ ಆಫೀಸಿನಲ್ಲಿ ಸ್ಟೆನೋ.

ನಂಬಿಯಾರ್ ಅವಳಿಗೆ ಈ ವಿಷಯ ಹೇಳಿಯೇ ಇರುತ್ತಾನೆ.....

ಸುಮಂಗಳೆಯ ಪತಿ ನರಳಾಟದಲ್ಲಿ ಒಂದೆರಡು ಬಾರಿ ಅವಳನ್ನು ಸ್ಮರಿಸಿದ ಸಹಾ. ಆದರೆ ಫೋನಿನಲ್ಲಿ ಮಾತನಾಡಬೇಕೆಂದರೂ ಅದು ಕೆಟ್ಟು ಹೋಗಿತ್ತು.

ಕತ್ತಲಾದ ನಂತರವೂ ಗೆಳೆಯರ ಸಮೂಹ ಬಂದು ಹೋಗುತ್ತಲೇ ಇತ್ತು. ಸುಮಂಗಳೆಗೆ ಉಂಟಾದ ಆಪತ್ತಿಗೆ ಸಹಾನುಭೂತಿ ತೋರಿಸುತ್ತಾ ತಮ್ಮ ಸಹಾಯ ಸದಾ ಇರುವುದೆಂದು ಆಶ್ವಾಸನೆ ಕೊಡುತ್ತಿದ್ದರು. ಧೈರ್ಯ ತುಂಬಲು ಪ್ರಯತ್ನಿಸುತ್ತಿದ್ದರು.

ಸುಮಂಗಳೆ ಮಾತ್ರ ತನ್ನ ಗಂಡನಿಗೆ ಪ್ರಜ್ಞೆ ಮರಳಿದ ನಂತರ, ಮೇರಿ ರಹಸ್ಯವಾಗಿ ಬಂದು ಮಾತನಾಡಿ ಹೋಗುತ್ತಾಳೇನೋ ಎಂದು ಮೈಯೆಲ್ಲಾ ಕಣ್ಣಾಗಿ ಕಾಯುತ್ತಾ ಕುಳಿತಿರುತ್ತಿದ್ದಳು. ತಾನಲ್ಲಿರುವವರೆಗೆ ಅಂತಹ ಅವಕಾಶ ಕಲ್ಪಿಸಬಾರದೆಂದು ನಿಶ್ಚಯಿಸಿಕೊಂಡಿದ್ದಳು.

ಇಲ್ಲಿ ಮೇರಿಗೆ ಸ್ಥಳವಿಲ್ಲ.

ಇದು ಸುಮಂಗಳೆಯದು.

ಪತಿ ಸೇವೆಯ ಹಕ್ಕು ಸತಿಗೆ ಮಾತ್ರವೇ. ಅವಳಿಗೆ ಇಲ್ಲಿಗೆ ಬರಲು ಯಾವ ವಿಧವಾದ ಹಕ್ಕೂ ಇಲ್ಲ.

ಸುಮಂಗಳೆಯ ಮ್ಲಾನ ವದನವನ್ನು ಕಂಡು ನಂಬಿಯಾರ್ ಹತ್ತಿರ ಬಂದು ಕೇಳಿದ.

"ನೀವೇನೂ ಹೆದರಬೇಡಿ. ಎರಡು ತಿಂಗಳು ಪ್ಲಾಸ್ಟರ್ ಹಾಕಿಕೊಂಡು ಮಲಗಬೇಕೂಂತ ಅವರು ಹೇಳೋದು ಹೇಳ್ತಾರಷ್ಟೆ! ಚಂದ್ರು ಎರಡು ವಾರಗಳಲ್ಲಿ ಎದ್ದು ಮಾಮೂಲಾಗಿ ಓಡಾಡುತ್ತಾನೆ....."

ಸುಮಂಗಳೆ ಆ ಮಾತಿನಿಂದ ನಿರುತ್ಸಾಹಗೊಂಡಳು!

ಎರಡು ವಾರಗಳು! ಎರಡೇ ವಾರಗಳೇ?

ಸುಮಂಗಳೆಗೆ ಪತಿಯ ಬಳಿ ಇರುವ ಅವಕಾಶ ಕೇವಲ ಎರಡೇ ವಾರಗಳೇ? ಆನಂತರ ಮತ್ತೆ ಕುರಿಯಂತೆ ಮೇರಿಯ ಹಿಂದೆ ಹೊರಟು ಹೋಗುತ್ತಾನೆಯೇ?

ಅವಳು ತಾನು ಶುಭ್ರಗೊಳಿಸಿದ ಕೋಣೆ ಎಷ್ಟು ಸುಂದರವಾಗಿ ಕಾಣಿಸುತ್ತಿದೆಯೆಂಬುದನ್ನು ಒಮ್ಮೆ ನೋಡಿ ತೃಪ್ತಿಪಟ್ಟಳು. ಕಣ್ಣು ತೆರೆದ ಕೂಡಲೇ

ತನ್ನ ಪತಿ ಇದನ್ನು ನೋಡಿ ಸಂತೋಷಪಡುತ್ತಾನೆ. ಹೂದಾನಿಯಲ್ಲಿಟ್ಟ ಬಿಳಿ ಹೂಗಳು ಕೋಣೆಯಲ್ಲಿ ಬೆಳದಿಂಗಳನ್ನು ಚೆಲ್ಲುವಂತೆ ತಂಪಾಗಿ ಕಾಣುತ್ತಿದ್ದುವು. ಅವುಗಳಿಂದ ಮಂದಹಾಸ ಹೊರಸೂಸುವಂತೆನಿಸುತ್ತಿತ್ತು.

ಅವಳಿಗೆ ಹುಣ್ಣಿಮೆಯ ರಾತ್ರಿಗಳ ನೆನಪಾಯಿತು.

ಸುಮಂಗಳೆ, ಚಂದ್ರಪಾಲ್ ಬೆಳದಿಂಗಳಿನಲ್ಲಿ ಕಳೆದ ದಿನಗಳು! ಆ ದಿನಗಳು ಮತ್ತೆ ಬಂದಾವೇ? ಬರುವುದು ಶಕ್ಯವೇ? ಎಂದವಳ ಮನ ಚಿಂತಿಸಿತು.

ಈ ಎರಡು ತಿಂಗಳ ಅಗ್ನಿಪರೀಕ್ಷೆಯಲ್ಲಿ ತಾನು ಚಂದ್ರಪಾಲನನ್ನು ತನ್ನವನನ್ನಾಗಿ ಮಾಡಿಕೊಳ್ಳಲು ಸಾಧ್ಯವೇ ಎಂದು ಆಲೋಚಿಸತೊಡಗಿದಳು.

ರಾತ್ರಿ ಹತ್ತು ಗಂಟೆಗೆ ವಾಸುದೇವನ್, ನಂಬಿಯಾರ್ ಹೊರಟು ಹೋದಾಗಲೂ ಸುಮಂಗಳೆ ಬಾಗಿಲ ಬಳಿ ಕುಳಿತು ನೋಡುತ್ತಲೇ ಇದ್ದಳು. ಒಂದು ವೇಳೆ ಜನರ ಗುಂಪು ಕಡಿಮೆಯಾಗಲೆಂದು, ಸಮಯಕ್ಕಾಗಿ ಮೇರಿ ಕಾಯುತ್ತಿರಬಹುದಲ್ವಾ! ಕತ್ತಲಲ್ಲಿ ಬಂದು ಒಮ್ಮೆ ಮುತ್ತಿಟ್ಟು ಹೋಗಬಹುದು ಎಂದುಕೊಂಡಿರಲೂ ಸಾಕು.....

ಸುಮಂಗಳೆ ಸೋಫಾದ ಮೇಲೆ ಮಲಗಿದಳು. ಆದರೆ ಅವಳ ದೃಷ್ಟಿ ಬಾಗಿಲ ಕಡೆಗೇ ಇತ್ತು.

ವರಾಂಡಾದಲ್ಲಿ ಹೆಜ್ಜೆಗಳ ಸದ್ದಾಗುತ್ತಿತ್ತು. ನರ್ಸುಗಳು ತಮ್ಮ ಕೆಲಸದ ಮೇಲೆ ಅತ್ತಿಂದಿತ್ತ ಓಡಾಡುತ್ತಿದ್ದರು. ದೂರದಲ್ಲೆಲ್ಲೋ ರೋಗಿಯೊಬ್ಬ ನರಳುತ್ತಿದ್ದ ಸದ್ದು ಕೇಳಿಸುತ್ತಿತ್ತು.

ವರಾಂಡದಲ್ಲಿದ್ದ ಒಂದು ತೂಗು ಹೂವಿನ ಕುಂಡದ ಮೇಲೆ ಹಕ್ಕಿಯೊಂದು ಬಂದು ಕುಳಿತುಕೊಂಡಿತು. ಸುಮಂಗಳೆಗೆ ತಟ್ಟನೆ ಎಚ್ಚರವಾಯಿತು. ನಿದ್ದೆಯೆಂದರೆ ಹೆದರಿಕೆಯಾಗತೊಡಗಿತು.

ಚಂದ್ರಪಾಲ್ ಪ್ರಶಾಂತವಾಗಿ ನಿದ್ರಿಸುತ್ತಿದ್ದ. ಕೆಲಸದ ಹುಡುಗ ಬಾಲನ್ ಅವಳಿಗೆದುರಾಗಿ ಮಲಗಿದ್ದವನು, ಒಂದಿಷ್ಟು ಸದ್ದಾದರೂ ಬೆಚ್ಚಿ ಎದ್ದು ಕೂಡುತ್ತಿದ್ದ, ಸುಮಂಗಳೆಯನ್ನು ಕೇಳಿದ.

"ಏಕಕ್ಕಾ, ಏನಾಯಿತು?"

"ಏನಿಲ್ಲ, ನೀನು ನಿದ್ದೆ ಮಾಡು."

ಬಾಗಿಲ ಅಗುಳಿ ಹಾಕಿ ಮತ್ತೆ ಬಂದು ಸೋಫಾದಲ್ಲಿ ಮಲಗಿದಳು. ಹಿಂದಿನ ರಾತ್ರಿಯೆಲ್ಲಾ ನಿದ್ದೆಯಿಲ್ಲದೆ ಕಳೆದುದರ ನೆನಪಾಯಿತು. ಲೈಟ್ ಆರಿಸಿ, ಬೆಡ್‌ರೂಮ್ ಲೈಟಿನ ಬೆಳಕಿನಲ್ಲಿ ತಾನೂ ಮೆಲ್ಲಮೆಲ್ಲನೆ ನಿದ್ದೆಯೊಳಕ್ಕೆ ಜಾರಿದಳು.

ಹಠತ್ತಾಗಿ ಮತ್ತೆ ಸದ್ದು!

ಬೆಚ್ಚಿ ಎದ್ದು ಕುಳಿತಳು. ಕಣ್ಣುಜ್ಜಿಕೊಂಡಳು. ಬಾಗಿಲನ್ನು ಸರಿಸುತ್ತಿರುವ ಸದ್ದು, ಕೈಗಡಿಯಾರ ನೋಡಿಕೊಂಡಳು. ಹನ್ನೊಂದು ಗಂಟೆಯಾಗಿತ್ತು..... ಹೌದು, ಅವಳೇ ಇರಬೇಕು. ಎಲ್ಲರೂ ನಿದ್ದೆ ಮಾಡಿರುವ ಸಮಯ ನೋಡಿ ಬಂದಿರಬಹುದು.

ಹುಂ..... ತಾನು ಬಾಗಿಲನ್ನು ತೆರೆಯದಿರುವುದು ಹೇಡಿತನವಾಗುತ್ತದೆ.

ಎದ್ದು ಹೋಗಿ ಬಾಗಿಲನ್ನು ತೆರೆದಳು.

ಕೈಯಲ್ಲಿ ಸಿರೆಂಜ್ ಹಿಡಿದು ನಿಂತಿದ್ದ ನರ್ಸ್ ಎದುರಾಗಿ ಕಾಣಿಸಿದಳು.

"ಅರೇ..... ನೀವೇ....."

"ಹೌದು, ಕ್ಷಮಿಸಿ..... ದಯವಿಟ್ಟು ಬಾಗಿಲ ಅಗುಳಿ ಹಾಕಬೇಡಿ. ನಾವು ರೌಂಡ್ಸ್‌ಗೆ ಬರುತ್ತಿರುತ್ತೇವಲ್ಲಾ! ನಿಮಗೆ ಅನಾವಶ್ಯಕವಾಗಿ ನಿದ್ದೆ ಕೆಡುತ್ತದೆ."

ರೋಗಿಗೆ ಇಂಜೆಕ್ಷನ್ ಕೊಟ್ಟು ನರ್ಸ್ ಹೊರಟು ಹೋದಳು.

ಚಂದ್ರಪಾಲ್ ಎಚ್ಚರವಾಗಿಯೇ ಮೌನವಾಗಿ ಮಲಗಿರುವನೆಂಬುದನ್ನು ಗಮನಿಸಿದಾಗ ಸುಮಂಗಳೆ ಒಳಗೊಳಗೆ ನೊಂದುಕೊಂಡಳು.

ಗುಡಿಯಲ್ಲಿ ಗಂಟೆಗಳ ಸದ್ದಾಗುವುದಕ್ಕೆ ಮುಂಚೆಯೇ ಸುಮಂಗಳ ಎದ್ದು ಸ್ನಾನ ಮಾಡಿ ಬಟ್ಟೆ ಬದಲಾಯಿಸಿ ಕನ್ನಡಿಯ ಮುಂದೆ ನಿಂತು ತಲೆ ಬಾಚಿಕೊಳ್ಳತೊಡಗಿದಳು. ತನ್ನ ರೂಪವನ್ನು ನೋಡಿ ತನಗೇ ಆಶ್ಚರ್ಯವಾಗಿತ್ತು.

ಹಿಂದೆ ತಾನು ಆಫೀಸಿಗೆ ಹೋಗುತ್ತಿದ್ದಾಗ ಎಂದೂ ತಾನು ತನ್ನ ಅಲಂಕಾರದ ಬಗ್ಗೆ ಶ್ರದ್ಧೆ ವಹಿಸಿದ್ದರ ನೆನಪಾಗಲಿಲ್ಲ.

ಈಗ ಚಂದ್ರಪಾಲ್‌ನ ಹೆಂಡತಿ ಸುಂದರಿಯಲ್ಲವೆಂದು ಯಾರು ಹೇಳಬಲ್ಲರು? ಕೊನೆಗೆ ಆ ಮೇರಿ ಸಹ ಅಂಗೀಕರಿಸಬೇಕಾದ್ದೇ.....

ಆ ಮೇರಿಯ ಮುಖ ಸುಮಂಗಳೆಗೆ ಸ್ಪಷ್ಟವಾಗಿ ನೆನಪಿರಲಿಲ್ಲ.

ಅವಳ ಭಾವಚಿತ್ರಕ್ಕಾಗಿ ತನ್ನ ಪತಿಯ ಸಾಮಾನುಗಳನ್ನೆಲ್ಲಾ ಕೆದಕಿ, ಎಷ್ಟು ಹುಡುಕಾಡಿದರೂ ಅವಳು ಬರೆದ ಒಂದೇ ಒಂದು ಚೀಟಿ ಸಹ ದೊರೆತಿರಲಿಲ್ಲ. ಅಷ್ಟು ಹುಷಾರಾಗಿ ತನ್ನ ಪ್ರೇಮಕಲಾಪವನ್ನು ಗುಟ್ಟಾಗಿಟ್ಟಿದ್ದಾಳೆ ಆ ಮೇರಿ ಎಂದುಕೊಂಡಳು.

ಒಂದೇ ಒಂದು ಸಲ ಆಕೆ ಮೇರಿಯನ್ನು ನೋಡುವ ಅವಕಾಶವುಂಟಾಗಿತ್ತು. ಅದೂ ಸಹ ಎರಡು ಮೂರು ವರ್ಷಗಳ ಕೆಳಗೆ ಸುಮಂಗಳ ಟೈಫಾಯಿಡ್ ಜ್ವರದಿಂದ ಮಲಗಿದ್ದಳು. ಜ್ವರ ವಾಸಿಯಾಗಿದ್ದರಿಂದ ಅಮ್ಮ ಊರಿಗೆ ಹೊರಟು ಹೋಗಿದ್ದಳು. ಮನೆಯಲ್ಲಿ ತಾನು, ತನ್ನ ಗಂಡ, ಕೆಲಸದ ಹುಡುಗ ಬಾಲನ್ ಮಾತ್ರವೇ ಇದ್ದರು. ದಿನನಿತ್ಯದ ಕೆಲಸವನ್ನು ಮಾಡಿಕೊಳ್ಳುವಷ್ಟು ಶಕ್ತಿ ಬಂದಿತ್ತು. ಆದರೆ ಮನಸ್ಸು ಮಾತ್ರ ಸತ್ತ ಕಪ್ಪೆಯಂತೆ ಬಿದ್ದಿರುತ್ತಿತ್ತು. ಅವಳಿಗಾಗ ಯಾವುದರಲ್ಲಿಯೂ ಆಸಕ್ತಿ, ಉತ್ಸಾಹಗಳಿರಲಿಲ್ಲ. ತನಗಾಗಿ ಗಂಡ ತಂದಿರಿಸಿದ್ದ ಸಿನಿಮಾ ಪತ್ರಿಕೆಗಳನ್ನೂ ಓದಬೇಕೆನಿಸುತ್ತಿರಲಿಲ್ಲ. ನೋಡಲು ಬರುವವರು ಹೆಚ್ಚಾದಾಗ ನಿದ್ದೆ ಬಂದಂತೆ ನಟಿಸುತ್ತಿದ್ದಳು. ಹಸಿವೇ ಇರುತ್ತಿರಲಿಲ್ಲ. ಹಗಲು ರಾತ್ರಿ ಒಂದೇ ಸಮನೆ ಕತ್ತಲಾದಂತೆನಿಸುತ್ತಿತ್ತು.

ರಜಾ ಮುಗಿದ ನಂತರ ಚಂದ್ರಪಾಲ್ ಆಫೀಸಿಗೆ ಹೊರಡಲು ಪ್ರಾರಂಭಿಸಿದ್ದ. ತನ್ನೊಂದಿಗಿರಲು ಗಂಡನಿಗೆ ಇಷ್ಟವಿಲ್ಲವೆಂಬುದನ್ನು ಆಗಲೇ ಸುಮಂಗಳೆ ತಿಳಿದುಕೊಂಡಿದ್ದು, ಇದಕ್ಕೆ ಕಾರಣ ಆ ಮೇರಿ ಎಂಬುದನ್ನು ಸುಲಭವಾಗಿ ಗ್ರಹಿಸಿದಳು. ಆ ರೀತಿ ಮೇರಿ ಅವರ ಬದುಕಿನಲ್ಲಿ ಪ್ರವೇಶಿಸಿದ್ದಳು.

ಆರೋಗ್ಯದ ಕಳೆಯಿಂದ ಮಿಂಚುವ ಅವನ ಮುಖ, ಕಾಂತಿಯುತ ಕಣ್ಣುಗಳನ್ನು ಸುಮಂಗಳೆ ಗಮನಿಸಲಾರಂಭಿಸಿದಳು. ತಾನು ರೋಗಪೀಡಿತಳಾಗಿ

ಎರಡು ತಿಂಗಳಿಗೂ ಮೇಲಾಗಿತ್ತು. ಒಂದರ ಮೇಲೊಂದರಂತೆ ಅನಾರೋಗ್ಯ ತನ್ನನ್ನು ಕಾಡಿತ್ತು. ಎಷ್ಟೋ ಔಷಧಿಗಳನ್ನು ತೆಗೆದುಕೊಂಡಾಗಿತ್ತು. ಔಷಧಿಯ ಸೀಸೆಗಳಲ್ಲಿ ಕೆಲವು ಉಪಯೋಗಿಸಿದವೂ, ಉಪಯೋಗಿಸದೆ ಇದ್ದವೂ ಸಹ ಇದ್ದುವಲ್ಲಿ.

"ಬಾಲೂ, ಬಾಲೂ" ಹುಡುಗನನ್ನು ಕರೆದಳು ಸುಮಂಗಳೆ.

ಅವನು ಬಂದ ಕೂಡಲೇ "ಇವುಗಳನ್ನೆಲ್ಲಾ ತೆಗೆದುಕೊಂಡು ಹೋಗಿ ತಿಪ್ಪೆಯಲ್ಲಿ ಎಸೆದು ಬಾ" ಎಂದಳು.

"ಎಲ್ಲವನ್ನೂ ಎಸೆಯಲೇ?"

"ಹ್ಞಾಂ..... ಎಲ್ಲವನ್ನೂ....."

ಹೌದು, ಇನ್ನು ಅವುಗಳ ಅವಶ್ಯಕತೆ ಇಲ್ಲವೆಂದು ಅವಳು ತೀರ್ಮಾನಿಸಿ ಕೊಂಡಿದ್ದಳು.

"ಅಕ್ಕಾ, ನಾನು ಸಂತೆಗೆ ಹೋಗಿ ಬರುತ್ತೇನೆ ನೀನೊಬ್ಬಳೇ ಇರಬಲ್ಲೆಯಾ?" ಎಂದು ಕೇಳಿದ ಬಾಲನ್.

"ನನ್ನ ರೋಗ ವಾಸಿಯಾಗಿದೆ. ಏನೂ ಪರವಾಗಿಲ್ಲ; ಸಾಯಂಕಾಲ ದೊಳಗಾಗಿ ಹಿಂತಿರುಗಿ ಬಾ" ಎಂದಳು ಸುಮಂಗಳೆ.

ಅನಂತರ ಅವಳು ಮಲಗಿಕೊಂಡಳು.

ಅರ್ಧ ತೆರೆದ ಬಾಗಿಲಿನಿಂದ ಅವಳಿಗೆ ಡ್ರಾಯಿಂಗ್ ರೂಮ್ ಕಾಣಿಸುತ್ತಿತ್ತು.....

ಹಕ್ಕಿಗಳು ತಮ್ಮ ಗೂಡುಗಳನ್ನು ಸೇರಿಕೊಳ್ಳಲು ಆಕಾಶದಲ್ಲಿ ಹಾರಿ ಹೋಗುತ್ತಿದ್ದವು. ಮಳೆ ಬರುತ್ತದೇನೋ ಎಂಬಂತೆ ಆಕಾಶದಲ್ಲಿ ಮೋಡಗಳು ಕವಿಯುತ್ತಿದ್ದವು. ತಣ್ಣನೆಯ ಗಾಳಿ ಬೀಸಿ ಬರುತ್ತಿತ್ತು. ಹೊರಕ್ಕೆ ನೋಡುತ್ತಾ ಮಲಗಿದ್ದಳವಳು.

ಮೆಲ್ಲನೆ ಗೇಟು ತೆರೆದ ಸದ್ದಾಯಿತು.

ನಂತರ ಹೆಜ್ಜೆಗಳ ಸದ್ದು.....

ಬಾಲನ್ ಸಂತೆಯಿಂದ ಬರುವ ಹೊತ್ತಾಗಿತ್ತು.

ಡ್ರಾಯಿಂಗ್ ರೂಮಿನಲ್ಲಿ ಹೆಜ್ಜೆಯಿಡಬೇಕಾದ ಹೆಜ್ಜೆಗಳು ಅಲ್ಲಿಯೇ ನಿಂತವು.

ಬಾಗಿಲ ಪರದೆಯ ಹಿಂದೆ ಯಾರದು?

ಮೇರಿ, ಅವಳೇ.....

ಬಿಳಿಯ ದೇಹ, ಕೆಂಪು ಹೂಗಳ ಡಿಜೈನ್ ಇದ್ದ ಬಿಳಿಯ ಸೀರೆಯನ್ನುಟ್ಟು ಉದ್ದಕ್ಕಿದ್ದು, ಬಳುಕುವ ಮೈಮಾಟದ ಆಕಾರ.....

ಬಾಗಿಲ ಬಳಿ ನಿಂತು ಬೆಡ್‌ರೂಮಿನ ಕಡೆ ನೋಡಿದಳು. ಅವಳ ಕಿವಿಗಳಲ್ಲಿನ ನಕ್ಷತ್ರಗಳು ಫಳಕ್ಕನೆ ಹೊಳೆದುವು. ದಟ್ಟವಾದ ಕಪ್ಪು ಕೂದಲಿನ ಹೆರಳಿನಲ್ಲಿ ಮಲ್ಲಿಗೆಯ ಹೂಗಳು ನಗುತ್ತಿದ್ದವು.

ಅವಳು ಮೇರಿ ಎಂದು ಯಾರೂ ಹೇಳಬೇಕಾಗಿಯೇ ಇರಲಿಲ್ಲ.

ತಾನು ನಿರ್ಲಕ್ಷ್ಯದಿಂದ ಸುಮ್ಮನಿದ್ದಲ್ಲಿ ಅವಳು ಸ್ವಾತಂತ್ರ್ಯವಹಿಸಿ ತನ್ನ ಮಲಗುವ ಕೋಣೆಯೊಳಕ್ಕೆ ಬಂದು ಹಾಸಿಗೆಯ ಮೇಲಿನ ತನ್ನ ಸ್ಥಾನವನ್ನು ಆಕ್ರಮಿಸಿ ಬಿಡುವಳೇನೋ ಎನ್ನಿಸಿತು.

ವಾರ್ಡ್‌ರೋಬಿನ ಮೇಲಿದ್ದ ಕ್ಯಾಲೆಂಡರಿನ ಮೇಲೆ ಅವಳ ದೃಷ್ಟಿ ಬಿತ್ತು.

ಆ ದಿನ ಶನಿವಾರ..... ಇದು ಸಾಯಂಕಾಲ..... ಶನಿವಾರಗಳು ಮೇರಿಯವು. ಆ ದಿನ ಅರ್ಧ ರಾತ್ರಿಯ ನಂತರವೇ ಚಂದ್ರಪಾಲ್ ಮನೆಗೆ ಬರುವುದು.

ನರ್ಸಿಂಗ್ ಹೋಮಿನಲ್ಲಿ ಹಗಲೆಲ್ಲಾ ಅವಳು ಮೇರಿಗಾಗಿ ಕಾಯುತ್ತಾ ಇದ್ದಳು. ಊಟಕ್ಕೆ ಸಹ ಕ್ಯಾಂಟೀನಿಗೆ ಹೋಗುತ್ತಿರಲಿಲ್ಲ. ಅವಳಿಗೆ ಬೇಕಾದುದನ್ನೆಲ್ಲಾ ಬಾಲನ್ ಅಲ್ಲಿಗೇ ತಂದುಕೊಡುತ್ತಿದ್ದ.

ಈ ರೀತಿ ಮತ್ತೊಂದು ವಿಷಯದ ಬಗ್ಗೆ ಆಲೋಚಿಸದೆ, ಶ್ರದ್ಧಾಸಕ್ತಿಗಳಿಂದ ಗಂಡನ ಸೇವೆ ಮಾಡುತ್ತಿದ್ದ ಸುಮಂಗಳೆಯನ್ನು ನೋಡಿ ಅವಳ ಸ್ನೇಹಿತೆಯರೆಲ್ಲಾ ಹರ್ಷಿಸಿದರು.

"ಎರಡು ದಿನ ಆಯಿತು. ಮನೆಗೆ ಹೋಗಿ ಸ್ವಲ್ಪ ಹೊತ್ತು ನಿದ್ದೆ ಮಾಡಿ ಬಾ. ಇಲ್ಲಿ ಚಂದ್ರಪಾಲ್‌ನನ್ನು ನೋಡಿಕೊಳ್ಳಲು ಅವನ ಸ್ನೇಹಿತರು ಎಷ್ಟೋ ಜನ ಇದಾರಲ್ಲಾ....." ಎಂದೂ ಹೇಳಿದರು.

ಆದರೆ ಯಾರ ಮಾತನ್ನೂ ಅವಳು ಲೆಕ್ಕ ಮಾಡಲಿಲ್ಲ. ನಿದ್ದೆಯಿಲ್ಲದ್ದರಿಂದಾಗಿ ಅವಳ ಆರೋಗ್ಯ ಸ್ವಲ್ಪ ಕೆಟ್ಟಿತ್ತು ಸಹ. ಸುಮಂಗಳೆ ಸಹ ರೋಗಿಯಾಗಿ ನರ್ಸಿಂಗ್ ಹೋಮ್‌ನಲ್ಲಿ ಅಡ್ಮಿಟ್ ಆಗಬೇಕಾಗಿ ಬರುತ್ತದೆಯೆಂದು ಅವಳ ಸ್ನೇಹಿತೆಯರು ಹಿತವಚನ ಹೇಳಿದರು.

ವಿಷಯ ತಿಳಿದು ಊರಿನಿಂದ ಅವನ ತಾಯಿ ಬಂದಳು. ಇನ್ನಾದರೂ ತಾನು ಮನೆಗೆ ಹೋಗಿ ವಿಶ್ರಾಂತಿ ತೆಗೆದುಕೊಳ್ಳಬಹುದಲ್ಲವೇ? ಸುಮಂಗಳೆ ಆಲೋಚಿಸಿದಳು.

ತಾಯಿ..... ಮಗ ಎಷ್ಟಾದರೂ ಒಂದೇ. ಆಕೆ ಮಗನನ್ನು ವ್ಯತಿರೇಖಿಸದಿರಬಹುದು. ತಾನಾದರೂ, ಮೇರಿಯಾದರೂ ಒಂದೇ ಎಂದುಕೊಳ್ಳಬಹುದು. ಸುಮಂಗಳೆ ಮನೆಗೆ ಹೋಗಲಿಲ್ಲ.

ಒಂದು ತಿಂಗಳು ಕಳೆಯಿತು. ಮತ್ತೊಂದು ತಿಂಗಳು ಮನೆಯಲ್ಲಿಯೇ ರೆಸ್ಟ್ ತೆಗೆದುಕೊಳ್ಳುವಂತೆ ಹೇಳಿ ಚಂದ್ರಪಾಲ್‌ನನ್ನು ಮನೆಗೆ ಹೋಗಬಹುದೆಂದು ಡಾಕ್ಟರುಗಳು ಹೇಳಿದರು.....

ಮೇರಿಯನ್ನು ಭೇಟಿಯಾಗಿ ಆಕೆಯೊಂದಿಗೆ ಒಂದೆರಡು ಮಾತನಾಡುವ ಅವಕಾಶ ದೊರೆಯದಿದ್ದುದು ಸುಮಂಗಳೆಗೆ ತುಂಬಾ ನಿರಾಶೆಯನ್ನುಂಟು ಮಾಡಿತು.

ಅವಳಿಗೆ ಎಲ್ಲ ವಿಷಯಗಳೂ ತಿಳಿದಿರಬಹುದು..... ಆದ್ದರಿಂದಲೇ ಬಂದಿಲ್ಲ ಎಂದುಕೊಂಡಳು.

ಚಂದ್ರಪಾಲ್ ಚೇತರಿಸಿಕೊಂಡ ನಂತರದ ಒಳ್ಳೆಯ ಶನಿವಾರಕ್ಕೋಸ್ಕರ ಮೇರಿ ಕಾಯುತ್ತಿರಬಹುದು.

ಚಂದ್ರಪಾಲ್ ಮನೆಗೆ ಬಂದ ನಂತರ ಹೆಚ್ಚು ದಿನ ಬೆಡ್‌ರೆಸ್ಟ್ ತೆಗೆದು ಕೊಳ್ಳಲು ಒಪ್ಪಲಿಲ್ಲ. ನನಗೆ ರೋಗ ಎಂಥದು ಇಲ್ಲ, ಎಲ್ಲೂ ನೋವಿಲ್ಲ..... ಕುಳಿತುಕೊಳ್ಳಬಲ್ಲೆ, ಮಲಗಿಕೊಳ್ಳಬಲ್ಲೆ, ಬೇಕಾದರೆ ಓಡಲೂ ಬಲ್ಲೆ..... ಎಂದು ವಾದಿಸಿದ.

ಆದರೆ ಸುಮಂಗಳೆ ಒಪ್ಪಿಕೊಳ್ಳಲಿಲ್ಲ.

ಆ ದಿನ ಶನಿವಾರ..... ಸುಮಂಗಳೆಯನ್ನು ಭೇದಿಸುತ್ತಿದ್ದ ಶನಿವಾರ..... ಸಾಯಂಕಾಲ.....

ಚಂದ್ರಪಾಲ್ ಹೇಳಿದ.

"ಹೀಗೆ ಸದಾ ಮನೆಯಲ್ಲಿಯೇ ಕುಳಿತಿದ್ದರೆ ಹುಚ್ಚು ಹಿಡಿಯುತ್ತದೆಯಷ್ಟೆ! ಈ ದಿನ ಕ್ಲಬ್‌ನಲ್ಲಿ ಟೂರ್ನ್‌ಮೆಂಟ್ಸ್ ಇದೆ. ಹಾಗೆಯೇ ಹೋಗಿ ಸ್ವಲ್ಪ ಹೊತ್ತು ಕುಳಿತಿದ್ದು ಬರುತ್ತೀನಿ....."

ಅವಳ ಒದ್ದೆಯಾದ ಕಣ್ಣುಗಳಿಂದ ನೀರು ಹರಿಯುವ ಮುನ್ನವೇ ಅವಳನ್ನು ನಿಸ್ಸಹಾಯಕತೆಯಲ್ಲಿ ಮುಳುಗಿಸಿ ಚಂದ್ರಪಾಲ್ ಗೇಟು ತೆರೆದುಕೊಂಡು ಸರಸರನೆ ಹೊರಟು ಹೋದ.

ಎಲ್ಲಿಗೆ?

ಮತ್ತೆಲ್ಲಿಗೆ? ಅಲ್ಲಿಗೇ.....!!



# ಹೀಗೊಂದು ಮೂಗಿನ ಕಥೆ

ಮೂಲ : ಶ್ರೀ ವೈ.ಕಂ. ಮಹಮ್ಮದ್ ಬಷೀರ್

ವಾರ್ತಾ ಪತ್ರಿಕೆಗಳಲ್ಲಿ ಅದು ಪ್ರಮುಖ ವಾರ್ತೆಯಾಗಿ ಪ್ರಕಟಗೊಂಡಿತ್ತು. ವಿದ್ಯಾವಂತರು, ವಿವೇಕಿಗಳು ಎಂಬ ಭೇದವಿಲ್ಲದೆ ಜನಗಳ ಮಧ್ಯೆ ವಿವಾದಕ್ಕೆಡೆಗೊಟ್ಟ ಸಂಚಲನ ವಾರ್ತೆಯಾಗಿತ್ತದು..... ಅವನ ಮೂಗಿನ ವೃತ್ತಾಂತ.

ವಿಶ್ವವಿಖ್ಯಾತವಾದ ಆ ಮೂಗಿನ ಒಡೆಯನಿಗೆ ಇಪ್ಪತ್ತನಾಲ್ಕನೆಯ ವರ್ಷ ತುಂಬಿತ್ತು. ಅದಕ್ಕೂ ಮೊದಲು ಅವನ ಬಗ್ಗೆ ಯಾರಿಗೂ ಏನೂ ತಿಳಿದಿರಲಿಲ್ಲ. ಇದೀಗ ಅವನ ಬದುಕಿನಲ್ಲಿ ಇಪ್ಪತ್ನಾಲ್ಕನೆಯ ವರ್ಷ ಪ್ರಮುಖ ಸ್ಥಾನ ಪಡೆದಿತ್ತು.

ಈ ಕತೆಯಲ್ಲಿನ ಹೀರೋ, ಅಡಿಗೆಯವನಲ್ಲಿ ಅಡಿಗೆ ಕೆಲಸ ಮಾಡುತ್ತಿದ್ದವನಿಗೆ ಸಹಾಯಕನಾಗಿದ್ದ ಒಬ್ಬ ಹುಡುಗ ಅಷ್ಟೇ. ಅವನು ಬುದ್ಧಿವಂತನೇನೂ ಅಲ್ಲ. ಓದುಬರಹ ಬಾರದವ. ಅವನ ಸಮಯವೆಲ್ಲಾ ಹೆಚ್ಚುಕಡಿಮೆ ಅಡಿಗೆ ಕೋಣೆಯಲ್ಲಿಯೇ ಕಳೆಯುತ್ತಿತ್ತು. ಹೊರಗೆ ಏನು ನಡೆಯುತ್ತಿದೆಯೆಂಬುದೂ ಸಹ ತಿಳಿಯದವನಿಗೆ. ಹೊಟ್ಟೆಗೆ ಎಷ್ಟು ಬೇಕೋ ಅಷ್ಟನ್ನು ಅಲ್ಲಿಯೇ ತಿನ್ನುತ್ತಿದ್ದ. ತೃಪ್ತಿಯಾಗಿ ನಶ್ಯ ಏರಿಸುತ್ತಿದ್ದ. ಕೆಲಸವಿಲ್ಲದಾಗ ಅಲ್ಲಿಯೇ ಒಂದು ಮೂಲೆಯಲ್ಲಿ ಬಿದ್ದು ನಿದ್ದೆ ಮಾಡುತ್ತಿದ್ದ. ಅವನ ಬದುಕೆಲ್ಲಾ ಹೀಗೆಯೇ ಕಳೆದು ಹೋಗುತ್ತಿತ್ತು.

ಅವನಿಗೆ ವಾರ, ತಾರೀಖು ಒಂದೂ ತಿಳಿಯುತ್ತಿರಲಿಲ್ಲ. ಅವನ ತಾಯಿ ಮೊದಲನೇ ತಾರೀಖಿನ ದಿನ ಬಂದು ಸಂಬಳ ತೆಗೆದುಕೊಂಡು ಹೋಗುತ್ತಿದ್ದಳು. ಆಗ ಮಗನಿಗೆ ಬೇಕಾದಷ್ಟು ನಶ್ಯವನ್ನು ಸಹ ತಂದುಕೊಟ್ಟು ಹೋಗುತ್ತಿದ್ದಳು.

ಅವನಿಗೆ ಇಪ್ಪತ್ತನಾಲ್ಕು ವರ್ಷವಾಗುವವರೆಗೂ ಇದೇ ರೀತಿ ಹಾಯಾಗಿ ತೃಪ್ತಿಯಿಂದ ಜೀವನ ನಡೆಸಿದ. ಅನಂತರ ನಡೆದಿತ್ತು ಈ ಅದ್ಭುತ ಸಂಘಟನೆ.....

ಅವನ ಮೂಗು ನಿಧಾನವಾಗಿ ಉದ್ದಕ್ಕೆ ಬೆಳೆಯಲಾರಂಭಿಸಿತು. ಬರಬರುತ್ತಾ ಅದು ಬಾಯಿಯ ಮೇಲಿಂದ ಗಡ್ಡದವರೆಗೂ ಬಂದುಬಿಟ್ಟಿತು.

ಅಷ್ಟಕ್ಕೇ ನಿಲ್ಲದೆ ಅದು ದಿನ ದಿನಕ್ಕೂ ಉದ್ದಕ್ಕೆ ಬೆಳೆಯುತ್ತಲೇ ಇತ್ತು. ಅದನ್ನು ಬಚ್ಚಿಟ್ಟುಕೊಳ್ಳುವುದು ಸಾಧ್ಯವಿಲ್ಲವಷ್ಟೇ! ಒಂದು ತಿಂಗಳಾಗುವಷ್ಟರಲ್ಲಿ ಅದು ಕಂಕುಳವರೆಗೂ ಬಂದುಬಿಟ್ಟಿತು. ಆದರೆ ಅದು ಅವನಿಗೇನೂ ತೊಂದರೆಯನ್ನುಂಟು ಮಾಡಿರಲಿಲ್ಲ. ಎಂದಿನಂತೆಯೇ ಉಸಿರಾಡುತ್ತಿದ್ದ. ಎಂದಿನಂತೆಯೇ ನಶ್ಯ ಏರಿಸುತ್ತಿದ್ದ. ಎಂದಿನಂತೆಯೇ ವಾಸನೆಯನ್ನು ಆಘ್ರಾಣಿಸುತ್ತಿದ್ದ. ಇವಕ್ಕೆಲ್ಲಾ ಏನೂ ಅಡ್ಡಿ ಬರಲಿಲ್ಲ ಅದು.

ಆದರೆ ವಿಪರೀತ ಉದ್ದಕ್ಕೆ ಬೆಳೆದ ಆ ಮೂಗಿನಿಂದಾಗಿ ಆ ಬಡ ಅಡಿಗೆಯವನು ಕೆಲಸದಿಂದ ವಜಾ ಮಾಡಲ್ಪಟ್ಟ.

"ಕೆಲಸದಿಂದ ತೆಗೆದು ಹಾಕಿದ ಇವನನ್ನು ಕೂಡಲೇ ಹಿಂದಕ್ಕೆ ತೆಗೆದುಕೊಳ್ಳಬೇಕು" ಎಂದು ಯಾವ ಸಂಸ್ಥೆಯೂ ಮುಂದಕ್ಕೆ ಬರಲಿಲ್ಲ. ರಾಜಕೀಯ ಪಕ್ಷಗಳೂ ಕೂಡ ಈ ಅನ್ಯಾಯದ ಕುರಿತು ತುಟಿ ಬಿಚ್ಚಲಿಲ್ಲ.

"ಯಾವ ಕಾರಣದಿಂದಾಗಿ ಇವನನ್ನು ತೆಗೆದಿರಿ?" ಎಂದು ಯಾವ ಮಾನವತಾ ಸಂಘಟನೆ ಕೇಳಲಿಲ್ಲ.

ಪಾಪ! ಬಡ ಅಡಿಗೆಯವ.....

ಅವನನ್ನು ಕೆಲಸದಿಂದ ತೆಗೆದುಹಾಕಿದ ಕಾರಣವನ್ನು ಸಹ ಅವನಿಗೆ ಹೇಳಲಿಲ್ಲ. ಅವನು ಕೆಲಸ ಮಾಡುವ ಸ್ಥಳದ ಸುತ್ತಮುತ್ತಲೂ ವಾಸಿಸುತ್ತಿದ್ದವರಿಗೆ ಇವನಿಂದಾಗಿ ಶಾಂತಿಯಿಲ್ಲವಾಗಿತ್ತು. ಪ್ರತಿದಿನವೂ ಇವನ ಮೂಗನ್ನು ನೋಡಲು ಎಲ್ಲೆಲ್ಲಿಂದಲೋ ಜನ ಬರುತ್ತಿದ್ದರು. ಫೋಟೋಗ್ರಾಫರ್‌ರಿಂದ ಸಹ ತೊಂದರೆಯುಂಟಾಗುತ್ತಿತ್ತು. ಒಂದೊಂದು ಸಲ ಅವರ ಮನೆಗಳಿಂದ ಸಣ್ಣಪುಟ್ಟ ವಸ್ತುಗಳು ಮಾಯವಾಗುತ್ತಿದ್ದವು. ಅಂದರೆ ಬಂದು ಹೋಗುವವರು ತಮ್ಮ ಕೈಚಳಕ ತೋರಿಸುತ್ತಿದ್ದರು.

ಕೆಲಸ ಹೋಗಲು ಕಾರಣವಾದ ಈ ಉದ್ದನೆಯ ಮೂಗು ಅವನಿಗೆ ಸಾಕಷ್ಟು ಪ್ರಚಾರ ತಂದುಕೊಟ್ಟಿತ್ತು.

ದೂರ ದೂರಗಳಿಂದ ಜನ ಬಂದು ಅವನ ಉದ್ದನೆಯ ಮೂಗನ್ನು ನೋಡಿ ಆಶ್ಚರ್ಯದಿಂದ ದಂಗಾಗುತ್ತಿದ್ದರು. ಕೆಲವರು ಮುಟ್ಟಿ ಸಹ ನೋಡುತ್ತಿದ್ದರು. ಆದರೆ ಯಾರೂ ಸಹ "ಏನಾದರೂ ತಿಂದೆಯಾ? ಊಟ ಆಯಿತೇ? ಏಕೆ ಸುಸ್ತಾಗಿ ಕಾಣುತ್ತೀ? ಮೈ ಹುಷಾರಿಲ್ಲವೇ?" ಎಂದು ಕೇಳುವ ಗೋಜಿಗೆ ಹೋಗುತ್ತಿರಲಿಲ್ಲ. ಅವನಿಗೆ ಮನೆಯಲ್ಲಿ ತಿನ್ನಲು ಏನೂ ಇರಲಿಲ್ಲ. ಅವನಿಗೆ ಎಷ್ಟೋ ಅವಶ್ಯಕವಾದ ನಶ್ಯ ಸಹ ಇರಲಿಲ್ಲ.

ಒಂದು ದಿನ ಅವನು ತಾಯಿಯನ್ನು ಕರೆದು "ಈ ಗಲಾಟೆ ಸಹಿಸಲಾಗುತ್ತಿಲ್ಲ. ಇವರನ್ನೆಲ್ಲಾ ಹೊರಕ್ಕೆ ಕಳುಹಿಸಿ ಬಾಗಿಲು ಹಾಕಿಬಿಡು" ಎಂದ.

ಅವನ ತಾಯಿ, ಅದೇ ರೀತಿ ಬಾಗಿಲು ಹಾಕಿದಳು. ಅದೇ ಅವನಿಗೆ ಅದೃಷ್ಟವನ್ನು ತಂದಂತಿತ್ತು. ಬಂದ ಜನ ಅವಳಿಗೆ ಲಂಚ ಕೊಡಬಂದರು. 'ನಿನ್ನ ಮಗನ ಮೂಗನ್ನು ನೋಡ್ತೀವಿ' ಎಂದರು. ಅವಳು ಒಪ್ಪಿದಳು. ಆದರೆ ಮತ್ತೆ ಕೆಲವು ಮಂದಿ ಇದು ಅನ್ಯಾಯ ಎಂದು ಕೂಗಲಾರಂಭಿಸಿದರು. ಸರ್ಕಾರ ಈ ಸಂಘಟನೆಯ ಮೇಲೆ ಏನೂ ಕ್ರಮ ಕೈಗೊಳ್ಳುತ್ತಿಲ್ಲವೆಂದು ಕೆಲವು ಸಂಘ ಸಂಸ್ಥೆಗಳು ಗಲಾಟೆ ಎಬ್ಬಿಸಿದವು.

ಉದ್ದನೆಯ ಮೂಗಿನ ಯಜಮಾನನ ಸಂಪಾದನೆ ದಿನದಿನಕ್ಕೂ ಹೆಚ್ಚಾಗ ತೊಡಗಿತು. ಬರೀ ಹೆಚ್ಚಾಗತೊಡಗಿದ್ದೇ ಅಲ್ಲ, ಸುಮಾರು ಆರು ವರ್ಷಗಳಲ್ಲಿ ಅವನು ಕೋಟ್ಯಾಧೀಶ್ವರನಾಗಿಬಿಟ್ಟಿದ್ದ.

ಇಷ್ಟರಲ್ಲಿಯೇ ಮೂರು ಸಿನಿಮಾಗಳಲ್ಲಿ ನಟಿಸಿದ್ದ. ಅವನು ನಟಿಸಿದ ಚಿತ್ರಗಳು ಗಲ್ಲಾಪೆಟ್ಟಿಗೆ ತುಂಬಿಸಿ ದಿಗ್ವಿಜಯ ಸಾಧಿಸಿದ್ದವು. ಆರು ಜನ ಕವಿಗಳು ಅವನ ಗುಣಗಣಗಳನ್ನು ಹೊಗಳುತ್ತಾ ಕವನಗಳನ್ನು ಬರೆದಿದ್ದರು. ಒಂಬತ್ತು ಜನ ಲೇಖಕರು ಅವನ ಜೀವನ ಚರಿತ್ರೆಯನ್ನು ಗದ್ಯದಲ್ಲಿ ಬಣ್ಣಿಸಿದರು.

ಅವನೊಂದು ಬಂಗಲೆಯಲ್ಲಿ ವಾಸಿಸುತ್ತಿದ್ದುದೇ ಅಲ್ಲದೆ ಒಂದು ಗೆಸ್ಟ್ ಹೌಸನ್ನೂ ಮೈನ್‌ಟೈನ್ ಮಾಡುತ್ತಿದ್ದ. ಅಲ್ಲಿ ಗಿರಾಕಿಗಳಿಗಾಗಿ ಸದಾ ಊಟ

ಸಿದ್ಧವಾಗಿರುತ್ತಿತ್ತು. ಅವನಿಗೀಗ ಇಬ್ಬರು ಸೆಕ್ರೆಟರಿಗಳಿದ್ದರು. ಇಬ್ಬರೂ ಯುವತಿಯರೇ. ಆದರೆ ಅವರಿಬ್ಬರೂ ಅವನನ್ನು ಪ್ರೀತಿಸತೊಡಗಿದ್ದರು, ಆರಾಧಿಸುತ್ತಿದ್ದರು. ಇಬ್ಬರು ಹುಡುಗಿಯರು ಒಬ್ಬನನ್ನು ಪ್ರೀತಿಸಿದರೆ ಆಗುವುದೇನು? ಪರಿಸ್ಥಿತಿ ಹೇಗಿದ್ದೀತು? ಸರಿ. ಆ ಉದ್ದನೆಯ ಮೂಗಿನ ಒಡೆಯನಿಗೆ ತೊಂದರೆಗಳು ಪ್ರಾರಂಭವಾದವು.

ಮತ್ತೊಂದು ಕಡೆ ಅವನನ್ನು ಆರಾಧಿಸುವ ಜನರು ಹೆಚ್ಚಾಗತೊಡಗಿದರು. ಹೊಕ್ಕುಳವರೆಗೂ ಬೆಳೆದ ಆ ಮೂಗಿನ ವ್ಯಕ್ತಿಯನ್ನು ತುಂಬಾ ಗೌರವದಿಂದಲೂ, ಹೆಮ್ಮೆಯಿಂದಲೂ ನೋಡುತ್ತಿದ್ದರು. ಪ್ರತಿಯೊಂದು ವಿಷಯದ ಬಗ್ಗೆಯೂ ಅವನ ಅಭಿಪ್ರಾಯವನ್ನು ತಿಳಿದುಕೊಂಡು ಪತ್ರಿಕೆಗಳಲ್ಲಿ ಪ್ರಮುಖವಾಗಿ ಪ್ರಕಟಿಸುತ್ತಿದ್ದರು.

“ಒಂದು ಗಂಟೆಗೆ ಹತ್ತು ಸಾವಿರ ಕಿ.ಮೀ. ವೇಗದಲ್ಲಿ ಪ್ರಯಾಣಿಸುವ ವಿಮಾನವನ್ನು ತಯಾರಿಸಲಾಗಿದೆ.....” ಇದರ ಬಗ್ಗೆ ಅವನ ಅಭಿಪ್ರಾಯ ಏನು?

“ಇಂತಹ ಕಡೆ ಡಾಕ್ಟರರೊಬ್ಬರು ಸತ್ತುಹೋದ ವ್ಯಕ್ತಿಗೆ ಮತ್ತೆ ಪ್ರಾಣ ಬರುವಂತೆ ಮಾಡಿದ್ದಾರೆ” ಇದರ ಬಗ್ಗೆ ಅವನ ಕಾಮೆಂಟ್ ಎಂತಹದು?

ಜನ ಯಾವುದಾದರೂ ವಿಶೇಷ ವಿಷಯವನ್ನಾಗಲೀ, ಸಂಘಟನೆಯ ಬಗ್ಗೆಯಾಗಲೀ ಕೇಳಿದ ಕೂಡಲೇ “ಇದರ ಬಗ್ಗೆ ನಮ್ಮ ಉದ್ದ ಮೂಗಿನಾತ ಏನನ್ನುತ್ತಾನೆ?” ಎಂದು ಪ್ರಶ್ನಿಸುತ್ತಿದ್ದರು.

ಆಕಸ್ಮಾತ್ ಅವನು ಅದರ ಬಗ್ಗೆ ಏನೂ ಅಭಿಪ್ರಾಯ ವ್ಯಕ್ತಪಡಿಸದಿದ್ದಲ್ಲಿ ಆ ವಿಷಯಕ್ಕೆ ಪ್ರಾಮುಖ್ಯತೆ ಕೊಡದೆ ತಳ್ಳಿ ಹಾಕುತ್ತಿದ್ದರು. ಹೀಗಾಗಿ ಅವನು ಪ್ರತಿಯೊಂದು ವಿಷಯದ ಕುರಿತು ಕಾಮೆಂಟ್ ಮಾಡಲೇಬೇಕಾಗುತ್ತಿತ್ತು. ಪೇಯಿಂಟಿಂಗ್ಸ್, ವ್ಯಾಪಾರ, ಫೋಟೋಗ್ರಫಿ, ಪ್ರಿಂಟಿಂಗ್ ಪ್ರೆಸ್, ಕಾದಂಬರಿ, ನ್ಯೂಸ್ ಪೇಪರ್ಸ್, ಬೇಟೆ, ಆತ್ಮ, ಅಳಿದ ನಂತರ ಮಾನವ..... ಹೀಗೆ ಪ್ರತಿಯೊಂದು ವಿಷಯದ ಬಗ್ಗೆಯೂ ಅವನು ತನ್ನ ಅಭಿಪ್ರಾಯವನ್ನು ವ್ಯಕ್ತಪಡಿಸಬೇಕಾಗುತ್ತಿತ್ತು.

ಅದೇ ಸಮಯದಲ್ಲಿ ಆ ಉದ್ದನೆಯ ಮೂಗಿನ ವ್ಯಕ್ತಿಯನ್ನು ಅಪಹರಿಸುವ ಪ್ರಯತ್ನ ಸಹ ನಡೆದಿತ್ತು. ಚರಿತ್ರೆಯ ಪುಟಗಳನ್ನು ತಿರುವಿ ಹಾಕಿದರೆ ಇಂತಹ ಘಟನೆಗಳು ಲೆಕ್ಕವಿಲ್ಲದಷ್ಟು ಕಾಣಬರುತ್ತದೆಯಲ್ಲವೇ.....?

ಕದ್ದೊಯ್ಯುವುದೆಂದರೇನು? ನೀವು ಬಂಜರು ಭೂಮಿಯನ್ನು ಹಸನು ಮಾಡಿ, ಸಸಿಗಳನ್ನು ಹಾಕಿ, ಪ್ರತಿದಿನ ನೀರು ಗೊಬ್ಬರ ಹಾಕುತ್ತಾ ದರ ಸುತ್ತಲೂ ಬೇಲಿ ಹಾಕುತ್ತೀರಿ. ಅದು ಫಲ ಕೊಡುವ ವೇಳೆಗೆ ಬೇರೆಯವರಾರೋ ಬಂದು ಆ ಸಂಪತ್ತು, ನೆಲ ಎಲ್ಲಾ ತಮ್ಮದೆಂದು ವಶಪಡಿಸಿಕೊಳ್ಳುತ್ತಾರೆ. ಅಂತಹುದೇ ಇದು.

ಮೊದಮೊದಲು ಸರ್ಕಾರ ಆತನನ್ನು ತಮ್ಮ ಬಲೆಯಲ್ಲಿ ಹಾಕಿಕೊಳ್ಳಲು ಪ್ರಯತ್ನಿಸಿತು. 'ಉದ್ದನೆಯ ಮೂಗುಳ್ಳವರಲ್ಲಿ ಪ್ರಮುಖ' ಎಂಬ ಬಿರುದನ್ನು ಕೊಟ್ಟು, ಮೆಡಲನ್ನೂ ಕೊಟ್ಟು ಸತ್ಕರಿಸಿತು. ರಾಷ್ಟ್ರಾಧ್ಯಕ್ಷರು ತಮ್ಮ ಸ್ವಹಸ್ತದಿಂದ ಮೆಡಲನ್ನು ಅವನ ಕೊರಳಲ್ಲಿ ಹಾಕಿದರು. ಕೈ ಕುಲುಕುವುದಕ್ಕೆ ಬದಲಾಗಿ ಅವನ ಉದ್ದನೆಯ ಮೂಗನ್ನು ಸವರಿದರು. ನೂರಾರು ಕ್ಯಾಮೆರಾಗಳು ಇದನ್ನು ಫೋಟೋ ತೆಗೆದವು. ಅದನ್ನು ಪ್ರತಿಯೊಂದು ಥಿಯೇಟರಿನಲ್ಲಿಯೂ ನ್ಯೂಸ್ ರೀಲಿನಲ್ಲಿ ತೋರಿಸಿದರು.

ಅನಂತರ ರಾಜಕೀಯ ವ್ಯಕ್ತಿಗಳ ದೃಷ್ಟಿ ಅವನ ಮೇಲೆ ಬಿತ್ತು "ನಮ್ಮ ಕಾಮ್ರೆಡ್ ಉದ್ದನೆಯ ಮೂಗಿನ ವ್ಯಕ್ತಿ..... ಪ್ರಜೆಗಳ ಕಷ್ಟಗಳನ್ನು ಪರಿಹರಿಸಲು ನಾಯಕತ್ವ ವಹಿಸಬೇಕು" ಎಂದು ಕೆಲವರೂ "ಉದ್ದನೆಯ ಮೂಗಿನ ವ್ಯಕ್ತಿ ಆತನೇ ನಮ್ಮ ಕಷ್ಟಗಳನ್ನು ಪರಿಹರಿಸಬಲ್ಲ ನಾಯಕ" ಎಂದು ಕೆಲವರು ಘೋಷಿಸಿದರು.

ಅವನು ಪಾರ್ಟಿಯಲ್ಲಿ ಸೇರಲೇಬೇಕೆಂಬ ಒತ್ತಡ ಹೆಚ್ಚಾಯಿತು. ಆದರೆ ಯಾವ ಪಾರ್ಟಿಯಲ್ಲಿ? ನೂರಾರು ಪಾರ್ಟಿಗಳಿವೆಯಲ್ಲಾ ಯಾವ ಪಾರ್ಟಿಯಲ್ಲಿ ಸೇರಬೇಕು? ಒಬ್ಬನೇ ವ್ಯಕ್ತಿ ಎಷ್ಟು ಪಾರ್ಟಿಗಳಲ್ಲಿ ಸೇರಬಲ್ಲ? ಆದ್ದರಿಂದ ಅವನು ಸ್ಪಷ್ಟವಾಗಿ ಹೇಳಿಬಿಟ್ಟ. "ನಾನು ತುಂಬಾ ಬಳಲಿದ್ದೇನೆ. ಆದ್ದರಿಂದ ಯಾವ ಪಾರ್ಟಿಯಲ್ಲಿಯೂ ಸೇರಲಾರೆ."

ಅವನ ಇಬ್ಬರು ಸೆಕ್ರೆಟರಿಗಳಲ್ಲಿ ಒಬ್ಬಳು ಹೇಳಿದಳು. "ನೀನು ನನ್ನನ್ನು ಪ್ರೀತಿಸುತ್ತಿದ್ದೀಯಾದರೆ ನನ್ನ ಪಾರ್ಟಿಯಲ್ಲಿ ಸೇರು."

ಅವನು ಮಾತನಾಡಲಿಲ್ಲ.

ಆದರೆ ಅದೇ ಸಂದರ್ಭದಲ್ಲಿ ಒಂದು ಪಾರ್ಟಿ ಹಠಾತ್ತಾಗಿ "ನಮ್ಮ ಪಾರ್ಟಿ ಉದ್ದನೆಯ ಮೂಗಿನ ವ್ಯಕ್ತಿಯ ಪಾರ್ಟಿ, ಅವನ ಪಕ್ಷ ಪ್ರಜೆಗಳ ಪಕ್ಷ" ಎಂದು ಸಾರಿತು.

ಕೂಡಲೇ ಉಳಿದ ಪಾರ್ಟಿಯವರೆಲ್ಲಾ ಒಂದಾಗಿ ಅವನ ಸೆಕ್ರೆಟರಿ ಮತ್ತೊಬ್ಬಳನ್ನು ತಮ್ಮ ಕಡೆ ಸೆಳೆದುಕೊಂಡು ಒಂದು ಸ್ಟೇಟ್‌ಮೆಂಟ್ ಬಿಡುಗಡೆ ಮಾಡಿದರು.

"ಉದ್ದನೆಯ ಮೂಗಿನ ವ್ಯಕ್ತಿ ಜನಗಳನ್ನು ಮೋಸ ಮಾಡುತ್ತಿದ್ದಾನೆ. ನಮ್ಮನ್ನೆಲ್ಲಾ ಭ್ರಾಂತಿಗೊಳಿಸಿದ್ದಾನೆ. ನನ್ನನ್ನೂ ಈ ಮೋಸದಲ್ಲಿ ಭಾಗಿಯಾಗುವಂತೆ ಮಾಡಿದ್ದಾನೆ. ನಾನು ಈಗ ಹೇಳುತ್ತಿದ್ದೇನೆ ಕೇಳಿ, ಅವನ ಮೂಗು, ಉದ್ದನೆಯ ಮೂಗು ಸಹಜವಾಗಿ ಬೆಳೆದಿದ್ದಲ್ಲ..... ಅದೊಂದು ರಬ್ಬರ್ ಮೂಗು....."

ಕೂಡಲೇ ವಾರ್ತಾ ಪತ್ರಿಕೆಗಳು ಮುಖಪುಟಗಳಲ್ಲಿ "ಉದ್ದನೆಯ ಮೂಗು ರಬ್ಬರ್‌ನಿಂದ ಮಾಡಿದ್ದು" ಎಂದು ಪ್ರಮುಖವಾಗಿ ಪ್ರಕಟಿಸಿದುವು.

ಜನ ರೊಚ್ಚಿಗೆದ್ದು ಉರಿದು ಬಿದ್ದರು. ಪ್ರೆಸಿಡೆಂಟರಿಗೆ ಲೆಕ್ಕವಿಲ್ಲದಷ್ಟು ಟೆಲಿಫೋನ್ ಕಾಲ್ಸ್ ಹೋದವು. ಪತ್ರಗಳನ್ನು ಬರೆದರು. ಟೆಲಿಗ್ರಾಂಗಳನ್ನೂ ಕಳುಹಿಸಲಾರಂಭಿಸಿದರು. ಪ್ರೆಸಿಡೆಂಟರಿಗೆ ವಿಶ್ರಾಂತಿಯಿಲ್ಲದಾಯಿತು.

"ಈ ಉದ್ದನೆಯ ಮೂಗನ್ನು ನಾಶಮಾಡಿ ಆ ರಬ್ಬರ್ ಮೂಗನ್ನು ಧ್ವಂಸಮಾಡಿ."

ಉದ್ದನೆಯ ಮೂಗಿನವನ ಪಾರ್ಟಿ ಡೌನ್, ಡೌನ್... ಕ್ರಾಂತಿಗೆ ಜಯವಾಗಲಿ.

ಎಂದು ಘೋಷಣೆಗಳನ್ನು ಕೂಗಲಾರಂಭಿಸಿದರು. ಹೀಗಾಗಿ ಉದ್ದನೆಯ ಮೂಗಿನ ವ್ಯಕ್ತಿಯನ್ನು ಸಪೋರ್ಟ್ ಮಾಡುತ್ತಿದ್ದ ಪಾರ್ಟಿ ಅವನ ಮತ್ತೊಬ್ಬ ಸೆಕ್ರೆಟರಿಯಿಂದ ಹೇಳಿಕೆಯೊಂದನ್ನು ಕೊಡಿಸಿತು.

"ಪ್ರಿಯ ಪ್ರಜೆಗಳೇ..... ಆ ಹೇಳಿಕೆ ಶುದ್ಧ ಸುಳ್ಳು. ನಮ್ಮ ಕಾಮ್ರೆಡ್ ಆಕೆಯನ್ನು ಪ್ರೀತಿಸಲಿಲ್ಲ. ಅದಕ್ಕಾಗಿ ಈ ರೀತಿಯ ಮೋಸದಿಂದ ಕೂಡಿದ ಸುಳ್ಳು ಆರೋಪಗಳನ್ನು ಮಾಡುತ್ತಿದ್ದಾಳೆ. ಆಕೆ ಉದ್ದನೆ ಮೂಗಿನ ಮಾನ್ಯ ವ್ಯಕ್ತಿಯನ್ನೂ, ಆತನ ಆಸ್ತಿಪಾಸ್ತಿಗಳನ್ನೂ ವಶಪಡಿಸಿಕೊಳ್ಳಬೇಕೆಂದು ಒಳಸಂಚು ಮಾಡಿ, ಅದು ನೆರವೇರದುದರಿಂದ ಈ ರೀತಿ ಕೀಳು ಮನೋಭಾವದಿಂದ ಆರೋಪ ಮಾಡತೊಡಗಿದ್ದಾಳೆ. ಉದ್ದನೆ ಮೂಗಿನ ವ್ಯಕ್ತಿಯ ಪರ್ಸನಲ್ ಸೆಕ್ರೆಟರಿ, ನಾನು ನಿಜ ಹೇಳುತ್ತಿದ್ದೇನೆ. ಅವನದು ರಬ್ಬರ್ ಮೂಗಲ್ಲ..... ನಿಜವಾದದ್ದೇ..... ನಮ್ಮ ಮೂಗಿನಂತಹುದೇ. ಈ ಕಷ್ಟ ಸಮಯದಲ್ಲಿ ನೀವೆಲ್ಲಾ ಅವನನ್ನು ಸಪೋರ್ಟ್ ಮಾಡಬೇಕು..... ನಮಗೆ ನಿಮ್ಮ ಅಭಿವೃದ್ಧಿಯ ಹೊರತು ಬೇರೆ ಆಲೋಚನೆಗಳೇನೂ ಇಲ್ಲ....."

ಜನರಿಗೆ ದಿಕ್ಕು ತೋಚದಂತಾಯಿತು. ಯಾರ ಮಾತನ್ನು ನಂಬುವುದು ಯಾರ ಮಾತನ್ನು ಬಿಡುವುದು ಎಂದು ತೋಚದಂತಾಯಿತು. ಉದ್ದನೆಯ ಮೂಗಿನ ವ್ಯಕ್ತಿಯ ವಿರುದ್ಧವಾಗಿ, ವಿರೋಧ ಪಕ್ಷಗಳು ಸರ್ಕಾರಕ್ಕೆ ಟೆಲಿಗ್ರಾಂ ಕೊಟ್ಟವು.

"ಕೈಲಾಗದ ಸರ್ಕಾರದ ಪ್ರಜೆಗಳನ್ನು ಮೋಸ ಮಾಡಿದೆ. ನೀವು ಅವನಿಗೆ ಬಿರುದು, ಮೆಡಲ್ ಎಲ್ಲಾ ಕೊಟ್ಟಿದೀರಿ. ಅಧ್ಯಕ್ಷರು ಕೂಡಾ ಆ ಪಾರ್ಟಿಯವರೇ. ಆದ್ದರಿಂದ ಅಧ್ಯಕ್ಷರು ರಾಜೀನಾಮೆ ಕೊಡಬೇಕು, ಮಂತ್ರಿಗಳೆಲ್ಲಾ ರಾಜೀನಾಮೆ ಕೊಡಬೇಕು. ಉದ್ದನೆಯ ಮೂಗಿನ ವ್ಯಕ್ತಿಯನ್ನು ಶಿಕ್ಷೆಗೆ ಗುರಿಪಡಿಸಬೇಕು."

ಅಧ್ಯಕ್ಷರು ಭೀಕರ ಪರಿಸ್ಥಿತಿಯನ್ನು ಎದುರಿಸಬೇಕಾಯಿತು. ಮಿಲಿಟರಿಯನ್ನುಪಯೋಗಿಸಿ ಉದ್ದಮೂಗಿನವನ ಮನೆಗೆ ಮುತ್ತಿಗೆ ಹಾಕಿ ಅವನನ್ನು ಅರೆಸ್ಟ್ ಮಾಡಿ ಕೊಂಡೊಯ್ದರು.

ಅನಂತರ ವ್ಯಕ್ತಿಯನ್ನು ಕುರಿತು ಎಂತಹ ಸಮಾಚಾರವೂ ಹೊರಬೀಳಲಿಲ್ಲ. ಜನ ಹೆಚ್ಚು ಕಡಿಮೆ ಅವನನ್ನು ಮರೆತೇಬಿಟ್ಟರು.

ಕೆಲವು ದಿನಗಳ ನಂತರ ಹಠಾತ್ತಾಗಿ ಒಂದು ಸಮಾಚಾರ ಹೊರಬಿತ್ತು. ಆ ವಾರ್ತೆಯನ್ನು ದೇಶದ ಅಧ್ಯಕ್ಷರು ಪ್ರಕಟಿಸಿದ್ದರು. "ಮಾರ್ಚ್ ಒಂಬತ್ತನೆಯ

ತಾರೀಖು ಉದ್ದನೆಯ ಮೂಗಿನ ವ್ಯಕ್ತಿಯನ್ನು ವಿವಿಧ ದೇಶಗಳಿಂದ ಬಂದ ನಲವತ್ತೆಂಟು ಮಂದಿ ವೈದ್ಯರು, ಪರಿಣತರು ಪರೀಕ್ಷಿಸುತ್ತಾರೆ. ಅದು ರಬ್ಬರ್ ಮೂಗು ಹೌದೇ ಅಲ್ಲವೇ ಎಂಬುದನ್ನು ನಿರ್ಣಯಿಸುತ್ತಾರೆ."

ಎಲ್ಲಾ ವಾರ್ತಾ ಸಂಸ್ಥೆಗಳೂ ಆ ಸಮಾವೇಶಕ್ಕೆ ತಮ್ಮ ಫೋಟೋ ಗ್ರಾಫರ್ಸ್‌ನ್ನು ಕಳುಹಿಸಿಕೊಟ್ಟುವು. ಅದನ್ನು ನ್ಯೂಸ್‌ರೀಲ್ ತೆಗೆಯಲು ಏರ್ಪಾಟುಗಳನ್ನು ಮಾಡಲಾಯಿತು.

ಆದರೆ ಈ ವಿಷಯ ಕೇಳಿದ ಕೂಡಲೇ ಪ್ರಜೆಗಳು ಆವೇಶದಿಂದ ಆ ಪಟ್ಟಣದ ಮೇಲೆ ದಾಳಿ ಮಾಡಿದರು. ಬಸ್ಸು, ಲಾರಿಗಳನ್ನು ಸುಟ್ಟರು. ಅಂಗಡಿಗಳನ್ನು ಲೂಟಿ ಮಾಡಿದರು. ಪೋಲೀಸ್ ಸ್ಟೇಷನ್ನುಗಳನ್ನು ಸುಟ್ಟರು. ಸರ್ಕಾರಿ ಆಫೀಸುಗಳನ್ನು ಲೂಟಿ ಮಾಡಿದರು. ಉದ್ದನೆಯ ಮೂಗಿನ ವ್ಯಕ್ತಿಗಾಗಿ ನಡೆದ ಈ ಗಲಾಟೆಯಲ್ಲಿ ಬಹಳ ಮಂದಿ ಸ್ತ್ರೀಯರೂ, ವೃದ್ಧರೂ ಸತ್ತರು.

ಮಾರ್ಚ್ ಒಂಬತ್ತನೆಯ ತಾರೀಖು, ಬೆಳಿಗ್ಗೆ ಒಂಬತ್ತು ಗಂಟೆ, ಅಧ್ಯಕ್ಷರ ಅರಮನೆ ಮುಂದೆ ಕಿಕ್ಕಿರಿದ ಜನಸಂದಣಿ. ಸ್ಪೀಕರ್‌ನಲ್ಲಿ ಜನಗಳನ್ನು ನಿಶ್ಯಬ್ದವಾಗಿರುವಂತೆ ವಿನಂತಿ ಮಾಡಲಾಗುತ್ತಿತ್ತು.

ಪರೀಕ್ಷೆ ಪ್ರಾರಂಭವಾಯಿತು.

ಉದ್ದನೆಯ ಮೂಗಿನ ವ್ಯಕ್ತಿಯ ಸುತ್ತಲೂ ಅಧ್ಯಕ್ಷರು, ಮಂತ್ರಿಗಳೂ ಕುಳಿತಿದ್ದರು. ಡಾಕ್ಟರುಗಳೆಲ್ಲಾ ಬಂದರು. ಒಬ್ಬರು ಮೂಗನ್ನು ಪರೀಕ್ಷಿಸುತ್ತಿದ್ದರು. ಒಬ್ಬರು ಬಾಯಿತೆರೆ ಅಂದರು. ಒಬ್ಬೊಬ್ಬರು ಒಂದೊಂದು ವಿಧವಾಗಿ ಪರೀಕ್ಷಿಸುತ್ತಿದ್ದಂತೆ ಒಬ್ಬಾತ ತಟ್ಟನೆ ದೊಡ್ಡ ಸೂಜಿಯಿಂದ ಅವನ ಮೂಗಿನ ಮೇಲೆ ಚುಚ್ಚಿದ. ಉದ್ದನೆಯ ಮೂಗಿನ ವ್ಯಕ್ತಿ ನೋವಿನಿಂದ ಅರಚಿದ. ಎಲ್ಲರನ್ನೂ ಆಶ್ಚರ್ಯಗೊಳಿಸುವಂತೆ ಅವನ ಮೂಗಿನಿಂದ ರಕ್ತ ತೊಟ್ಟಿಕ್ಕತೊಡಗಿತು.

ವೈದ್ಯರೆಲ್ಲಾ ಒಮ್ಮತದಿಂದ 'ಅವನದು ನಿಜವಾದ ಮೂಗು' ಎಂದು ಪ್ರಕಟಿಸಿದರು. ಕೂಡಲೇ ಉದ್ದನೆಯ ಮೂಗಿನ ವ್ಯಕ್ತಿಯ ಸೆಕ್ರೆಟರಿ ಅವನ ಮೂಗಿನ ಮೇಲೆ ಮುತ್ತಿಟ್ಟು ತನ್ನ ಸಂತೋಷವನ್ನು ವ್ಯಕ್ತಪಡಿಸಿದಳು.

"ಲಾಂಗ್ ಲಿವ್ ಕಾಮ್ರೆಡ್" ಎಂಬ ನಿನಾದಗಳು ಅಲ್ಲಿ ಪ್ರತಿಧ್ವನಿಸಿದುವು. ಅಧ್ಯಕ್ಷರು ಕೂಡಲೇ ಉದ್ದನೆಯ ಮೂಗಿನ ವ್ಯಕ್ತಿಯನ್ನು ಪಾರ್ಲಿಮೆಂಟ್ ಮೆಂಬರಾಗಿ ನೇಮಕ ಮಾಡಿದರು. ಇದರಿಂದ ಪ್ರಜೆಗಳಲ್ಲಿ ಉದ್ರೇಕ ಕಡಿಮೆಯಾಗಿ ಶಾಂತಿ ನೆಲೆಸಿತು.

ಆದರೆ.....

ಮಿಕ್ಕ ರಾಜಕೀಯ ಪಾರ್ಟಿಗಳೆಲ್ಲಾ ಸೇರಿ ಒಂದು ಯುನೈಟೆಡ್ ಫ್ರಂಟ್ ಆಗಿ ಏರ್ಪಾಟಾಯಿತು.

"ಮಂತ್ರಿಮಂಡಲ ರಾಜೀನಾಮೆ ನೀಡಬೇಕು. ಪ್ರಜೆಗಳನ್ನು ಮೋಸ ಪಡಿಸುತ್ತಿದ್ದಾರೆ..... ಅದು ರಬ್ಬರ್ ಮೂಗೇ ಹೌದು. ಡೌನ್..... ಡೌನ್..... ಎಂದು ಕೂಗುತ್ತಾ ಮುಂದೆ ಸಾಗಿತು.



# ನೀಲಕಾಂತಿ

**ಮೂಲ : ಶ್ರೀ ವೈ.ಕಂ. ಮಹಮ್ಮದ್ ಬಷೀರ್**

**ಈ** ಕಥೆ ನನ್ನ ಜೀವನದಲ್ಲಿ ನಡೆದ ಆಶ್ಚರ್ಯಕರವಾದ ಸಂಘಟನೆಗಳಲ್ಲೊಂದು. ಬರೀ ಆಶ್ಚರ್ಯಕರವಾದ ಸಂಘಟನೆಯೇ ಅಲ್ಲ..... ಅದ್ಭುತವಾದ ಸಂಘಟನೆ ಸಹ. ಈ ಸಂಘಟನೆಯಲ್ಲಿನ ಸತ್ಯ ಸಂಗತಿಯನ್ನು ಸೈಂಟಿಫಿಕ್ ಆಗಿ ಆಲೋಚಿಸಿ ತಿಳಿದುಕೊಳ್ಳಬೇಕೆಂದು ಪ್ರಯತ್ನಿಸಿದೆ. ಆದರೆ ನನ್ನ ಪ್ರಯತ್ನದಲ್ಲಿ ಸಫಲೀಕೃತನಾಗಲಿಲ್ಲ ನಾನು. ನೀವು ಇದರಲ್ಲಿನ ರಹಸ್ಯವನ್ನು ಕಂಡುಹಿಡಿದರೂ ಹಿಡಿಯಬಹುದೆಂದು ನನ್ನ ಭಾವನೆ.

ನಡೆದದ್ದೇನೆಂದರೆ.....

ನಾನೊಂದು ಬಾಡಿಗೆ ಮನೆಗಾಗಿ ಹುಡುಕುತ್ತಿದ್ದೆ. ಹೊಸ ಮನೆಯೇ ಆಗಿರಬೇಕೆಂದೇನೂ ನಾನು ಬಯಸಲಿಲ್ಲ. ಆದರೂ ನನಗೆ ಬೇಕಾದ ರೀತಿಯಲ್ಲಿ ಅನುಕೂಲವಾಗಿರುವ ಮನೆ ಮಾತ್ರ ಸಿಕ್ಕಿರಲಿಲ್ಲ. ಸದ್ಯಕ್ಕೆ ನಾನಿದ್ದ ಮನೆ ಸ್ವಲ್ಪವೂ ಅನುಕೂಲವಾಗಿರಲಿಲ್ಲ. ತುಂಬಾ ರಿಪೇರಿಗಳನ್ನು ಮಾಡಿಸಬೇಕಾದ ದುರವಸ್ಥೆಯಲ್ಲಿತ್ತು. ಮನೆಯ ಯಜಮಾನನಾದರೋ ವಿಪರೀತ ನಿರ್ಲಕ್ಷ್ಯದ ಧೋರಣೆಯಿಂದ "ನಿಮಗಿಷ್ಟವಿಲ್ಲದಿದ್ದರೆ ಮನೆ ಖಾಲಿ ಮಾಡಿ" ಎನ್ನುವ ಸ್ವಭಾವದವನು. ನಾನು ಮತ್ತೇನು ಮಾಡಲು ಸಾಧ್ಯ? ಅಲ್ಲಿಯೇ ಇದ್ದುಕೊಂಡು ಬೇರೆ ಮನೆಗಾಗಿ ಹುಡುಕಾಡತೊಡಗಿದ್ದೆ.

ಹಾಗೆ ಹುಡುಕಾಡುತ್ತಿದ್ದಾಗ ನಗರದ ಗದ್ದಲದಿಂದ ದೂರವಾದ ಪ್ರದೇಶದಲ್ಲಿ ಒಂದು ಮಹಡಿ ಮನೆ ಕಾಣಿಸಿತು. ಮುನಿಸಿಪಲ್ ಲಿಮಿಟ್‌ನ ಹತ್ತಿರದಲ್ಲಿತ್ತು ಅದು. ಅದರ ಮೇಲೊಂದು ಹಳೆಯ ಬೋರ್ಡು ನೇತಾಡುತ್ತಿತ್ತು.

"ಮನೆ ಬಾಡಿಗೆಗಿದೆ"

ಮನೆ ಪೂರ್ತಿ ನೋಡಿದೆ. ಮೇಲೆ ಎರಡು ಕೋಣೆಗಳು, ಬಾಲ್ಕನಿ ಇತ್ತು. ಗ್ರೌಂಡ್ ಫ್ಲೋರ್‌ನಲ್ಲಿ ನಾಲ್ಕು ಕೋಣೆಗಳಿದ್ದವು. ಇವುಗಳಲ್ಲದೆ ಒಂದು ಬಾತ್‌ರೂಂ, ಅಡಿಗೆ ಮನೆ, ನಲ್ಲಿ ಎಲ್ಲಾ ಇದ್ದುವು..... ಕರೆಂಟ್ ಹೊರತಾಗಿ, ಅಡಿಗೆ ಮನೆಗೆ ಎದುರಾಗಿ ಒಂದು ಬಾವಿ ಇತ್ತು. ಮನೆಯ ಒಂದು ಮೂಲೆಯಲ್ಲಿ ಲೆಟ್ರಿನ್ ಇತ್ತು. ಕಾಂಪೌಂಡಿನ ತುಂಬಾ ವಿಧವಿಧವಾದ ಸಸಿಗಳಿದ್ದವು. ಆ ಮನೆಗೆ ಇದ್ದ ಮತ್ತೊಂದು ವಿಶೇಷವೇನೆಂದರೆ..... ನೆರೆಹೊರೆ ಇಲ್ಲದ್ದು. ನನಗೆ ತುಂಬಾ ಆಶ್ಚರ್ಯವೂ ಸಂತೋಷವೂ ಉಂಟಾಯಿತು. ಆ ಮನೆಗೆ ಇದುವರೆಗೆ ಯಾರೂ ಬಾಡಿಗೆಗೆ ಬಾರದೆ ಏಕೆ ಖಾಲಿಯಾಗಿ ಉಳಿದಿದೆಯೆಂಬುದೇ ನನಗರ್ಥವಾಗಲಿಲ್ಲ. ಬೇಗ ಬೇಗ ಸಾಲಮಾಡಿ ಹಣ ಹೊಂದಿಸಿಕೊಂಡು, ಎರಡು ತಿಂಗಳ ಹಣ ಕೊಟ್ಟು ಮನೆಯ ಬೀಗದ ಕೈ ತೆಗೆದುಕೊಂಡೆ.

ಅದೇ ದಿನ ಪೇಟೆಗೆ ಹೋಗಿ ಒಂದು ಲಾಂದ್ರ ಕೊಂಡುತಂದೆ. ಕೋಣೆಗಳನ್ನೆಲ್ಲಾ ಸ್ವಚ್ಛವಾಗಿ ಗುಡಿಸಿಯಾಯಿತು. ಅಡಿಗೆ ಮನೆ, ಬಾತ್‌ರೂಮ್ ಎಲ್ಲವನ್ನೂ ಸ್ವಚ್ಛ ಮಾಡಿ ತೊಳೆದೆ. ತುಂಬಾ ಕಸ ಇದ್ದುದರಿಂದಾಗಿ ಎರಡೆರಡು ಸಲ ತೊಳೆಯಬೇಕಾಗಿ ಬಂತು. ಅನಂತರ ಹಾಯಾಗಿ ಸ್ನಾನ ಮಾಡಿದೆ. ಮನಸ್ಸಿಗೆಷ್ಟೊ ತೃಪ್ತಿಯೆನಿಸಿತು.

ನಿರಾಳವಾಗಿ ಹೋಗಿ ಬಾವಿಯ ಕಟ್ಟೆಯ ಮೇಲೆ ಕುಳಿತುಕೊಂಡೆ. ನನಗೆ ತುಂಬಾ ಸಂತೋಷವಾಗಿತ್ತು. ಹಾಗೆಯೇ ಕನಸು ಕಾಣುತ್ತಾ ಕುಳಿತುಕೊಳ್ಳ ಬೇಕೆನಿಸಿತು. ಒಬ್ಬ ಅಡುಗೆಯವನನ್ನು ನೋಡಿಕೊಳ್ಳಬೇಕು..... ಆದರೆ ಅದರ ಅವಶ್ಯಕತೆಯಿದೆಯೇ ಎಂದು ಆಲೋಚಿಸಿದೆ. ಏಕೆಂದರೆ ಇನ್ನೊಬ್ಬರನ್ನು ತಂದು ಮನೆಯಲ್ಲಿಟ್ಟುಕೊಳ್ಳುವುದೂ ರಿಸ್ಕೇ..... ನನ್ನೊಬ್ಬನಿಗೆ ಎಷ್ಟಾಗಬೇಕು? ನಾನೇ ಮಾಡಿಕೊಳ್ಳಲಾರೆನೇ? ಇಲ್ಲವಾದರೆ ಬೇರೆ ಏರ್ಪಾಟೂ ಮಾಡಿಕೊಳ್ಳಬಹುದು. ಅಡಿಗೆಯವ ಅನಾವಶ್ಯಕ. ಬೆಳಿಗ್ಗೆ ಸ್ನಾನ ಮಾಡಿದ ನಂತರ ಹೋಟಲಿಗೆ ಹೋಗಿ ಫ್ಲಾಸ್ಕಿನಲ್ಲಿ ಟೀ ತಂದಿಟ್ಟುಕೊಳ್ಳುವುದು, ಹಾಗೆಯೇ ಹೋಟಲಿನ

ಪ್ರೊಪ್ರೈಟರಿಗೆ ಮಧ್ಯಾಹ್ನ ರಾತ್ರಿ ಊಟ ಕಳುಹಿಸಿ ಎಂದು ಹೇಳಿ ಬಂದರಾಯಿತು. ಇನ್ನು ಪೋಸ್ಟ್‌ಮ್ಯಾನನ್ನು ಭೆಟ್ಟಿಯಾಗಿ ನಾನಿಲ್ಲಿದ್ದೀನಿ, ನನ್ನ ಪತ್ರಗಳನ್ನು ಈ ವಿಳಾಸಕ್ಕೆ ತಂದುಕೊಡು ಎನ್ನಬೇಕು..... ಈ ರೀತಿ ಆಲೋಚಿಸುತ್ತಾ ಬಾವಿಯೊಳಕ್ಕೆ ಇಣಿಕಿ ನೋಡಿದೆ. ಅದರಲ್ಲಿ ನೀರಿದೆಯೋ ಇಲ್ಲವೋ ಸಹ ತಿಳಿಯದಂತೆ ಒತ್ತಾಗಿ ಪೊದೆಗಳಂತೆ ಬೆಳೆದ ಕೆಲಸಕ್ಕೆ ಬಾರದ ಕಸಕಡ್ಡಿ ಕಾಣಿಸಿತು. ಒಂದು ಕಲ್ಲನ್ನು ಎತ್ತಿಕೊಂಡು ಬಾವಿಯೊಳಕ್ಕೆ ಬೀಸಿ ಒಗೆದೆ. "ನೀರಿದೆ" ಎಂಬಂತೆ ದಬ್ ಎಂಬ ಶಬ್ದ ಕೇಳಿಸಿತು.

ಮುಂಚಿನ ದಿನವೆಲ್ಲಾ ನಿದ್ರೆಯಿಲ್ಲದೆ ಕಳೆದಿದ್ದೆ. ಹೋಟೆಲಿನ ಓನರ್ ಬಳಿ ನನ್ನ ಅಕೌಂಟ್ ಸೆಟಲ್ ಮಾಡಿಕೊಂಡು, ಮನೆಯ ಓನರ್‌ನನ್ನೊಮ್ಮೆ ಭೇಟಿಯಾದೆ. ನನ್ನ ಸಾಮಾನುಗಳನ್ನೆಲ್ಲಾ ಗಂಟು ಕಟ್ಟಿದೆ. ಗ್ರಾಮ್‌ಫೋನ್, ರಿಕಾರ್ಡ್ಸ್ ಪೇಪರ್ಸ್, ನನ್ನ ಬುಕ್ಸ್, ಚೇರ್ಸ್, ಬುಕ್‌ಷೆಲ್ಫ್ ಎಲ್ಲವನ್ನೂ ಪ್ಯಾಕ್ ಮಾಡಿ ಸಾಯಂಕಾಲದೊಳಗಾಗಿ ಹೊಸ ಮನೆಗೆ ಬಂದುಬಿಟ್ಟೆ.

ನನ್ನ ಕೋಣೆಯಲ್ಲಿ ಸಾಮಾನುಗಳನ್ನೆಲ್ಲಾ ಅಣಿಯಾಗಿರಿಸಿದೆ. ನನ್ನ ಹತ್ತಿರವಿದ್ದ ಗ್ರಾಮ್‌ಫೋನ್ ರಿಕಾರ್ಡುಗಳಲ್ಲಿ ಯಾರ ಹಾಡಿನಿಂದ ನನ್ನ ರೂಮಿಗೆ ಪ್ರಾರಂಭೋತ್ಸವ ಮಾಡಲಿ ಎಂದುಕೊಂಡವನು ಅದರ ವಿಷಯ ನಂತರ ಆಲೋಚಿಸೋಣ ಎಂದು ಮನೆಯ ಬಾಗಿಲಿಗೆ ಬೀಗ ಜಡಿದು ಹೊರಕ್ಕೆ ಬಂದೆ.

ಮೊದಲು ಪೋಸ್ಟ್‌ಮ್ಯಾನನ್ನು ಕಂಡು ನನ್ನ ಪರಿಚಯ ಹೇಳಿಕೊಂಡು ಹೊಸ ವಿಳಾಸ ತಿಳಿಸಿದೆ.

ಅದನ್ನು ಕೇಳಿದಾಕ್ಷಣ ಆತ ಮೆಟ್ಟಿಬಿದ್ದು "ಅಯ್ಯೋ ನೀವು ಆ ಮನೆಗೇಕೆ ಹೋದಿರಿ ಸಾರ್? ಆ ಮನೆಯಲ್ಲಿ ಒಬ್ಬ ಯುವತಿ ಆತ್ಮಹತ್ಯೆ ಮಾಡಿ ಕೊಂಡಿದ್ದರಿಂದ ಈಗ ಅಲ್ಲಿ ಯಾರೂ ವಾಸ ಮಾಡೋಕೇ ಆಗ್ತಿಲ್ಲಾ ಸಾರ್. ಅದಕ್ಕೇ ಆ ಮನೆ ಖಾಲಿ ಬಿದ್ದಿರೋದು....." ಎಂದ ನಡುಗುತ್ತಾ.

"ಆತ್ಮಹತ್ಯೆ ಮಾಡಿಕೊಂಡು ಸತ್ತದ್ದೇ, ಹೇಗೆ?" ಎಂದೆ ನಾನು.

"ಆ ಮನೆಯಲ್ಲೊಂದು ಬಾವಿ ಇದೆಯಲ್ಲಾ ಸಾರ್, ಅದರಲ್ಲೇ ಬಿದ್ದು ಸತ್ತದ್ದು! ಆ ನಂತರ ಆ ಮನೆಯ ಪ್ರಶಾಂತತೆಯೇ ಹಾಳಾಯಿತು. ರಾತ್ರಿಯ ಹೊತ್ತು ಬಾಗಿಲು ತಾನಾಗಿಯೇ ತೆರೆದುಕೊಳ್ಳುವುದು..... ನಲ್ಲಿಯಲ್ಲಿ ನೀರು ಧಾರೆಯಾಗಿ ಸುರಿಯುವುದು ಇವೆಲ್ಲಾ....."

"ಬಾಗಿಲು ತಾನಾಗಿಯೇ ತೆರೆದುಕೊಳ್ಳುತ್ತದೆಯೇ? ನಲ್ಲಿ ತಿರುಗಿಸದೇನೇ ನೀರು ಬರುತ್ತದೆಯೇ? ಇದೊಳ್ಳೇ ಆಶ್ಚರ್ಯವಾಗಿದೆಯಲ್ಲಾ. ನಲ್ಲಿಗೆ ಬೀಗ ಹಾಕಿದ್ದೀರೇಕೆ ಅಂತ ಕೇಳಿದ್ದಕ್ಕೆ ಮನೆ ಯಜಮಾನ 'ಬೀದೀಲಿ ಹೋಗೋರು ನಲ್ಲಿಯ ಕೆಳಗೆ ಸ್ನಾನಮಾಡಿ ಗಲೀಜು ಮಾಡುತ್ತಾರೆ, ಅದಕ್ಕೇ ಬೀಗ ಹಾಕಿದೀವಿ' ಅಂದರಲ್ಲಾ..... ಬಾತ್‌ರೂಮಿನಲ್ಲೂ ನಲ್ಲಿಗೆ ಬೀಗ ಹಾಕಿದೆ. ಹಾಗಾದರೆ ಇದೇ ಕಾರಣ?" ಎಂದೆ ನಾನು ಆಶ್ಚರ್ಯದಿಂದ.

"ದೆವ್ವ ಬಂದು ನಿಮ್ಮ ಕತ್ತು ಹಿಸುಕುತ್ತದೆ, ನಿಮ್ಮನ್ನು ಹೆದರಿಸುತ್ತದೆ. ಈ ವಿಷಯ ನಿಮಗಾರೂ ಹೇಳಲಿಲ್ಲವೇ ಸಾರ್?" ಎಂದ ಪೋಸ್ಟ್‌ಮನ್.

ಎರಡು ತಿಂಗಳ ಅಡ್ವಾನ್ಸ್ ಸಹ ಕೊಟ್ಟಾಗಿದೆ. ಇನ್ನೇನು ತಾನೆ ಮಾಡಲು ಸಾಧ್ಯ? ಆಲೋಚಿಸುತ್ತಲೇ ಹೇಳಿದೆ. "ಓಹ್ ಅಷ್ಟೇ ತಾನೇ? ಅದೇನೂ ಅಷ್ಟು ತೀವ್ರವಾಗಿ ಪರಿಗಣಿಸಬೇಕಾದ ವಿಷಯವಲ್ಲ ಬಿಡು. ಒಂದು ಅಪೂರ್ವವಾದ ಶಕ್ತಿ ನನ್ನ ಜತೆಗಿದೆ. ಅದೇ ಎಲ್ಲವನ್ನೂ ನೋಡಿಕೊಳ್ಳುತ್ತದೆ" ಎಂದೆ ಗಾಂಭೀರ್ಯದ ಮುಖವಾಡ ತೊಟ್ಟು.

ಆ ನಂತರ ಅಲ್ಲಿಗೆ ಹತ್ತಿರವಾಗಿದ್ದ ಹೋಟಲಿನಲ್ಲಿ ಟೀ ಕುಡಿದೆ. ಹೋಟಲಿನ ಯಜಮಾನನೊಂದಿಗೆ ನನಗೆ ಎರಡು ಹೊತ್ತೂ ಮನೆಗೆ ಊಟ ಕಳುಹಿಸುವಂತೆ ಹೇಳಿದೆ. ಮನೆಯ ವಿಳಾಸ ತಿಳಿಸಿದ ಕೂಡಲೇ "ನಾನು ನಿಮಗೆ ಮಧ್ಯಾಹ್ನದ ಊಟ ಕಳುಹಿಸಬಲ್ಲೆ, ಆದರೆ ರಾತ್ರಿ ಕಳುಹಿಸೊಕ್ಕಾಗೊಲ್ಲ ಸಾರ್. ಸರ್ವರ್ಸ್ ರಾತ್ರಿಯ ಹೊತ್ತು ಆ ಕಡೆ ಬರಲು ಹೆದರುತ್ತಾರೆ. ಒಬ್ಬ ಯುವತಿ ಆ ಮನೆಯಲ್ಲಿನ ಬಾವಿಯಲ್ಲಿ ಬಿದ್ದು ಆತ್ಮಹತ್ಯೆ ಮಾಡಿಕೊಂಡಿದ್ದಾಳೆ. ರಾತ್ರಿಯ ಹೊತ್ತು ಅಲ್ಲಿಯೇ ಓಡಾಡುತ್ತಾ ಎಲ್ಲರನ್ನೂ ಹೆದರಿಸುತ್ತಿರುತ್ತಾಳಂತೆ ಸಾರ್. ನಿಮಗೆ ದೆವ್ವಗಳೆಂದರೆ ಹೆದರಿಕೆ ಇಲ್ಲವೇ ಸಾರ್?" ಎಂದರಾತ.

ಸರಿ, ಹೋಟಲಿನಿಂದ ಬ್ಯಾಂಕಿಗೆ ಹೊರಟೆ. ಅಲ್ಲಿ ನನ್ನ ಮೂವರು ಸ್ನೇಹಿತರು ಕೆಲಸ ಮಾಡುತ್ತಿದ್ದರು. ನಾನು ಮನೆ ಬದಲಾಯಿಸಿದ ವಿಚಾರ ಹೇಳಿ, ನನ್ನ ಹೊಸ ಬಾಡಿಗೆಯ ಮನೆಯ ವಿವರ ಕೊಟ್ಟಾಕ್ಷಣ ಅವರಿಗೆ ಎಲ್ಲಿಲ್ಲದ ಸಿಟ್ಟು ಬಂದಿತ್ತು.

"ನಿನಗೇನು ತಲೆಯಲ್ಲಿ ಬುದ್ಧಿ, ಜ್ಞಾನ ಇಲ್ಲವೇನು? ದೆವ್ವ ಆವಹಿಸಿರೋ ಮನೇನ ಬಾಡಿಗೆಗೆ ಹಿಡೀತೀಯಾ? ಆ ದೆವ್ವ ಮುಖ್ಯವಾಗಿ ಗಂಡಸರಿಗೇ ಹೆಚ್ಚು ಕಾಟ ಕೊಡುತ್ತಂತೆ."

ನನಗೀಗ ಮತ್ತೊಂದು ವಿಷಯ ತಿಳಿದಂತಾಯಿತು. ಆ ದೆವ್ವ ಪುರುಷದ್ವೇಷಿ ಅನ್ನೋದು.

"ನೀನು ಆ ಮನೆ ಬಾಡಿಗೆಗೆ ಹಿಡಿಯುವ ಮುನ್ನ ನಮಗೊಮ್ಮೆ ಹೇಳಬೇಕಾಗಿತ್ತು" ಎಂದ ಒಬ್ಬ ಮಿತ್ರ.

"ಸರಿ ನನಗೇನು ಗೊತ್ತು ಇಷ್ಟೆಲ್ಲಾ ಸಮಾಚಾರ ಇರುತ್ತೇಂತ. ಹೋಗಲಿ ಆ ಹುಡುಗಿ ಏಕೆ ಆತ್ಮಹತ್ಯೆ ಮಾಡಿಕೊಂಡಿದ್ದು ಗೊತ್ತೇನು?" ಎಂದೆ.

"ಪ್ರೇಮ ಪ್ರಕರಣ" ಎಂದ ಒಬ್ಬ.

ಎರಡನೆಯವ ವಿವರವಾಗಿ ಹೇಳಿದ. "ಆ ಹುಡುಗಿಯ ಹೆಸರು ಭಾರ್ಗವಿ ಅಂತ. ಇಪ್ಪತ್ತೊಂದರ ತರುಣಿ. ಆಕೆ ಬಿ.ಎ. ಪಾಸಾಗಿದ್ದಳು. ಅದೇ ಸಮಯದಲ್ಲಿ ಒಬ್ಬ ಯುವಕನನ್ನು ಗಾಢವಾಗಿ ಪ್ರೀತಿಸಿದಳು. ಆದರೆ ಆತ ಸ್ವಲ್ಪ ಕಾಲದ ನಂತರ ಮತ್ತೊಬ್ಬಳನ್ನು ಮದುವೆಯಾದ. ಸರಿಯಾಗಿ ಆ ಮದುವೆ ನಡೆದ ದಿನವೇ ಇಲ್ಲಿ ಭಾರ್ಗವಿ ಬಾವಿಯಲ್ಲಿ ಬಿದ್ದು ಆತ್ಮಹತ್ಯೆ ಮಾಡಿಕೊಂಡಳು....."

ಆ ಮಾತುಗಳನ್ನು ಕೇಳಿದ ನಂತರ ನನ್ನಲ್ಲಿ ಹೆದರಿಕೆ ಅನ್ನುವುದೇನಾದರೂ ಇದ್ದಲ್ಲಿ ಅದು ಮುಕ್ಕಾಲು ಪಾಲು ಕಡಿಮೆಯಾಯಿತೆಂದೇ ಹೇಳಬೇಕು.

"ಭಾರ್ಗವಿ ನನ್ನನ್ನೇನೂ ಮಾಡಲ್ಲ" ಎಂದೆ.

"ಏಕಂತೆ! ಇಷ್ಟು ಧೈರ್ಯ ಹೇಗೆ ಬಂತು ನಿನಗೆ?"

"ಮ್ಯಾಜಿಕ್ ಕಣ್ರಪ್ಪಾ, ಮ್ಯಾಜಿಕ್ ಅಪೂರ್ವ ಶಕ್ತಿಯೊಂದಿದೆ ನನ್ನ ಬಳಿ" ಎಂದೆ. ಆದರೆ ಅಂತಹುದೇನೂ ಇಲ್ಲವೆಂಬುದು ನನಗೇ ಗೊತ್ತಿತ್ತು.

"ನೋಡ್ತಾ ಇರು, ರಾತ್ರಿ ಒಂದು ಹೊತ್ತಿನಲ್ಲಿ ಹೆದರಿಕೆಯಿಂದ ಬೊಬ್ಬೆ ಹೊಡೀತಿ" ಎಂದರವರು.

ನಾನು ಉತ್ತರ ಕೊಡಲಿಲ್ಲ.

ಮನೆಗೆ ಹಿಂದಿರುಗಿ ಬಂದ ಕೂಡಲೇ ಕಿಟಕಿಗಳನ್ನೂ, ಬಾಗಿಲುಗಳನ್ನೂ ತೆರೆದಿಟ್ಟು ಬಾವಿಯ ಬಳಿ ಹೋದೆ.

"ಭಾರ್ಗವೀ....." ಎಂದು ಮೆಲ್ಲನೆ ಕೂಗಿದೆ.

"ಭಾರ್ಗವೀ..... ನಾವಿಬ್ಬರೂ ಭೇಟಿಯಾಗಿಲ್ಲ..... ಒಬ್ಬರನ್ನೊಬ್ಬರು ನೋಡಿದ್ದೂ ಇಲ್ಲ. ನಾನಿಲ್ಲಿ ಬಾಡಿಗೆಗಿರೋಣ ಅಂತ ಬಂದಿದೀನಿ. ನಾನು ಒಳ್ಳೆಯವನೇ ಅಂತ ತಿಳಕೊಂಡಿದೀನಿ. ಬ್ರಹ್ಮಚಾರಿ ನಾನು. ನಿನ್ನನ್ನು ಕುರಿತು ತುಂಬಾ ಕಂಪ್ಲೇಂಟ್ಸ್ ಕೇಳಿದೆ ಭಾರ್ಗವೀ..... ನೀನು ಇಲ್ಲಿ ಯಾರನ್ನೂ ಇರಗೊಡದೆ ಓಡಿಸುತ್ತಿದ್ದೀಯಂತೆ. ರಾತ್ರಿಯ ಹೊತ್ತಿನಲ್ಲಿ ತಿರುಗುತ್ತೀಯಂತೆ, ಬಾಗಿಲು ಬಡಿಯುತ್ತೀಯಂತೆ, ಗಂಡಸರ ಕುತ್ತಿಗೆ ಹಿಚುಕಿ ಹೆದರಿಸುತ್ತೀಯಂತೆ. ಇವೆಲ್ಲಾ ನಾನು ನಿನ್ನ ಬಗ್ಗೆ ಕೇಳಿದ ವಿಷಯಗಳು. ನಾನೀಗ ಏನು ಮಾಡಬೇಕು ಭಾರ್ಗವೀ? ಎರಡು ತಿಂಗಳ ಬಾಡಿಗೆ ಬೇರೆ ಅಡ್ವಾನ್ಸಾಗಿ ಕೊಟ್ಟುಬಿಟ್ಟಿದ್ದೇನೆ. ನನಗೆ ಈ ಮನೆ ತುಂಬಾ ಹಿಡಿಸಿತು. ನಾನಿಲ್ಲಿಯೇ ಇದ್ದು ಕತೆ ಬರೀಬೇಕು ಅಂದುಕೋತಾ ಇದೀನಿ.

"ಭಾರ್ಗವೀ ನಿನಗೆ ಕತೆಗಳೂಂದರೆ ಇಷ್ಟಾನಾ? ನಿನಗಿಷ್ಟವಾದರೆ ನಾನು ಬರೆದ ಕತೆಗಳನ್ನ ಇಲ್ಲಿಯೇ ನಿಂತು ನಿನಗೆ ಓದಿ ಹೇಳುತ್ತೀನಿ. ಹೇಳು, ಹಾಗೆ ಮಾಡಲೇನು? ನಿನ್ನೊಂದಿಗೆ ಜಗಳ ಬೇಡ ನನಗೆ. ಏಕೆಂದರೆ ನಮ್ಮಿಬ್ಬರ ಮಧ್ಯೆ ಯಾವ ವೈರವೂ ಇಲ್ಲವಲ್ಲಾ! ನಾನು ಆಗಲೇ ಅನಾಲೋಚಿತವಾಗಿ ಬಾವಿಯಲ್ಲಿ ಕಲ್ಲೆಸೆದೆ..... ಅಂತಹ ತಪ್ಪು ಕೆಲಸ ಮತ್ತೊಮ್ಮೆ ಮಾಡೊಲ್ಲ ಅಂತ ಮಾತು ಕೊಡ್ತಿದೀನಿ ನಿನಗೆ. ನನ್ನ ಮಾತು ನಿನಗೆ ಕೇಳಿಸುತ್ತಿದೆಯೇನು?

ಭಾರ್ಗವಿ. ನನ್ನ ಬಳಿ ಬಹಳಷ್ಟು ಗ್ರಾಮ್‌ಫೋನ್ ರೆಕಾರ್ಡುಗಳಿವೆ. ಎಲ್ಲಾ ಒಳ್ಳೊಳ್ಳೇ ಹಾಡುಗಳು. ಅಂದ ಹಾಗೆ ನಿನಗೆ ಹಾಡುಗಳೆಂದರೆ ಇಷ್ಟ ತಾನೇ....."

ನಾನು ಯಾರೊಂದಿಗೆ ಮಾತನಾಡಿದೆ? ಗಿಡಗಳೊಂದಿಗೇ? ಮನೆಯೊಂದಿಗೇ? ಗಾಳಿಯೊಡನೆಯೇ? ಆಕಾಶದೊಂದಿಗೇ? ಭೂಮಿಯೊಂದಿಗೇ? ಯಾರೊಂದಿಗೆ..... ನಾನು ಭಾರ್ಗವೀಯ ಆತ್ಮದೊಂದಿಗೆ ಮಾತನಾಡಿದೆ. ನಾನೆಂದೂ ನೋಡಿರದ ಭಾರ್ಗವಿ, ಇಪ್ಪತ್ತೊಂದರ ಹರೆಯದ ತರುಣಿ, ಗಾಢವಾಗಿ ಪ್ರೀತಿಸಿ, ಪ್ರೀತಿಸಿದವನ ಪತ್ನಿಯಾಗಿ, ಅವನ ಸಹಚಾರಿಯಾಗಿ ಬಾಳಬೇಕೆಂದು ಬಯಸಿದವಳು..... ಆದರೆ ಅದೊಂದು ಹಗಲು ಕನಸಾಯಿತು ಅವಳ ಪಾಲಿಗೆ... ಪಾಪ!

"ಭಾರ್ಗವೀ" ಕೂಗಿದೆ ನಾನು.

"ನೀನು ಆ ರೀತಿ ಮಾಡಬಾರದಾಗಿತ್ತು. ನಾನು ನಿನ್ನನ್ನು ಆಕ್ಷೇಪಿಸುತ್ತಿಲ್ಲ. ನೀನು ಪ್ರೀತಿಸಿದ ವ್ಯಕ್ತಿ ನಿನ್ನನ್ನು ಗಾಢವಾಗಿ ಪ್ರೀತಿಸಲಿಲ್ಲ, ಮತ್ತೊಬ್ಬಳನ್ನು ಬಯಸಿದ..... ಮದುವೆಯಾದ. ನಿನಗೆ ಬದುಕೇ ಬೇಡವಾಯಿತು, ನಿಜ..... ಆದರೆ ಬದುಕು ಎಂದಿಗೂ ಇಂತಹ ಅನುಭವಗಳಿಂದಲೇ ಪೂರ್ಣಗೊಳ್ಳದು.

"ನೀನು ನಿಜವಾಗಿಯೂ ಪ್ರೀತಿಗಾಗಿಯೇ ಪ್ರಾಣ ಕಳೆದುಕೊಂಡೆಯಾ? ಎಂತಹ ಹುಚ್ಚಿಯಮ್ಮ ನೀನು! ಅಮಾಯಕಳು ನೀನು..... ಬದುಕನ್ನು ಕುರಿತು ನಿನಗೇನೇನೂ ತಿಳಿಯದು. "ಪ್ರೀತಿ" ಎನ್ನುವುದು ಅಂತ್ಯವಿಲ್ಲದ ಬದುಕಿಗೆ ಉದಯವಿದ್ದಂತೆ. ಹುಚ್ಚು ಹುಡುಗಿ..... ಗಂಡಸು ಜಾತಿಯ ಮೇಲೆಯೇ ದ್ವೇಷ ಬೆಳೆಸಿಕೊಂಡಿದೀಯಾ..... ನಿನಗೆ ಅನ್ಯಾಯ ಮಾಡಿದವನನ್ನು ಹೊರತಾಗಿ ಬೇರಾರನ್ನು ಕುರಿತೂ ನಿನಗೇನೂ ತಿಳಿಯದು. ಅವನು ನಿನಗೆ ಅನ್ಯಾಯ ಮಾಡಿದನೆಂದು ಗಂಡಸರೆಲ್ಲಾ ಅವನ ತರಹಾನೇ ಎಂದು ನಿಶ್ಚಯಿಸಿಕೊಂಡಿದ್ದೀ..... ಇದು ಸರಿಯೇ ಭಾರ್ಗವೀ..... ನೀನು ಆತ್ಮಹತ್ಯೆ ಮಾಡಿಕೊಳ್ಳದಿದ್ದಲ್ಲಿ ನಿನ್ನ ಅಭಿಪ್ರಾಯ ಸುಳ್ಳೆಂದು ನಿನಗೇ ಮನವರಿಕೆಯಾಗುತ್ತಿತ್ತು.

"ನಿನ್ನನ್ನು ಪ್ರೀತಿಸಿ, ಆರಾಧಿಸುವವರನ್ನು ನೀನೂ ಕಾಣಬಹುದಾಗಿತ್ತು. ಹೋಗಲಿ ಬಿಡು..... ಕಳೆದುಹೋದ ಕಾಲವನ್ನು ನೆನಪಿಸಿಕೊಂಡು

ಪ್ರಯೋಜನವಿಲ್ಲ. ಆದರೆ ನೀನು ನನಗೆಂತಹ ಕೆಡುಕನ್ನೂ ಮಾಡಬೇಡ..... ಇದು ನನ್ನ ಆಜ್ಞೆಯಲ್ಲ ಭಾರ್ಗವೀ..... ಪ್ರಾರ್ಥನೆ ಮಾತ್ರ. ನೀನು ಕತ್ತು ಹಿಸುಕಿ ಕೊಂದರೂ 'ಏಕೆ ಹೀಗೆ ಮಾಡಿದೆ?' ಎಂದು ಕೇಳುವವರು ಯಾರೂ ಇಲ್ಲ. ಕಾರಣ ನಾನು ಒಬ್ಬಂಟಿಗ..... ನನಗಾರೂ ಇಲ್ಲ.....

"ನನ್ನ ಪರಿಸ್ಥಿತಿ ನಿನಗರ್ಥವಾಗಿರಬೇಕಲ್ಲವೆ? ನಾವಿಬ್ಬರೂ ಈ ಮನೆಯಲ್ಲಿ ವಾಸಿಸದೆ ಗತ್ಯಂತರವಿಲ್ಲ. ಕೆಳಗಿನ ಅಂತಸ್ತಿನಲ್ಲಿನ ನಾಲ್ಕು ಕೋಣೆಗಳನ್ನೂ, ಬಾವಿಯನ್ನೂ ನೀನು ಬಳಸಿಕೋ. ಬಾತ್‌ರೂಮ್, ಕಿಚನ್ ಎರಡನ್ನೂ ಇಬ್ಬರೂ ಅರ್ಧರ್ಧ ಬಳಸಿಕೊಳ್ಳೋಣ. ಏನಂತೀಯ? ನಿನಗೆ ಈ ಅಗ್ರಿಮೆಂಟ್ ಹಿಡಿಸಿತೇ?" ಎಂದು ಎಲ್ಲಾ ವಿಷಯಗಳನ್ನೂ ವಿವರವಾಗಿ ಹೇಳಿದೆ.

ಈಗ ನನಗೆ ತೃಪ್ತಿಯಾಗಿತ್ತು. ರಾತ್ರಿಯಾಯಿತು, ಹೋಟಲಿಗೆ ಹೋಗಿ ಊಟಮಾಡಿ ಫ್ಲಾಸ್ಕಿನಲ್ಲಿ ಟೀ ತಂದಿಟ್ಟುಕೊಂಡೆ. ಟಾರ್ಚ್ ಒತ್ತಿ ಆ ಬೆಳಕಿನಲ್ಲಿ ಲಾಂದ್ರ ಹಚ್ಚಿದೆ. ಕೋಣೆಯೆಲ್ಲಾ ಅದರ ಕಾಂತಿಯಿಂದ ತುಂಬಿಹೋಯಿತು.

ಕೆಳಗಿನ ಅಂತಸ್ತಿಗೊಮ್ಮೆ ಹೋಗಿ ಟಾರ್ಚಿನ ಬೆಳಕಿನಲ್ಲಿ ಎಲ್ಲವನ್ನು ನೋಡಿ, ಕತ್ತಲಲ್ಲಿ ಸ್ವಲ್ಪ ಹೊತ್ತು ನಿಂತೆ. ಅಡಿಗೆಯ ಮನೆಗೊಮ್ಮೆ, ಬಾವಿಯ ಬಳಿಗೊಮ್ಮೆ ಹೋಗಿ ಬಂದೆ. ನಲ್ಲಿಗೆ ಬೀಗ ಹಾಕಬಾರದೆಂದು ತೀರ್ಮಾನಿಸಿ ಕೊಂಡೆ. ಮತ್ತೆ ಮೇಲಕ್ಕೆ ಬಂದು ನನ್ನ ಕೋಣೆಯಲ್ಲಿ ಕುಳಿತು ಟೀ ಕುಡಿದು ಕುರ್ಚಿಯಲ್ಲಿ ಆಸೀನನಾಗಿ ಬರೆಯಲು ಪ್ರಾರಂಭಿಸಿದೆ. ನನ್ನ ಹಿಂದೆ ಯಾರೋ ನಿಂತಿರುವಂತೆನಿಸಿತು. ಭಾರ್ಗವಿಯಿರಬಹುದೇ?

"ನಾನು ಬರೀತಾ ಇರೋವಾಗ ನನ್ನ ಹಿಂದೆ ನಿಂತು ನೋಡೋದು ನನಗೆ ಹಿಡಿಸೋಲ್ಲ..." ಎನ್ನುತ್ತಲೇ ಹಿಂತಿರುಗಿ ನೋಡಿದೆ. ಯಾರೂ ಇರಲಿಲ್ಲ.....

ಮತ್ತೆ ಬರವಣಿಗೆ ಮುಂದುವರಿಸಬೇಕೆನಿಸಲಿಲ್ಲ ನನಗೆ. ಕೋಣೆಯಲ್ಲಿ ಗಾಳಿಯಿರಲಿಲ್ಲ. ಹೊರಗೆ ಗಿಡಗಳ ಎಲೆ ಸಹ ಅಲುಗಾಡುತ್ತಿರಲಿಲ್ಲ. ಕಿಟಕಿಯಿಂದ ಹೊರಗೆ ನೋಡಿದಾಗ ಒಂದು ಲೈಟಿನ ಬೆಳಕು ಕಾಣಿಸಿತು. ಆದರೆ ಅದರ ಬಣ್ಣ ನೀಲಿ, ಕೆಂಪು, ಹಳದಿ ಇವುಗಳಲ್ಲಿ ಯಾವ ಬಣ್ಣದ್ದೆಂದು ಅರ್ಥವಾಗಲಿಲ್ಲ ನನಗೆ.

ಸ್ವಲ್ಪ ಹೊತ್ತು ರೆಕಾರ್ಡ್ಸ್ ಕೇಳಿ ಹಾಸಿಗೆಯಲ್ಲೊರಗಿದೆ. ಗಡಿಯಾರ ಟಿಕ್ ಟಿಕ್ ಎನ್ನುತ್ತಿದ್ದ ಶಬ್ದದ ಹೊರತಾಗಿ ಬೇರಾವ ಸದ್ದೂ ಇರಲಿಲ್ಲ. ಮಧ್ಯ ಮಧ್ಯದಲ್ಲಿ ನಲ್ಲಿಯಲ್ಲಿ ನೀರು ಸುರಿಯುತ್ತಿದ್ದಂತೆ ಬಾಗಿಲನ್ನು ಯಾರೋ ಬಡಿಯುತ್ತಿರುವಂತೆ ಸದ್ದಾಗಿತ್ತಷ್ಟೆ.

ಹಾಗೆಯೇ ನಿದ್ದೆ ನನ್ನನ್ನಾವರಿಸಿತ್ತು. ಮರುದಿನ ನಾನು ಏಳುವ ವೇಳೆಗೆ ಬೆಳಗಾಗ ಎಂಟು ಗಂಟೆಯಾಗಿತ್ತು. ಒಳ್ಳೇ ಗಾಢ ನಿದ್ರೆ ಹಿಡಿಸಿತ್ತು. ನನಗೆ ಎಂತಹ ಸಂಘಟನೆಗಳೂ ನಡೆಯಲಿಲ್ಲ. ಕೆಟ್ಟ ಕನಸುಗಳೂ ಬೀಳಲಿಲ್ಲ.

"ತುಂಬಾ ಥ್ಯಾಂಕ್ಸ್ ಭಾರ್ಗವೀ" ಎಂದುಕೊಂಡೆ.

"ಭಾರ್ಗವೀ, ನಿನ್ನನ್ನು ಕುರಿತು ಅನಾವಶ್ಯಕವಾಗಿ ಏನೇನೋ ಕಲ್ಪಿಸಿ ಕೊಂಡೆ. ಹಾಗೇನೂ ಇಲ್ಲ ಅಂತ ತಿಳಿಯಿತು. ನೀನು ಅನ್ಯಥಾ ಭಾವಿಸಬೇಡ."

ಹಗಲು ರಾತ್ರಿಗಳು ಹೀಗೆಯೇ ಕಳೆದು ಹೋಗುತ್ತಿದ್ದುವು. ದಿನಾ ರಾತ್ರಿ ಮಲಗುವ ಮುನ್ನ ರಿಕಾರ್ಡ್ಸ್ ಹಾಕುತ್ತಾ ಆ ಹಾಡನ್ನು ಕುರಿತು, ಅದನ್ನು ಹಾಡಿದವರನ್ನು ಕುರಿತು ಭಾರ್ಗವಿಗೆ ವಿವರವಾಗಿ ಹೇಳುತ್ತಿದ್ದೆ. ಹೀಗೆಯೇ ಎರಡು ತಿಂಗಳು ಕಳೆದುಹೋದವು.

ಈ ಮಧ್ಯ ಕಾಲದಲ್ಲಿ ಕಿರು ಕಾದಂಬರಿಯೊಂದನ್ನು ಬರೆದೆ. ಬಹಳ ಮಂದಿ ಮಿತ್ರರು ನನ್ನನ್ನು ನೋಡಲು ಮನೆಗೆ ಬರುತ್ತಿದ್ದರು. ಕೆಲವರು ರಾತ್ರಿಯ ಹೊತ್ತು ಇಲ್ಲಿಯೇ ಉಳಿಯುತ್ತಿದ್ದರು. ಆಗ ನಾನು ಕತ್ತಲನ್ನು ಉದ್ದೇಶಿಸಿ,

"ನೋಡು ಭಾರ್ಗವಿ..... ನನ್ನ ಕೆಲವು ಸ್ನೇಹಿತರು ರಾತ್ರಿ ಇಲ್ಲಿಯೇ ಇರಲು ಬಂದಿದ್ದಾರೆ. ಅವರಿಗೇನೂ ತೊಂದರೆಯಾಗಬಾರದು. ಹಾಗೇನಾದರೂ ಆದಲ್ಲಿ ಪೊಲೀಸಿನವರು ನನ್ನನ್ನು ಹಿಡಿದುಕೊಂಡು ಹೋಗುತ್ತಾರೆ. ತಿಳಿಯಿತೇನು? ಗುಡ್‌ನೈಟ್....." ಎನ್ನುತ್ತಿದ್ದೆ.

ದಿನಾ ಹೊರಗೆ ಹೋಗುವಾಗ "ಭಾರ್ಗವೀ..... ಮನೆ ಕಡೆ ಹುಷಾರು..... ಕಳ್ಳರಾರಾದರೂ ಬಂದು ನನ್ನ ಸಾಮಾನು ಎತ್ತಿಕೊಂಡು ಹೋಗಬಹುದು. ಅವರನ್ನು ಹೆದರಿಸು, ಕೊಂದರೂ ಪರವಾಗಿಲ್ಲ. ಆದರೆ ಅವರ ಹೆಣಗಳನ್ನು

ಮಾತ್ರ ಇಲ್ಲಿರಿಸಬೇಡ, ದೂರಕ್ಕೆ ನಾಲ್ಕೈದು ಮೈಲಿ ಆಚೆ ಎಸೆದುಬಿಡು. ಇಲ್ಲಾಂದರೆ ನಾವು ಅಪಾಯದಲ್ಲಿ ಸಿಕ್ಕಿಹಾಕಿಕೊಳ್ಳುತ್ತೇವೆ....." ಎನ್ನುತ್ತಿದ್ದೆ.

ಹೀಗೆಯೇ ಕಾಲ ಕಳೆಯುತ್ತಿತ್ತು.

ಒಂದು ದಿನ ರಾತ್ರಿ ಸುಮಾರು ಹತ್ತು ಗಂಟೆಯಾಗಿತ್ತು. ಅದಕ್ಕೆ ಮುಂಚೆ ಒಂದು ಗಂಟೆಯಾದರೂ ಕಾದಂಬರಿಯನ್ನು ಮುಂದುವರಿಸುವಲ್ಲಿ ಮಗ್ನನಾಗಿದ್ದೆ. ಕಥಾಗಮನ ವೇಗವಾಗಿ ಸಾಗುತ್ತಿದ್ದುದರಿಂದ ಬೇರೆ ಕಡೆ ನನ್ನ ಗಮನ ಹೋಗಲೇ ಇಲ್ಲ. ಆದರೆ ಲಾಂದ್ರದಲ್ಲಿ ಬೆಳಕು ಕ್ಷೀಣವಾಗ ತೊಡಗಿದುದರಿಂದ ನಾನು ಎಚ್ಚೆತ್ತುಕೊಳ್ಳಲೇಬೇಕಾಯಿತು.

ಲಾಂದ್ರ ಮೇಲೆತ್ತಿ ಅಲ್ಲಾಡಿಸಿ ನೋಡಿದೆ. ಅದರಲ್ಲಿ ಕೆರೊಸಿನ್ ಇಲ್ಲವೆಂಬುದು ತಿಳಿಯಿತು. ಆ ಬೆಳಕಿನಲ್ಲಿ ಕನಿಷ್ಠ ಪಕ್ಷ ಇನ್ನೊಂದು ಪುಟವನ್ನಾದರೂ ಬರೆಯಬಹುದಲ್ಲ ಎಂದುಕೊಂಡೆ. ಸ್ವಲ್ಪ ಹೊತ್ತು ಕಳೆಯಿತು. ಪೂರ್ತಿಯಾಗಿ ಎಣ್ಣೆ ಮುಗಿದು ಬತ್ತಿ ನಂದಿತು.

ಈಗೇನು ಮಾಡುವುದು ಎಂದು ಆಲೋಚಿಸಿದೆ. ಲೇಖನಿ ಕೆಳಗಿಟ್ಟು ಮಲಗುವ ಮನಸ್ಸಾಗಲಿಲ್ಲ. ಸರಿ, ನನ್ನ ಬ್ಯಾಂಕ್ ಮಿತ್ರರ ಬಳಿ ಸ್ವಲ್ಪ ಸೀಮೆಎಣ್ಣೆ ತಂದರಾಯಿತೆಂದುಕೊಂಡೆ. ಖಾಲಿ ಡಬ್ಬಾ, ಟಾರ್ಚ್ ತೆಗೆದುಕೊಂಡು ಬಾಗಿಲು ಹಾಕಿ ಕೆಳಕ್ಕಿಳಿದೆ. ಹೊರಗೆ ರಸ್ತೆಯ ಮೇಲೆ ಬೆಳದಿಂಗಳ ಕಾಂತಿ ಬೀಳುತ್ತಿತ್ತು. ಆಕಾಶದಲ್ಲಿ ಮೋಡಗಳು ಹಬ್ಬಿಕೊಳ್ಳುವ ಸೂಚನೆಯೂ ಕಾಣುತ್ತಿತ್ತು.....

ವೇಗವಾಗಿ ನಡೆಯತೊಡಗಿದೆ.

ಸ್ನೇಹಿತರ ಮನೆ ಸೇರಿ..... ಕೂಗಿ ಕರೆದೆ. ಮೂರುಸಲ ಕೂಗಿದ ನಂತರ ಒಬ್ಬ ಬಂದು ಸೈಡ್ ಗೇಟ್ ತೆಗೆದ. ಮೆಲ್ಲನೆ ಒಳಹೊಕ್ಕು ನೋಡಿದೆ. ನನ್ನ ಮಿತ್ರರೆಲ್ಲಾ ಒಂದೆಡೆ ಸೇರಿ ಕಾರ್ಡ್ಸ್ ಆಡುತ್ತಿದ್ದುದು ಕಾಣಿಸಿತು.

ನಾನು ಬಂದ ಕಾರಣ ತಿಳಿಸಿದೆ. ಅವರಲ್ಲಿ ಒಬ್ಬ "ಭಾರ್ಗವೀನ ತಂದುಕೊಡು ಎಂದು ಕೇಳಬೇಕಾಗಿತ್ತು" ಎಂದ. ಎಲ್ಲರೂ ನಕ್ಕರು, ಅವರೊಂದಿಗೆ ನಾನೂ ನಕ್ಕು ಸುಮ್ಮನಾದೆ. ಮತ್ತೇನೂ ಮಾತನಾಡಲಿಲ್ಲ.

"ನೀವು ನನಗೊಂದು ಕೊಡೆ ಸಹ ಕೊಡಬೇಕಾಗುತ್ತೆ" ಎಂದೆ ಹೊರಗೆ ಮಳೆಹನಿ ಪ್ರಾರಂಭವಾದದ್ದನ್ನು ಕೇಳಿ.

"ಮಳೆ ನಿಂತ ಮೇಲೆ ಹೋಗುವಿಯಂತೆ, ಅದುವರೆವಿಗೂ ಕಾರ್ಡ್ಸ್ ಆಡೋಣ ಬಾ" ಎಂದರು.

ನಾನೂ ನನ್ನ ಪಾರ್ಟನರ್ ಮೂರು ರೌಂಡ್ಸ್ ಸೋತು ಹೋದೆವು. ಕಾರಣ ನಾನು ಮನಸ್ಸಿಟ್ಟು ಆಡದೇ ಇದ್ದುದೇ ಆಗಿತ್ತು. ನನ್ನ ಮನಸ್ಸೆಲ್ಲಾ ನಾನು ಬರೆಯುತ್ತಾ ಮಧ್ಯದಲ್ಲಿ ನಿಲ್ಲಿಸಿ ಬಂದ ಕತೆಯ ಕಡೆಗೇ ಇತ್ತು..... ಸುಮಾರು ಒಂದು ಗಂಟೆಯ ವೇಳೆಗೆ ಮಳೆ ಕಡಿಮೆಯಾಯಿತು. ಕೆರೊಸಿನ್ ಡಬ್ಬಾ ಟಾರ್ಚ್ ಹಿಡಿದು ಮನೆಯ ಕಡೆ ಹೊರಟೆ. ಮೆಯಿನ್ ಗೇಟ್ ತೆಗೆದು ಒಳಹೊಕ್ಕೆ.

ನಾನು ಕೋಣೆಯಿಂದ ಹೊರಟಾಗ, ಎಣ್ಣೆ ತೀರಿದ್ದರಿಂದ ಲಾಂದ್ರ ಆರಿಹೋಗಿತ್ತು. ಕತ್ತಲು ಆವರಿಸಿತ್ತು. ಆನಂತರ ಮೂರು ಗಂಟೆಗಳ ಕಾಲ ಕಳೆದಿತ್ತು. ಆದರೆ ಈಗ ಒಳಗೆ, ಕೋಣೆಯಲ್ಲಿ ದೀಪ ಉರಿಯುತ್ತಿರುವುದು ಬಾಗಿಲ ಸಂದಿನಿಂದ ಕಾಣಿಸುತ್ತಿತ್ತು..... ನನಗನ್ನಿಸಿದ ವ್ಯತ್ಯಾಸ ಅದೇ ಆಗಿತ್ತು.

ಮೆಲ್ಲನೆ ಬಾಗಿಲಿಗೆ ಹಾಕಿದ್ದ ಬೀಗವನ್ನು ತೆಗೆದೆ. ಬಾಗಿಲನ್ನು ದೂಡಿ ಒಳಹೊಕ್ಕೆ. ಕೂಡಲೇ ನಿಶ್ಚೇಷ್ಟನಾಗಿ ನಿಂತುಬಿಟ್ಟೆ. ಆದರೆ ಸ್ವಲ್ಪವೂ ಭಯ ಪಡಲಿಲ್ಲ.

ಬೆಳ್ಳನೆಯ ಗೋಡೆಗಳೆಲ್ಲಾ ನೀಲಿಯಾಗಿ ಕಾಣುತ್ತಿದ್ದವು. ಆ ಕಾಂತಿ ಲಾಂದ್ರದಿಂದಲೇ ಬರುತ್ತಿತ್ತು. ಎರಡಂಗುಲ ಬತ್ತಿಯಿಂದ ನೀಲಿ ಕಾಂತಿ ಹೊರಹೊಮ್ಮುತ್ತಿತ್ತು..... ಆಶ್ಚರ್ಯದಿಂದ ನಿಂತಲ್ಲಿಯೇ ನಿಂತುಬಿಟ್ಟೆ.

ನಾನು ಕೆರೊಸಿನ್‌ಗಾಗಿ ಹೊರಗೆ ಹೋದಾಗ ಈ ಲಾಂದ್ರವನ್ನು ಯಾರು ಹಚ್ಚಿದರು? ಈ ನೀಲಿಬಣ್ಣದ ಕಾಂತಿ ಎಲ್ಲಿಂದ ಬರುತ್ತಿದೆ?.....

ಅರ್ಧ ಗಂಟೆಯ ನಂತರ ನನಗನ್ನಿಸಿತು..... ನಲ್ಲಿ ಹೇಗೆ ನೀರನ್ನು ಸುರಿಸಿತೋ ಇದೂ ಹಾಗೆಯೇ..... ಅಂತ!

ಆದರೆ ಇಂತಹ ಕೆಲಸಗಳಿಂದ ಯಾರಿಗೇನು ಪ್ರಯೋಜನ ಎಂಬ ವಿಷಯ ಇನ್ನೂವರೆಗೆ ಇತ್ಯರ್ಥವಾಗಲಿಲ್ಲ ಮತ್ತೆ.....!

★ ★ ★



ಹೆತ್ತ ತಾಯಿ ಅಲ್ಲದೆ, ಮತ್ತಿಬ್ಬರ ಮಾತೆಯರ ಮುದ್ದಿನ ಪುತ್ರಿ ಶ್ರೀಮತಿ ಶರ್ವಾಣಿ. ಕನ್ನಡ ಮಾತೆ ಮತ್ತು ತೆಲುಗು ತಾಯಿಯರ ಆಶೀರ್ವಾದಗಳನ್ನು ಸಮಾನವಾಗಿ ಪಡೆದು, ತಾವು ಆಸ್ವಾದಿಸಿದ ಸಾಹಿತ್ಯ ಪರಿಮಳವನ್ನು ಕನ್ನಡ ಮತ್ತು ತೆಲುಗು ಪಾಠಕರಿಗೆ ಹಂಚಿದರು. ಹುಟ್ಟಿದ್ದು- ಕೋಲಾರದಲ್ಲಿ, ಪ್ರವಾಸ- ಆಂಧ್ರದ ಎಲ್ಲ ಎಲ್ಲೆಯವರಿಗೂ... ಬೆಂಗಳೂರಿನ ಜೀವನ ಅವರಿಗೆ ತುಂಬಾ ಪ್ರಿಯವಾದದ್ದು. ಸಾಹಿತ್ಯ ಅವರ ಉಸಿರು. 2000ದಲ್ಲಿ ಅವರು ಉಸಿರು ಬಿಟ್ಟರೂ... ಪರಿಮಳ ಇಲ್ಲೇ ಉಳಿದಿದೆ.

ಆ ಪರಿಮಳವನ್ನು ಹಬ್ಬಿಸುವ ಈ ಪ್ರಯತ್ನದಲ್ಲಿ ಸಹಾಯ ಮಾಡಿದ ಪ್ರಮಿಲರಾವ್‌ಗೆ ಪ್ರೀತಿಪೂರ್ವಕ ಧನ್ಯವಾದಗಳು.

– ಉಮಾರವಿ